# ಶಿಕ್ಷಣ ದರ್ಪಣ

(ಪ್ರಾಯೋಗಿಕ ಸಂಗೀತಶಾಸ್ತ್ರ)

*

ಸಂಪುಟ ೨

ಸಂಪಾದಕರು:

* ವಿ. ರಾಮರತ್ನಂ
* ಎಂ. ವಿ. ರತ್ನ
* ಆರ್. ಎಲ್. ಅನಂತರಾಮ

ಪಠ್ಯಪುಸ್ತಕ ಮಾಲೆ-೭೭

# ಕೀರ್ತನ ದರ್ಪಣ

(ಪ್ರಾಯೋಗಿಕ ಸಂಗೀತಶಾಸ್ತ್ರ : ಸಂಪುಟ-೨)


ಸಂಪಾದಕರು :

ಪ್ರೊ. ವಿ. ರಾಮರತ್ನಂ

ಎಂ. ವಿ. ರತ್ನ

ಆರ್. ಎಲ್. ಅನಂತರಾಮಯ್ಯ








1976

KIRTANA DARPANA Vol. II, compiled and edited by Prof. Smt. M. V. Ratna and Sri R. L. Anantharamaiah, first pub by the Director, Prasaranga, University of Mysore, crown quarto, Price, Rs. 25-00.



ಮೊದಲನೆಯ ಮುದ್ರಣ 1976

ಬೆಲೆ : ರೂ. 25-00

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು–570001
ಪ್ರಕಾಶನ : ಡೈರೆಕ್ಟರ್, ಪ್ರಸಾರಾಂಗ, ಮೈಸೂರು–570012

# ಅರಿಕೆ

ಮೈಸೂರು ವಿಶ್ವವಿದ್ಯಾನಿಲಯದ ಪ್ರಕಾಶನ ಸಮಿತಿಯ ಅಧ್ಯಕ್ಷರಾದ ರಾಷ್ಟ್ರಕವಿ ಕುವೆಂಪು ಅವರು ಕರ್ನಾಟಕ ಸಂಗೀತವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಕನ್ನಡಭಾಷೆಯಲ್ಲಿಲ್ಲದ ಕೃತಿಗಳ ಶುದ್ಧ ಸಾಹಿತ್ಯವನ್ನು ಅರ್ಥ, ಸಾರಾಂಶ, ಸ್ವರಪ್ರಸ್ತಾರಗಳೊಂದಿಗೆ ಒದಗಿಸಬೇಕಾಗಿರುವ ಆವಶ್ಯಕತೆಯನ್ನು ಮನಗಂಡು ಅಂಥ ಪ್ರಯತ್ನವನ್ನು ಕೈಗೊಳ್ಳಬೇಕೆಂದು ಸೂಚಿಸಿದರು. ಆ ಸೂಚನೆಯ ಮೇರೆಗೆ ತೆಲುಗು, ಸಂಸ್ಕೃತ, ತಮಿಳು, ಮೊದಲಾದ ಭಾಷೆಗಳಲ್ಲಿ ರಚಿತವಾಗಿರುವ ಸುಪ್ರಸಿದ್ಧ ಕೀರ್ತನೆಗಳ ಶುದ್ಧರೂಪವನ್ನೂ, ಅವುಗಳಿಗೆ ಅರ್ಥ, ಸಾರಾಂಶ ಮುಂತಾದ ಸಹಾಯಕ ಸಾಮಗ್ರಿಯನ್ನೂ ಕೊಡುವ ಯೋಜನೆ ಹಾಕಿಕೊಂಡೆವು. ಇದಕ್ಕೆ ಆಧಾರವಾಗಿ ಲಲಿತ ಕಲೆಗಳ ಕಾಲೇಜಿನಲ್ಲಿಯೂ, ಇತರ ಸಂಗೀತ ಶಿಕ್ಷಣ ಸಂಸ್ಥೆಗಳಲ್ಲಿಯೂ ಇರುವ ಪಾಠ್ಯಕ್ರಮವನ್ನು ಇಟ್ಟುಕೊಳ್ಳಲಾಗಿದೆ. ಪ್ರಿ-ಯೂನಿವರ್ಸಿಟಿ ಹಂತದ ಶಿಕ್ಷಣ ಕ್ರಮದಲ್ಲಿ ಬೋಧಿಸುವ ರಾಗಗಳಿಗೆ ಪ್ರತಿಯೊಂದಕ್ಕೂ ಮೂರು ಮೂರು ಕೃತಿಗಳನ್ನು ಆರಿಸಿ ಮೊದಲ ಸಂಪುಟದಲ್ಲಿ ಕೊಟ್ಟಿದೆ. ಮುಂದಿನ ಸಂಪುಟಗಳಲ್ಲಿ ಬಿ. ಮ್ಯೂಸಿಕ್ ಹಾಗೂ ಎಂ. ಮ್ಯೂಸಿಕ್ ತರಗತಿಯ ಹಂತದ ಪಾಠ್ಯಭಾಗಗಳನ್ನು ಸೇರಿಸಲಾಗುತ್ತದೆ. ಇದರಿಂದ ಸರಕಾರದ ಶಿಕ್ಷಣ ಇಲಾಖೆಯು ನಡೆಸುವ ಸಂಗೀತ ಪರೀಕ್ಷೆಗಳ ಖಾಸಗಿ ವಿದ್ಯಾರ್ಥಿಗಳಿಗೂ, ವಿಶ್ವವಿದ್ಯಾನಿಲಯದ ಲಲಿತಕಲೆಗಳ ಕಾಲೇಜಿನಲ್ಲಿ ಓದುತ್ತಿರುವವರಿಗೂ, ಸಾಮಾನ್ಯ ಸಂಗೀತ ಅಭ್ಯಾಸಿಗಳಿಗೂ ಸಹಾಯವಾಗುತ್ತದೆಂದು ಆಶಿಸಲಾಗಿದೆ. ಈ ಸಂಪುಟಗಳನ್ನು ಸಿದ್ಧಪಡಿಸಲು ಆದೇಶ ನೀಡಿ ಅವಕಾಶಮಾಡಿಕೊಟ್ಟ ಪ್ರಸಾರಾಂಗದ ನಿರ್ದೇಶಕರಾದ ಡಾ. ಪ್ರಭುಶಂಕರ ಅವರಿಗೆ, ಅವರ ಸಹೋದ್ಯೋಗಿಗಳಿಗೆ, ಸಂಪಾದನ ಸಹಾಯಕರಾದ ಶ್ರೀ ಡಿ. ಕೆ. ಈರೇಗೌಡರಿಗೆ ನಮ್ಮ ಹಾರ್ದಿಕ ಕೃತಜ್ಞತೆಗಳು.

ಈ ಕೃತಿಯನ್ನು ಮುದ್ರಿಸಿಕೊಡಲು ಶ್ರೀ ಮೀರಾ ಪ್ರಿಂಟರ್ಸ್ ಒಡೆಯರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ಪಟ್ಟಿರುವ ಕಷ್ಟ ಅಷ್ಟಿಷ್ಟಲ್ಲ. ಇದು ಸಾಧ್ಯವಾದಷ್ಟು ನಿರ್ದುಷ್ಟವಾಗಿ ಪ್ರಕಟವಾಗಬೇಕೆಂಬ ಆಸೆಯಿಂದ ಅವರು ಬಹಳ ದುಡಿದಿದ್ದಾರೆ. ಅವರಿಗೂ ಅವರ ಸಿಬ್ಬಂದಿ ವರ್ಗಕ್ಕೂ ನಮ್ಮ ವಂದನೆಗಳು.

—ಸಂಪಾದಕರು

# ಪರಿವಿಡಿ

# ಪ್ರವೇಶ

ಸಾಹಿತ್ಯ ಮತ್ತು ಸಂಗೀತ ಆತ್ಮೀಯ ಒಡನಾಡಿಗಳು. ಸರಸ್ವತಿಯ ಎರಡು ಕಣ್ಣುಗಳೆಂದು ಅವು ಪ್ರಸಿದ್ಧವಾಗಿವೆ. ಸಂಗೀತದ ಭಾವಪುಷ್ಟಿಗೆ, ಅರ್ಥವ್ಯಕ್ತಿ ರಸಾನುಭೂತಿಗಳಿಗೆ ಸಾಹಿತ್ಯದ ಸಾಂಗತ್ಯ ಅನಿವಾರ್ಯ ಅಗತ್ಯ. ಆದರೆ ದುರದೃಷ್ಟಕ್ಕೆ, ಬಾಯಿಂದ ಬಾಯಿಗೆ ಹಾದು ಬರುವಾಗ ಸಾಹಿತ್ಯ ರೂಪಗಳು ಕೆಟ್ಟು ಎಷ್ಟೋವೇಳೆ ಆಭಾಸಕಾರಕವಾಗಿ ಕಾಣುವುದುಂಟು. ಅಪದ್ಧಸಾಹಿತ್ಯ ಪ್ರಯೋಗ ಕಿವಿಗೆ ಬಿದ್ದಾಗ ಅಪಸ್ವರ ಕೇಳಿದಷ್ಟೇ ಹಿಂಸೆಯಾಗುತ್ತದೆ. ಆದ್ದರಿಂದ ನಮ್ಮ ವಿದ್ಯಾರ್ಥಿಗಳು ಶಾಸ್ತ್ರೀಯವಾಗಿ ಸಂಗೀತ ಕಲಿಯುವಾಗ ಮಹಾ ವಾಗ್ಗೇಯಕಾರರು ರಚಿಸಿದ ಕೃತಿಗಳ ಶುದ್ಧರೂಪವನ್ನು ಕಲಿಯಬೇಕು ಎಂಬ ಹಿರಿದಾಶೆಯಿಂದ ಈ ಸಂಪುಟಗಳನ್ನು ಸಿದ್ಧಪಡಿಸುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

ತಮಿಳು, ತೆಲುಗು, ಮಳೆಯಾಳ ಭಾಷೆಗಳಲ್ಲಿ ವಾಗ್ಗೇಯಕಾರರ ಕೃತಿಗಳನ್ನು ಸಂಪಾದಿಸಿ ಪ್ರಸ್ತಾರಸಹಿತ ಪ್ರಕಟಿಸಿರುವ ಬೇಕಾದಷ್ಟು ಕೃತಿಗಳಿವೆ. ಸ್ವಾತಿ ತಿರುನಾಳ್ ಕೃತಿ ಪ್ರಕಟಣ ಸಮಿತಿ, ತ್ರಿವೇಂದ್ರಂ ; ಮ್ಯೂಸಿಕ್ ಅಕಾಡಮಿ, ಮದರಾಸು ; ತಿರುಪತಿಯ ದೇವಸ್ಥಾನ ಪ್ರಕಟನಾ ಮಂಡಲಿ ಮುಂತಾದುವು ಇಂಥ ಕೆಲವು. ಗಾಯಕಲೋಚನಂ, ಗಾನೇಂದುಶೇಖರಂ, ಗಾಯಕಸಿದ್ಧಾಂತಂ, ಗಾನಭಾಸ್ಕರ, ಸಂಗೀತ ರತ್ನಾವಳಿ, ಸಂಗೀತ ಸುಧಾಂಬುಧಿ, ಸಂಗೀತಕಲಾ ಪ್ರದರ್ಶಿನಿ ಮುಂತಾದ ಹಲವಾರು ಸಂಕಲನಗಳು ಈ ಉಪಯುಕ್ತ ಕೆಲಸವನ್ನು ಮಾಡಿವೆ. ಸ್ವರಪ್ರಸ್ತಾರ ಸಹಿತವಾಗಿ ಕೃತಿಗಳನ್ನು ಅಚ್ಚು ಮಾಡುವುದೇ ಕಷ್ಟದ ಕೆಲಸ, ಈ ಅತ್ಯಂತ ಸೂಕ್ಷ್ಮವೂ ಕರಾರುವಾಕ್ಕಾದುದೂ ಆದ ಕೆಲಸವನ್ನು ಅನೇಕ ಕೃತಿಗಳಲ್ಲಿ ಕಾಣಬಹುದು. ಕನ್ನಡದಲ್ಲಿ ಇಂತಹ ಕೆಲಸ ನಡೆದಿರುವುದು ಬಹಳ ಕಡಮೆ. ಮೈಸೂರು ಕೆ. ವಾಸುದೇವಾಚಾರ್ಯರು, ಬಿ. ಕೆ. ಪದ್ಮನಾಭರಾಯರು, ಗಾನಕಲಾಸಿಂಧು ಎನ್. ಚನ್ನಕೇಶವಯ್ಯನವರು, ಗಾನ ವಿದ್ಯಾಸಾಗರ ಆರ್. ಆರ್. ಕೇಶವಮೂರ್ತಿಯವರು, ವೀಣಾ ವಿದ್ವಾನ್ ಎಲ್. ರಾಜಾರಾಯರು, ರಾಳ್ಲಪಲ್ಲಿ ಅನಂತ ಕೃಷ್ಣಶರ್ಮರು, ಬೆಳಕವಾಡಿ ಶ್ರೀನಿವಾಸಯ್ಯಂಗಾರ್ಯರು ಮತ್ತು ಮಕ್ಕಳು, ಶ್ರೀ ತಿಟ್ಟೆಕೃಷ್ಣಯ್ಯಂಗಾರ್ಯರು ಮುಂತಾದ ಅನೇಕ ಜನ ಮಹನೀಯರು ವೈಯಕ್ತಿಕ ಹಂತದಲ್ಲಿ ಗಣನೀಯ ಪ್ರಮಾಣದಲ್ಲಿ ಕೆಲಸ ಮಾಡಿದ್ದಾರೆ. ಮೈಸೂರಿನ ಸಂಗೀತ ಕಲಾಭಿವರ್ಧಿನೀ ಸಭಾ ಹಾಗೂ ಬೆಂಗಳೂರಿನ ಕರ್ನಾಟಕ ಗಾನಕಲಾ ಪರಿಷತ್ತು, ಗುರುಗುಹ ಗಾನನಿಲಯ ಇವು ತಮ್ಮ ಅಮೂಲ್ಯ ಪ್ರಕಾಶನಗಳ ಮೂಲಕ ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿವೆ.

ಲಲಿತಕಲಾ ಕಾಲೇಜಿನ ಹಾಗೂ ಇತರ ಕಾಲೇಜುಗಳ ವಿದ್ಯಾರ್ಥಿಗಳು ಪ್ರೀ-ಯೂನಿವರ್ಸಿಟಿ, ಬಿ. ಮ್ಯೂಸಿಕ್, ಎಂ. ಮ್ಯೂಸಿಕ್ ತರಗತಿಗಳಲ್ಲಿ ಕಲಿಯಬೇಕಾಗಿರುವ ಪಾಠ್ಯಕ್ರಮವನ್ನು ಗಮನದಲ್ಲಿಟ್ಟುಕೊಂಡು ಸಾಕಷ್ಟು ಆಯ್ಕೆಯ ಅವಕಾಶವಿರುವ ಹಾಗೆ ಪ್ರತಿಯೊಂದು ರಾಗದಲ್ಲಿಯೂ ಮೂರು ಮೂರು ಕೃತಿಗಳನ್ನು ಸ್ವರಪ್ರಸ್ತಾರ ಸಹಿತ, ಅರ್ಥ ತಾತ್ಪರ್ಯ ಸಹಿತ ಕನ್ನಡ ಲಿಪಿಯಲ್ಲಿ ಸಂಪುಟಗಳಾಗಿ ಪ್ರಕಟಿಸಬೇಕೆಂಬುದು ನಮ್ಮ ಅಪೇಕ್ಷೆ. ಅಲ್ಲದೆ ಪದಶಃ ಅರ್ಥವನ್ನು ತಿಳಿಯದೆ ಹಾಡುವಾಗ ಪದ ವಿಭಜನೆ ತಪ್ಪಾಗಿ ಅರ್ಥವ್ಯಕ್ತಿ ಕೆಡುತ್ತದೆ. ಅದಕ್ಕೆ ಅವಕಾಶವಾಗದಂತೆ ಸಾಧ್ಯವಾದಮಟ್ಟಿಗೆ ಅನ್ವಯ ಕ್ರಮದಲ್ಲಿ ಅರ್ಥವನ್ನು ಕೊಟ್ಟಿದೆ.

ಪ್ರತಿಯೊಂದು ಕೃತಿಗೂ ಮೊದಲು ಸಾಹಿತ್ಯವನ್ನು ಕೊಟ್ಟು, ಆಮೇಲೆ ಅನ್ವಯಕ್ರಮದಲ್ಲಿ ಪ್ರತಿಪದಾರ್ಥವನ್ನು ನಿರೂಪಿಸಿ, ಸಾರಾಂಶವನ್ನು ಕೊಟ್ಟು ಆಮೇಲೆ ಸ್ವರಪ್ರಸ್ತಾರವನ್ನು ಕೊಟ್ಟಿದೆ. ಇದು ವಿದ್ಯಾರ್ಥಿಗಳಿಗೂ, ಸಂಗೀತ ಪ್ರೇಮಿಗಳಿಗೂ ತುಂಬ ಉಪಯುಕ್ತವಾಗುತ್ತದೆಂದು ಆಶಿಸುತ್ತೇವೆ. ಈಗಾಗಲೇ ಮೈಸೂರು ವಿಶ್ವವಿದ್ಯಾನಿಲಯ ಕರ್ಣಾಟಕ ಸಂಗೀತದ ತಾತ್ವಿಕ ಕ್ಷೇತ್ರದಲ್ಲಿ ಕರ್ಣಾಟಕ ಸಂಗೀತ ಸುಧಾ ಮುಂತಾದ ಕೃತಿಗಳನ್ನು ಪ್ರಕಟಿಸಿದೆ. ಪ್ರಾಯೋಗಿಕ ಕ್ಷೇತ್ರದಲ್ಲಿ ಈ ಕೃತಿ ಸಂಪುಟಗಳು ಉಪಯುಕ್ತವಾಗುತ್ತವೆಂದು ಆಶಿಸಿದೆ. ಈ ಮಾಲಿಕೆಯ ಮೂರನೆಯ ಸಂಪುಟವು ಎಂ. ಮ್ಯೂಸಿಕ್ ಪದವಿ ತರಗತಿಯ ಪಾಠ್ಯಭಾಗವನ್ನು ಒಳಗೊಳ್ಳುತ್ತದೆ. ಅದು ಈಗ ಮುದ್ರಣಕ್ಕೆ ಸಿದ್ಧವಾಗುತ್ತಿದೆ. ಈಗ ಒಂದೊಂದು ರಾಗದಲ್ಲೂ ಮೂರು ಕೃತಿಗಳನ್ನು ಮಾತ್ರ ಕೊಟ್ಟಿರುವುದರಿಂದ, ಮುಂದೇ ಇದೇ ರಾಗ

ಗಳಲ್ಲಿ ಇನ್ನೂ ಹತ್ತಾರು ಕೃತಿಗಳನ್ನು ಶುದ್ಧರೂಪದಲ್ಲಿ ಒದಗಿಸಿ ಅಭ್ಯಾಸಿಗಳಿಗೆ ಆಯ್ಕೆಯ ಅವಕಾಶವನ್ನು ವಿಸ್ತಾರವಾಗುವಂತೆ ಮಾಡಬೇಕೆಂಬ ಅಪೇಕ್ಷೆ ಇದೆ.

ಈ ಸಂಪುಟದಲ್ಲಿ ಆರಿಸಿಕೊಂಡಿರುವ ಕೃತಿಗಳಿಗೆ ಉಪಯೋಗಿಸಿರುವ ಆಕರಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಸೂಚಿಸಿದೆ :

| | | |
|---|---|---|
| 1. | ಸಂಗೀತ ಸಂಪ್ರದಾಯ ಪ್ರದರ್ಶಿನಿ | ಸುಬ್ಬರಾಮ ದೀಕ್ಷಿತರು |
| 2. | ಗಾನಭಾಸ್ಕರ | ಕೆ. ವಿ. ಶ್ರೀನಿವಾಸ ಅಯ್ಯಂಗಾರ್ |
| 3. | ಪಲ್ಲವಿ ಸ್ವರಕಲ್ಪವಲ್ಲಿ | ವೀಣಾ ಕುಪ್ಪಯ್ಯರ್ |
| 4. | ತ್ಯಾಗರಾಜ ಹೃದಯ (3 ಭಾಗಗಳು) | ಕೆ. ವಿ. ಶ್ರೀನಿವಾಸ ಅಯ್ಯಂಗಾರ್ |
| 5. | ಸಂಗೀತ ಸುಧಾಂಬುಧಿ | ,, |
| 6. | ಸಂಗೀತ ರತ್ನಾವಳಿ | ,, |

* * * * *

ಪ್ರಸ್ತುತ ಸಂಪುಟದಲ್ಲಿ 6 ಜತಿಸ್ವರಗಳು, 7 ಸ್ವರಜತಿಗಳು, 12 ತಾನವರ್ಣಗಳು, 6 ಪದವರ್ಣಗಳು, 35 ರಾಗಗಳಿಗೆ ಸೇರಿದ 105 ಕೃತಿಗಳು, ತ್ಯಾಗರಾಜರ ಪಂಚರತ್ನ ಕೀರ್ತನೆಗಳು, 6 ರಾಗಮಾಲಿಕೆಗಳು, 6 ಕ್ಷೇತ್ರಯ್ಯ ಪದಗಳು, 6 ಜಾವಳಿಗಳು, 8 ದೇವರನಾಮಗಳು, 7 ವಚನಗಳು ಮತ್ತು 11 ತಿಲ್ಲಾನಗಳು ಸೇರಿವೆ. ಇವೆಲ್ಲ ಕೂಡಿ ಬಿ. ಮ್ಯೂಸಿಕ್ ಮೂರೂ ವರ್ಷಗಳ ಪಾಠ್ಯಭಾಗಗಳನ್ನು ಒಳಗೊಂಡಂತಾಗುತ್ತದೆ.

* * * * *

**ರಾಗ ಪರಿಚಯ :**

1 **ಭೌಳಿ :** ಈ ರಾಗವು ಸ ರಿ ಗ ಪ ದ ಸಾ–ಸ ನಿ ದ ಪ ಗ ರಿ ಸಾ ಎಂಬ ಔಡವ–ಷಾಡವ ಶ್ರೇಣಿಯನ್ನು ಹೊಂದಿ 15ನೇ ಮೇಳವಾದ ಮಾಯಾಮಾಳವಗೌಳದಲ್ಲಿ ಜನ್ಯರಾಗವಾಗಿದೆ. ಈ ರಾಗದಲ್ಲಿ ಷಡ್ಜ, ಶುದ್ಧ ರಿಷಭ, ಅಂತರಗಾಂಧಾರ, ಪಂಚಮ, ಶುದ್ಧ ಧೈವತ, ಕಾಕಲಿನಿಷಾದ ಸ್ವರಗಳು ಬರುತ್ತವೆ. ದ್ವಿತೀಯ ಘನಪಂಚಕಕ್ಕೆ ಸೇರಿದ ಈ ರಾಗ ರಕ್ತಿರಾಗವೂ ಮತ್ತು ಮಂಗಳಕರವಾದ ರಾಗವೂ ಹೌದು. ರಿ, ಗ, ದ ಸ್ವರಗಳು ರಾಗ ರಂಜಕ ಸ್ವರಗಳು. ಬೆಳಿಗ್ಗೆ ವೇಳೆಯಲ್ಲಿ ಹಾಡಿದರೆ ರಂಜನೀಯ. ಮೇಲುಕೋವಯ್ಯ–ಎಂಬ ತ್ಯಾಗಯ್ಯನವರ ರಚನೆಯೂ, ಪಾರ್ವತಿನಾಯಕ–ಎಂಬ ಆದಿತಾಳದ ಸ್ವಾತಿ ತಿರುನಾಳ್ ಮಹಾರಾಜರು ರಚಿಸಿದ ರಚನೆಯೂ ಪ್ರಸಿದ್ಧವೂ ಜನಪ್ರಿಯವೂ ಆಗಿವೆ.

ಸಂಚಾರ : ಪಗರಿಗರಿಸಾ ರಿಸನಿದಾ ದಸರಿಗಾ ಗಪದಪದಾ ಪಗಪದಸಾ ಪದಸರಿಗಾ ರಿಪಗರಿಸಾ ಸನಿದಾ ಪದಾ ದಪಗಪಗರೀ ಪಗರಿಸಾ

2 **ಶ್ರೀರಾಗ :** ಈ ರಾಗವು ಆಧುನಿಕ ಲಕ್ಷಣರೀತ್ಯಾ 22ನೇ ಖರಹರಪ್ರಿಯದಲ್ಲಿ ಜನ್ಯವಾಗಿ ಷಾಡವ ವಕ್ರಸಂಪೂರ್ಣ ರಾಗ ಎನಿಸಿದೆ. ಘನರಾಗಗಳ ಗುಂಪಿಗೆ ಸೇರಿದ ರಾಗ. ಗ ಮತ್ತು ದ ಗಳು ಆರೋಹಣದಲ್ಲಿ ವರ್ಜ್ಯ. ಈ ರಾಗದ ಸ್ವರ ಶ್ರೇಣಿಯಲ್ಲಿ ಮೇಳೈಸತಕ್ಕ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಶ್ರುತಿ ಧೈವತ, ಮತ್ತು ಕೈಶಿಕಿ ನಿಷಾದಗಳು. ರಿಷಭವು ಅಂಶಸ್ವರ ಸಾರ್ವಕಾಲಿಕ ಮಂಗಳಕರ ರಾಗ. ಶ್ರೇಣಿಯು ಸರಿಮಪನಿಪ–ಸನಿಪದನಿ ಪಮರಿಗಾರಿಸ ಎಂದಿರುತ್ತದೆ. ತ್ಯಾಗರಾಜರ ರಚನೆಗಳಲ್ಲಿ "ಪದನಿ" ಪ್ರಯೋಗವು ಕಂಡುಬರುವುದಿಲ್ಲ. ಪ್ರಸಿದ್ಧ ರಚನೆಗಳು ಈ ರಾಗದಲ್ಲಿ ಯಾವುವೆಂದರೆ,

| | | | |
|---|---|---|---|
| ವರ್ಣ | ಸಾಮಿನಿನ್ನೆ | ಆದಿ | |
| ಕೀರ್ತನೆ | ನಾಮಕುಸುಮ | ಆದಿ | ತ್ಯಾಗರಾಜರು |
| ,, | ಶ್ರೀಮೂಲಾಧಾರ | ,, | ದೀಕ್ಷಿತರು |

| | | | |
|---|---|---|---|
| ಕೀರ್ತನೆ | ವನಜಾಸನ | ರೂಪಕ | ಸುಬ್ಬರಾಯಶಾಸ್ತ್ರಿ |
| ,, | ಶ್ರೀಕಮಲಾಂಬಿಕೆ | ಖಂಡಏಕ | ದೀಕ್ಷಿತರು |
| ಪಂಚರತ್ನ ಕೃತಿ | ಎಂದರೋ ಮಹಾನುಭಾವುಲು | ಆದಿ | ತ್ಯಾಗರಾಜರು |

ಸಂಚಾರ : ರೀಗರಿಸನಿಧಾನಿಸ_ಸಾರಿಗರಿಸನಿಪ_ರಿಮಾಪನಿಪ_ಪನಿಸನಿಸಾ_ನಿಸರಿಗಾರಿಸನಿಪಾ, ರಿಗರಿಸಾನಿಪದನಿಪಮ_ರಿಗಾರಿಸ

3 ಆರಭಿ : ಇದು 29ನೇ ಧೀರ ಶಂಕರಾಭರಣದಲ್ಲಿ ಜನ್ಯ. ಸ ರಿ ಮ ಪ ದ ಸ-ಸ ನಿ ದ ಪ ಮ ಗ ರಿ ಸ ಎಂದು ಶ್ರೇಣಿಯನ್ನು ಹೊಂದಿರುವ ಈ ರಾಗ ಔಡವ_ಸಂಪೂರ್ಣ ರಾಗ. ಆರೋಹದಲ್ಲಿ ಗಾಂಧಾರ ನಿಷಾದಗಳನ್ನು ವರ್ಜ್ಯಮಾಡಿ ಘನರಾಗಗಳ ಗುಂಪಿಗೆ ಸೇರಿದ ಉಪಾಂಗ ರಾಗ. ರಿ ಮ ದ ಗಳು ಜೀವಸ್ವರಗಳು. ಷಡ್ಜ ಮತ್ತು ಪಂಚಮಗಳಲ್ಲದೆ ಚ-ರಿ, ಅಂ-ಗಾಂ, ಶು-ಮ, ಚ-ದೈ, ಕಾ-ನಿ. ಗಳು ಈ ರಾಗದ ಸ್ವರಗಳು. ಜಂಟಿಸ್ವರ ಪ್ರಯೋಗಗಳು ರಂಜನೀಯ.

| | | | |
|---|---|---|---|
| ಗೀತ | ರೇರೇ ಶ್ರೀರಾಮ | ತ್ರಿಪುಟ | |
| ವರ್ಣ | ಸರಸಿಜಮುಖಿ | ಆದಿ | ಪಲ್ಲವಿ ದೊರೆಸ್ವಾಮಯ್ಯರ್ |
| ಕೀರ್ತನೆ | ಪಾಹಿಪರ್ವತ | ಆದಿ | ಸ್ವಾತಿ ತಿರುನಾಳ್ |
| ,, | ಚಾಲಕಲ್ಲಲಾಡುಕೊನ್ನ | ,, | ತ್ಯಾಗರಾಜ |
| ,, | ಓ ರಾಜೀವಾಕ್ಷ | ಛಾಪು | ,, |
| ,, | ಸಾಧಿಂಚನೆ | ಆದಿ | ,, |
| ,, | ಅನಂತ ಪದ್ಮನಾಭ | ,, | ಮುತ್ತಯ್ಯ ಭಾಗವತರು. |

ಸಂಚಾರ : ದಪಾಮಗರಿಸರೀ_ಸರಿಮಗರೀ ಸನಿಧಾ_ಧಸರಿಪಮಗರೀ_ಮಪದಸಾನಿದಾ_ದದಸಸರಿರಿಸನಿದಾ_ ರೀಸಮಗರೀ_ರಿಸರೀದಸಾಪದಾ_ಮಪಮಗರೀ ಧಧರೀಧಸಾ.

4 ರಾಮಪ್ರಿಯ : 52ನೇ ಜನಕರಾಗವಾದ ರಾಮಪ್ರಿಯವು ಕ್ರಮ ಸಂಪೂರ್ಣ ಶ್ರೇಣಿಯನ್ನು ಹೊಂದಿ, ಶು–ರಿ, ಅಂ_ಗಾಂ, ಪ್ರ–ಮ, ಚ–ದೈ, ಕೈ–ನಿ ಗಳಾದ ವಿಕೃತಿ ಸ್ವರಗಳೊಂದಿಗೆ ಸ. ಮತ್ತು ಪ ಗಳಾದ ಪ್ರಕೃತಿ ಸ್ವರಗಳನ್ನು ಹೊಂದಿದೆ.

5 ಸಿಂಹೇಂದ್ರ ಮಧ್ಯಮ : 10ನೇ ಚಕ್ರದಲ್ಲಿ 3ನೆಯದಾದ ಈ ರಾಗವು 57ನೇ ಜನಕರಾಗ. ಸ ಮತ್ತು ಪ ಗಳೊಡನೆ ಚ-ರಿ, ಸಾ_ಗಾಂ, ಪ್ರ–ಮ, ಶು_ದೈ, ಕಾ–ನಿ ಗಳು ಈ ರಾಗದ ಸ್ವರಸ್ಥಾನಗಳು. ಗ_ಮ–ನಿ ಗಳು ಜೀವಸ್ವರಗಳು.

6 ಪುನ್ನಾಗವರಾಳಿ : 8ನೇ ಮೇಳವಾದ ಹನುಮತೋಡಿಯಲ್ಲಿ ಭಾಷಾಂಗ ಜನ್ಯ. ನಿಷಾದಾಂತ್ಯರಾಗ. ಸಂಪೂರ್ಣ ಶ್ರೇಣಿಯಲ್ಲಿ ಕ್ರಮವಾಗಿ ಕೈ–ನಿ, ಷಡ್ಜ, ಶು–ರಿ, ಸಾ_ಗಾಂ, ಶು_ಮ, ಪಂ, ಶು_ದೈ, ಕೈ–ನಿ ಗಳನ್ನು ಹೊಂದಿರುತ್ತದೆ. ಗರಿಗಮಾ ಎಂಬ ಪ್ರಯೋಗದಲ್ಲಿ ಚ_ರಿ ವು ಪ್ರಯೋಗಿಸಲ್ಪಡುತ್ತದೆ. ದೀರ್ಘ ನಿಷಾದ, ಗಾಂಧಾರಗಳು ರಾಗ ಛಾಯಾ ಸ್ವರಗಳು.

7 ಗೌರೀಮನೋಹರಿ : ಮೇಳಕರ್ತ ವ್ಯವಸ್ಥಾಕ್ರಮದಲ್ಲಿ 23ನೇ ಜನಕರಾಗ. ಸಂಪೂರ್ಣ ಆರೋಹ ಅವರೋಹ ಗಳನ್ನು ಹೊಂದಿರುವ ಈ ರಾಗದಲ್ಲಿ ಚ_ರಿ, ಸಾ_ಗಾಂ, ಶು_ಮ, ಪಂ, ಚ_ದೈ, ಕಾ_ನಿಗಳು ಬರುತ್ತದೆ. ರಂಜನೀಯ ವಾದ ಸಾರ್ವಕಾಲಿಕ ರಾಗ.

8 ಲತಾಂಗಿ : 63ನೇ ಜನಕರಾಗ ಲತಾಂಗಿ. 11ನೇ ರುದ್ರ ಚಕ್ರದಲ್ಲಿ ಮೂರನೇ ರಾಗ. ಕ್ರಮ ಸಂಪೂರ್ಣ ಶ್ರೇಣಿಯಲ್ಲಿ ಷಡ್ಜ, ಚ–ರಿ, ಅಂ–ಗಾಂ, ಪ್ರ–ಮ, ಪಂ, ಶು–ದೈ, ಕಾ–ನಿ ಗಳು ಬರುತ್ತವೆ.

9 ವಾಚಸ್ಪತಿ : 64ನೇ ಜನಕರಾಗ. ಕ್ರಮಸಂಪೂರ್ಣ ಆರೋಹ ಅವರೋಹಗಳನ್ನು ಹೊಂದಿರುವ ಈ ರಾಗಕ್ಕೆ ಚ–ರಿ, ಅಂ–ಗಾಂ, ಪ್ರ–ಮ, ಪಂಚಮ, ಚ–ದೈ, ಕೈ–ನಿ ಗಳು ಸ್ವರಸ್ಥಾನಗಳು. ರಂಜನೀಯವಾದ ಪ್ರತಿಮಧ್ಯಮ ಮೇಳ ರಾಗ.

10 ಹುಸೇನಿ : ಸ ರಿ ಗ ಮ ಪ ಮ ಪ ನಿ ದಾ ನಿ ಸ–ಸ ನಿ ದ ಪ ಮಾ ಗ ರಿ ಸ

22ನೇ ಮೇಳದಲ್ಲಿ ಜನ್ಯವಾದ ಹುಸೇನಿಯು ಷಡ್ಜ, ಚ–ರಿ, ಸಾ–ಗಾಂ, ಶು–ಮ, ಪಂ, ಚ–ದೈ, ಕೈ–ನಿ. ಗಳಲ್ಲದೆ ಅನ್ಯಸ್ವರವಾದ ಶುದ್ಧ ದೈವತವನ್ನು ಪದನಿ ಪದಪ, ಸನೀದಪ ಎಂಬ ಪ್ರಯೋಗಗಳಲ್ಲಿ ತೆಗೆದುಕೊಳ್ಳುತ್ತದೆ. ರಿ, ಮ, ನಿ ಗಳು ಜೀವಸ್ವರಗಳು. ವಕ್ರಸಂಪೂರ್ಣರಾಗ.

11 ಅಠಾಣ : ಸ ರಿ ಮ ಪ ನಿ ಸ–ಸ ನಿ ದಾ ಪ ಮ ಪ ಗಾ ಮ ರಿ ಸ . ಎಂದು ಔಡವ ವಕ್ರ ಸಂಪೂರ್ಣ ಶ್ರೇಣಿಯನ್ನು ಹೊಂದಿರುವ ಅಠಾಣ 29ನೇ ಧೀರ ಶಂಕರಾಭರಣದಲ್ಲಿ ಭಾಷಾಂಗ ಜನ್ಯ. ಸ ಮತ್ತು ಪ ಗಳಲ್ಲದೆ ಚ–ರಿ, ಸಾ–ಗಾಂ, ಅಂ–ಗಾ, ಶು–ಮ, ಪಂ, ಚ–ದೈ, ಕೈ–ನಿ ಮತ್ತು ಕಾ–ನಿ ಗಳು ಈ ರಾಗದಲ್ಲಿ ಬರತಕ್ಕ ಸ್ವರಸ್ಥಾನಗಳು ಕೈ. ನಿ ಮತ್ತು ಸಾ–ಗಾಂ ಗಳು ಅನ್ಯಸ್ವರ. ದೈವತವು ಜೀವಸ್ವರ. ವೀರ ರಸಪ್ರಧಾನ ರಾಗ.

12 ಸೌರಾಷ್ಟ್ರ : 17ನೇ ಸೂರ್ಯಕಾಂತದಲ್ಲಿ ಜನ್ಯ. ಸ ರಿ ಗ ಮ ಪ ದ ನಿ ಸ–ಸ ದಾ ಪ ಮ ಗ ರಿ ಸ (ಸ ನಿ ಸ ದಾ ಪ ಮ ಗ ಪ ಮ ಗ ರಿ ಸ) ಭಾಷಾಂಗ ರಾಗ. ಕೈ–ನಿ ಅನ್ಯಸ್ವರ. ಸ, ಪ ಗಳಲ್ಲದೆ ಶು–ರಿ, ಅಂ–ಗಾಂ, ಶು–ಮ, ಚ–ದೈ, ಕಾ–ನಿ ಗಳು ಈ ರಾಗದ ಸ್ವರಸ್ಥಾನಗಳು. ಮಂಗಳಕರ ರಾಗ. ದ ನೀ ದ , ಪ ದ ನಿ ದ ಪಾ, ಸ ನಿ ದ ನೀ ದ ಎಂಬ ಪ್ರಯೋಗಗಳಲ್ಲಿ ಕೈಶಿಕಿ ನಿಷಾದವು ಬರುತ್ತದೆ. ಪ ಮ ದಾ ನಿ ಸ , ಸ ನಿ ದ ನೀ ದ ಪ ಎಂಬ ಪ್ರಯೋಗಗಳು ವಿಶೇಷ ಹಾಗೂ ರಂಜನೀಯ.

13 ಮಲಯ ಮಾರುತ : 16ನೇ ಚಕ್ರವಾಕದಲ್ಲಿ ಷಾಡವ ಜನ್ಯರಾಗ. ಸ ರಿ ಗ ಪ ದ ನಿ ಸ , ಸ ನಿ ದ ಪ ಗ ರಿ ಸ ಎಂದು ಆರೋಹ ಅವರೋಹಗಳು ಮಧ್ಯಮ ವರ್ಜ್ಯವಾಗಿ ಪ್ರಯೋಗಿಸಲ್ಪಡುತ್ತವೆ. ಷಡ್ಜ, ಶು–ರಿ, ಅಂ–ಗಾಂ, ಪಂ, ಚ–ದೈ , ಕೈ–ನಿ ಗಳು ಈ ರಾಗದ ಸ್ವರಸ್ಥಾನಗಳು. ದೈವತವು ಜೀವಸ್ವರ.

14 ಷಣ್ಮುಖಪ್ರಿಯ : 56ನೇ ಜನಕರಾಗ. 10ನೇ ಚಕ್ರದಲ್ಲಿ ಎರಡನೇ ರಾಗ. ಕ್ರಮ ಸಂಪೂರ್ಣ ಶ್ರೇಣಿಯಲ್ಲಿ ಷಡ್ಜ, ಚ–ರಿ, ಸಾ–ಗಾಂ, ಪ್ರ–ಮ, ಪಂ, ಶು–ದೈ, ಕೈ–ನಿ ಗಳು ಸ್ವರ ಸ್ಥಾನಗಳು. ರಿ ಗ ಮ ನಿ ಗಳು ರಾಗ ಛಾಯಾ ಸ್ವರಗಳು.

15 ಶಹನ : 28ನೇ ಹರಿಕಾಂಭೋದಿಯಲ್ಲಿ ಜನ್ಯವಾಗಿ ಉಭಯ ವಕ್ರ ಸಂಪೂರ್ಣರಾಗವಾದ ಶಹನ ಸ ರಿ ಗ ಮ ಪ ಮ ದಾ ನಿ ಸ . ಸ ನಿ ಸ ದ ಪ ಮ ಗಾ ಮ ರಿ ಸ . ಎಂಬ ಸ್ವರಶ್ರೇಣಿಯನ್ನು ಹೊಂದಿರುತ್ತದೆ. ಷಡ್ಜ, ಚ–ರಿ, ಅಂ–ಗಾಂ, ಶ–ಮ, ಪಂ, ಚ–ದೈ, ಕೈ–ನಿ ಗಳು ಈ ರಾಗದ ಸ್ವರಸ್ಥಾನಗಳು.

16 ನಾಟಕುರಂಜಿ : ಸ ರಿ ಗ ಮ ನಿ ದ ನಿ ಪ ದ ನಿ ಸಾ–ಸ ನಿ ದ ಮ ಗ ಮ ಪ ಗ ರಿ ಸಾ ಎಂದು ವಕ್ರ ಆರೋಹ ಅವರೋಹಗಳನ್ನು ಹೊಂದಿರುವ ಈ ರಾಗವು 28ನೇ ಹರಿ ಕಾಂಭೋದಿಯಲ್ಲಿ ಜನ್ಯ, ಷಡ್ಜ, ಚ–ರಿ, ಅಂ–ಗಾಂ, ಶು–ಮ , ಪಂ, ಚ–ದೈ , ಕೈ–ನಿ ಗಳು ಈ ರಾಗದಲ್ಲಿ ಬರತಕ್ಕ ಪ್ರಕೃತಿ ವಿಕೃತಿ ಸ್ವರಗಳು. ಈ ಉಪಾಂಗ ರಾಗದಲ್ಲಿ ಗ . ಮ . ನಿ ಗಳು ರಾಗ ಛಾಯಾ ಸ್ವರಗಳು.

17 ನಾಟ : ಸ ರಿ ಗ ಮ ಪ ದ ನಿ ಸ-ಸ ನಿ ಪ ಮ ರಿ ಸ . ಎಂದು ಸಂಪೂರ್ಣ ಔಡವ ರಾಗವಾದ ಈ ನಾಟರಾಗವು 36 ನೇ ಚಲನಾಟದಲ್ಲಿ ಉಪಾಂಗ ಜನ್ಯ. ಷಡ್ಜ, ಷಟ್‌ಶ್ರುತಿ ರಿಷಭ, ಅಂತರ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಷಟ್‌ಶ್ರುತಿ ಧೈವತ. ಕಾಕಲಿ ನಿಷಾದಗಳು ಈ ರಾಗದ ಸ್ವರಸ್ಥಾನಗಳು. ಘನರಾಗಗಳಲ್ಲಿ ಒಂದು.

18 ಮುಖಾರಿ : ಸ ರಿ ಮ ಪ ನಿ ದ ಸ-ಸ ನಿ ದ ಪ ಮ ಗ ರಿ ಸ. ಎಂದು ಆರೋಹ ಅವರೋಹಗಳನ್ನು ಹೊಂದಿರುವ ಮುಖಾರಿಯು 22ನೇ ಖರಹರ ಪ್ರಿಯದಲ್ಲಿ ಭಾಷಾಂಗಜನ್ಯ. ವಕ್ರ-ಷಾಡವ ಸಂಪೂರ್ಣರಾಗ. ಪ್ರಕೃತಿ ಸ್ವರಗಳೊಂದಿಗೆ ಚ-ರಿ, ಸಾ-ಗಾಂ, ಶು-ಮ, ಚ-ಧೈ, ಶು-ಧೈ, ಕೈ-ನಿಗಳು ಈ ರಾಗದಲ್ಲಿ ಬರತಕ್ಕ ಸ್ವರಗಳು. ರಿ . ಗ . ದ . ನಿ ಗಳು ರಾಗ ಛಾಯ ಸ್ವರಗಳು. ನಿ ದ ಮ, ಪ ದ ಸ ಎಂಬ ಪ್ರಯೋಗಗಳು ವಿಶೇಷ ಪ್ರಯೋಗಗಳು. ಸ ನಿ ದ ಸಾ, ರಿ ಮ ಪ ನಿ ದ ಪಾ, ಮ ಪ ದ ಪ ಎಂಬ ಪ್ರಯೋಗಗಳಲ್ಲಿ ಅನ್ಯಸ್ವರ ಶುದ್ಧ ಧೈವತವು ಬರುತ್ತದೆ. ಪ್ರಾಚೀನ ಶೋಕ ರಸಪ್ರಧಾನ ರಾಗ.

19 ಮಧ್ಯಮಾವತಿ : ಸ ರಿ ಮ ಪ ನಿ ಸ-ಸ ನಿ ಪ ಮ ರಿ ಸ ಎಂದ ಶ್ರೇಣಿಯನ್ನು ಹೊಂದಿರುವ ಔಡವ ರಾಗವಾದ ಮಧ್ಯಮಾವತಿ 22 ನೇ ಮೇಳವಾದ ಖರಹರ ಪ್ರಿಯದಲ್ಲಿ ಜನ್ಯ ಉಪಾಂಗ ರಾಗ. ಷಡ್ಜ, ಚ-ರಿ, ಶು-ಮ, ಪಂ, ಕೈ-ನಿ ಗಳು ಈ ರಾಗದ ಸ್ವರ ಸ್ಥಾನಗಳು. ಮಂಗಳಕರವಾದ ರಾಗ.

20 ವಸಂತ : ಸ ಮ ಗ ಮ ದ ನಿ ಸ-ಸ ನಿ ದ ಮ ಗ ರಿ ಸ. ಆಧುನಿಕರ ರೀತ್ಯಾ 17 ನೇ ಮೇಳ ಸೂರ್ಯಕಾಂತದಲ್ಲಿ ಜನ್ಯ. ವಕ್ರ ಔಡವ ಷಾಡವ ರಾಗ. ಉಪಾಂಗ ರಾಗವಾದ ವಸಂತದಲ್ಲಿ ಗಾಂಧಾರ, ಮಧ್ಯಮ, ಧೈವತಗಳು ರಾಗ ಛಾಯಾ ಸ್ವರಗಳು. ಸಮ ಗಮ, ದನಿದಮಗಳು ರಂಜಕ ಪ್ರಯೋಗಗಳು. ಷಡ್ಜ, ಶು-ರಿ, ಅಂ-ಗಾ, ಶು-ಮ ಪಂ, ಚ-ಧೈ, ಕಾ-ನಿ ಗಳು ಈ ರಾಗದ ಸ್ವರಸ್ಥಾನಗಳು ಪಂಚಮ ವರ್ಜ್ಯ ರಾಗ. ಆರೋಹಣದಲ್ಲಿ ರಿಷಭ ವರ್ಜ್ಯ.

21 ಯದುಕುಲ ಕಾಂಭೋದಿ : ಸ ರಿ ಮ ಪ ದ ಸ-ಸ ನಿ ದ ಪ ಮ ಗ ರಿ ಗ ಸ. ಎಂದು ಶ್ರೇಣಿಯುಳ್ಳ ಈ ರಾಗ 28 ನೇ ಹರಿ ಕಾಂಭೋಜಿಯಲ್ಲಿ ಭಾಷಾಂಗ ರಾಗ. ಷಡ್ಜ ಗ್ರಹಸ್ವರ. ಔಡವ ಸಂಪೂರ್ಣ ರಾಗವಾದ ಈ ರಾಗವು ಗ್ರಾಮ್ಯ ಸಂಗೀತದಿಂದ ಹುಟ್ಟಿ ಬಂದುದೆಂತಲೂ ಕೆಲವರ ಅಭಿಪ್ರಾಯ. ಸಾರ್ವಕಾಲಿಕ ರಾಗವಾದ ಇದರಲ್ಲಿ ನಿ ಗಳು ಆರೋಹಣದಲ್ಲಿ ವರ್ಜ್ಯ. ಷ, ಚ-ರಿ, ಅಂ-ಗಾಂ, ಶು-ಮ, ಚ-ಧೈ, ಕೈ-ನಿಷಾದಗಳು ಈ ರಾಗದ ಸ್ವರ ಸ್ಥಾನಗಳು. ರಿ . ನಿ ಗಳು ದೀರ್ಘವಾದವು, ಮ, ಧೈ, ಗಾಂ, ನಿ. ಗಳು ಛಾಯಾ ಸ್ವರ.

22 ಕಾಂಭೋಜಿ : ಸ ರಿ ಗ ಮ ಪ ದ ಸ ಸ ನಿ ದ ಪ ಮ ಗ ರಿ ಸ. ಎಂಬ ಶ್ರೇಣಿಯುಳ್ಳ ಇದು 28 ನೇ ಹರಿ ಕಾಂಭೋಜಿಯಲ್ಲಿ ಭಾಷಾಂಗ ಜನ್ಯ. ಷಾಡವ ಸಂಪೂರ್ಣ ರಾಗ. ನಿಷಾದವು ಆರೋಹದಲ್ಲಿ ವರ್ಜ್ಯ. ಮ . ದ . ನಿ ಗಳು ರಾಗ ಛಾಯಾ ಸ್ವರಗಳು. ಸ ನಿ ಪ ದ ಸ ಎಂಬಲ್ಲಿ ನಿಷಾದವು ಅನ್ಯಸ್ವರವಾದ ಕಾಕಲಿ ನಿಷಾದವಾಗಿರುತ್ತದೆ. ಷಡ್ಜ, ಚ-ರಿ, ಅಂ-ಗಾಂ, ಶು-ಮ, ಪಂ, ಚ-ಧೈ, ಕೈ-ನಿ ಮತ್ತು ಕಾ. ನಿಷಾದವು ರಾಗದ ಸ್ವರಗಳು. ಮೂರ್ಛನಾ ಕಾರಕ ರಾಗ.

23 ಕಾನಡ : 22ನೇ ಮೇಳದಲ್ಲಿ ಜನ್ಯ. ಸ ರಿ ಗ ಮ ದ ನಿ ಸ-ಸ ನಿ ಸ ದ ಪ ಮ ಗಾ ಮ ರಿ ಸ ಎಂದು ಆರೋಹ ಅವರೋಹಗಳನ್ನು ಹೊಂದಿರುವ ಈ ರಾಗದಲ್ಲಿ ಷಡ್ಜ, ಚ-ರಿ, ಸಾ-ಗಾಂ, ಶು-ಮ, ಪಂ, ಚ-ಧೈ, ಕೈ-ನಿ,ಗಳು ಮೇಳೈಸುತ್ತವೆ. ಷಾಡವ-ವಕ್ರಸಂಪೂರ್ಣರಾಗ. ಗ. ದ. ನಿಗಳು ರಾಗಛಾಯಾಸ್ವರಗಳು. ದೀರ್ಘ ಗಾಂಧಾರ, ಮತ್ತು ಧೈವತಗಳು ರಾಗಭಾವವನ್ನು ಸ್ಫುರಿಸುತ್ತವೆ. ಮ ಪ ದ, ನಿ ಸ ಮ ಸ ನಿ ಪ, ದ ನಿ ಪ ಗಳು ರಾಗ ವಿಶೇಷ ಸಂಚಾರಗಳು.

24 ಬೇಗಡೆ : ಸ ಗ ರಿ ಗ ಮ ಪ ದ ಪ ಸಾ-ಸ ನೀ ದ ಪ ಮಾ ಗ ರಿ ಸಾ. 29ನೇ ಧೀರಶಂಕರಾಭರಣದಲ್ಲಿ ಜನ್ಯವಾದ ಈ ರಾಗ ವಕ್ರಷಾಡವ ಸಂಪೂರ್ಣರಾಗ. ಉಪಾಂಗ ರಾಗವಾದ ಈ ಇದರಲ್ಲಿ ಷಡ್ಜ, ಚ-ರಿ, ಅಂ-ಗಾಂ,

ಶು–ಮ, ಪಂ, ಚ–ದೈ, ಕಾ–ನಿ ಗಳು ಬರುತ್ತವೆ. ಮ. ದ. ನಿ ಗಳು ರಾಗ ಛಾಯಾ ಸ್ವರಗಳು. ದ ಪ ಮ ಎಂಬಲ್ಲಿ ಮಧ್ಯಮವು ಸ್ವಲ್ಪ ತೀವ್ರವಾಗಿರುತ್ತದೆ. ಅನುಭವ ವೇದ್ಯವಾದ ರಾಗ. ನಿಷಾದ ಮಧ್ಯಮಗಳು ರಾಗದ ಬಹು ರಂಜನೀಯ ಸ್ವರಗಳಾಗಿ ಪ್ರಯೋಗದಲ್ಲಿ ಅನುಭವ ವೇದ್ಯವಾಗಿ ಹಾಡತಕ್ಕರಾಗ. ಸ ನಿ ದ ನಿ ಸಾ ಎಂಬುದು ರಂಜಕ ಪ್ರಯೋಗ.

25 **ಸಾವೇರಿ :** ಔಡವ ಸಂಪೂರ್ಣ ರಾಗವಾದ ಸಾವೇರಿ 15ನೇ ಮಾಯಾಮಾಳವ ಗೌಳದಲ್ಲಿ ಉಪಾಂಗ ಜನ್ಯ. ಷಡ್ಜ, ಶು–ರಿ, ಅಂ–ಗಾ, ಶು–ಮ, ಪಂ, ಶು–ದೈ, ಕಾ–ನಿ ಗಳು ಈ ರಾಗದ ಸ್ವರಸ್ಥಾನಗಳು. ಗ. ಮತ್ತು ದ ಗಳು ಆರೋಹದಲ್ಲಿ ವರ್ಜ್ಯ. ರಿ ಮ ದ ಗಳು ರಾಗಛಾಯಾಸ್ವರಗಳು. ಬೆಳಿಗ್ಗೆ ವೇಳೆಯಲ್ಲಿ ಶೋಭಿಸತಕ್ಕ ರಾಗ. ಪ್ರಾಚೀನ ಕರುಣಾ ರಸ ಪ್ರಧಾನರಾಗ.

26 **ನೀಲಾಂಬರಿ :** ಸ ರಿ ಗ ಮ ಪ ದ ಪ ನಿ ಸಾ–ಸ ನಿ ಪ ಮ ಗ ರಿ ಗ ಸಾ ಎಂದು ಆರೋಹ ಅವರೋಹ ಹೊಂದಿರುವ ಈ ರಾಗಕ್ಕೆ ಷಡ್ಜ, ಚ–ರಿ, ಅಂ–ಗಾ, ಶು–ಮ, ಪಂ, ಚ–ದೈ, ಕಾ–ನಿ ಮತ್ತು ಕೈಶಿಕಿ ನಿಷಾದಗಳು ರಾಗದಲ್ಲಿ ಬರತಕ್ಕ ಸ್ವರಗಳು. 29ನೇ ಧೀರ ಶಂಕರಾಭರಣದಲ್ಲಿ ಭಾಷಾಂಗ–ಜನ್ಯ ಔಡವ ಉಭಯವಕ್ರ ರಾಗ. ಪನಿದನಿ, ಪ ದ ನಿ ದ ನಿ ಪ ಎಂಬಲ್ಲಿ ಕೈಶಿಕಿನಿಷಾದವು ಅನ್ಯಸ್ವರವಾಗಿರುತ್ತದೆ. ರಿ. ಮ. ನಿ.ಗಳು ರಾಗ ಛಾಯಾಸ್ವರಗಳು. ಮಂದ್ರ ಸ್ಥಾಯಿ ನಿಷಾದಕ್ಕೆ ಕೆಳಗೆ ಸಂಚಾರವಿಲ್ಲ.

27 **ಆನಂದ ಭೈರವಿ :** ಸ ಗ ರಿ ಗ ಮ ಪ ದ ಪ ಸ-ಸ ನಿ ದ ಪ ಮ ಗ ರಿ ಸ ಎಂದು ಆರೋಹ ಅವರೋಹಗಳನ್ನು ಹೊಂದಿರುವ ಈ ರಾಗವು 20 ನೇ ಮೇಳ ರಾಗವಾದ ನಠಭೈರವಿಯಲ್ಲಿ ಭಾಷಾಂಗ ಜನ್ಯ. ಷಡ್ಜ, ಚ–ರಿ, ಸಾ–ಗಾಂ, ಅಂ–ಗಾಂ, ಶು–ಮ, ಪಂ, ಶು–ದೈ, ಚ–ದೈ, ಕೈ–ನಿ, ಮತ್ತು ಕಾ–ನಿ ಗಳು ಈ ರಾಗದಲ್ಲಿ ಬರತಕ್ಕ ಸ್ವರಗಳು. ಮಂದ್ರನಿಷಾದಕ್ಕೆ ಕೆಳಗೆ ಸಂಚಾರವಿಲ್ಲ.

28 **ಕೀರವಾಣಿ :** 21 ನೇ ಮೇಳರಾಗವಾದ ಕೀರವಾಣಿ 4ನೇ ಚಕ್ರದಲ್ಲಿ 3ನೇ ರಾಗ. ಕ್ರಮ ಸಂಪೂರ್ಣ ಶ್ರೇಣಿ ಯಲ್ಲಿ ಷಡ್ಜ, ಚ–ರಿ, ಸಾ–ಗಾಂ, ಶು–ಮ, ಪಂ, ಶು–ದೈ, ಕಾ–ನಿಷಾದಗಳು ಬರುತ್ತವೆ. ರಿ. ಪ. ನಿ ಗಳು ರಾಗಛಾಯಾ ಸ್ವರಗಳು. ರಂಜನೀಯವಾದ ಮೂರ್ಛನಾಕಾರಕ ಮೇಳಗಳಲ್ಲಿ ಒಂದು.

29 **ದರ್ಬಾರು :** ಸ ರಿ ಮ ಪ ದ ನಿ ಸ–ಸ ನೀ ದ ಪ ಮ ರಿ ಗಾ ಗಾ ರಿ ಸ ಷಾಡವ ವಕ್ರ ಸಂಪೂರ್ಣರಾಗ ವಾದ ದರ್ಬಾರ್, ಷಡ್ಜ, ಚ–ರಿ, ಸಾ–ಗಾಂ, ಶು–ಮ, ಪಂ, ಚ–ದೈ, ಮತ್ತು ಕೈಶಿಕಿ ನಿಷಾದಗಳನ್ನು ಸ್ವರಸ್ಥಾನವನ್ನಾಗಿ ಹೊಂದಿರುತ್ತದೆ. ದೀರ್ಘನಿಷಾದ ಗಾಂಧಾರಗಳು ರಾಗಕ್ಕೆ ಹೆಚ್ಚು ಶೋಭೆಯನ್ನೆ ನೀಡುತ್ತವೆ. ಗ. ನಿ ಗಳು ರಾಗಛಾಯಾ ಸ್ವರಗಳು. ಉಪಾಂಗರಾಗ.

30 **ರೀತಿಗೌಳ :** 22ನೇ ಮೇಳವಾದ ಖರಹರ ಪ್ರಿಯದಲ್ಲಿ ಭಾಷಾಂಗ ಜನ್ಯ. ಸ ಗ ರಿ ಗ ಮ ನಿ ದ ಮ ನಿ ನಿ ಸಾ–ಸ ನಿ ದ ಮ ಗ ಮ ಪ ಮ ಗ ರಿ ಸಾ. ಎಂದು ವಕ್ರ ಆರೋಹ ಅವರೋಹಗಳನ್ನು ಹೊಂದಿರುವ ಈ ಶ್ರೇಣಿಯಲ್ಲಿ ಷಡ್ಜ, ಚ–ರಿ, ಸಾ–ಗಾಂ, ಶು–ಮ, ಪಂ, ಚ–ದೈ ಮತ್ತು ಶುದ್ಧ ಧೈವತ ಅನ್ಯಸ್ವರವಾಗಿ ಪ್ರಯೋಗಿಸಲ್ಪಡುತ್ತದೆ. ನಿನಿಸಾ ಎಂಬ ಪ್ರಯೋಗವು ಆರೋಹದಲ್ಲಿಯೇ ಇದ್ದು ರಾಗಭಾವವನ್ನು ಸ್ಫುರಿಸುತ್ತದೆ. ಗಮನಿ ಗಳು ರಾಗ ಛಾಯಾ ಸ್ವರಗಳು ನಿಪನಿನಿಸಾ, ಮನಿನಿಸಾ, ಸಂಚಾರಗಳು ರಕ್ತಿಪ್ರಯೋಗಗಳು. ಘನರಾಗಗಳಲ್ಲಿ ಒಂದು.

31 **ನಾದನಾಮಕ್ರಿಯ :** ನಿಷಾದಾಂತ್ಯರಾಗವಾದ ಇದು 15ನೇ ಮಾಯಾಮಾಳವ ಗೌಳದಲ್ಲಿ ಉಪಾಂಗ ಜನ್ಯ. ಕಾ–ನಿ, ಷಡ್ಜ, ಶು–ರಿ, ಅಂ–ಗಾಂ, ಶು–ಮ, ಪಂ, ಶು–ದೈವತಗಳು ಈ ರಾಗದ ಸ್ವರಸ್ಥಾನಗಳು. ಗ. ಮ. ನಿ ಗಳು ಜೀವಸ್ವರಗಳು. ಸ ರಿ ಗ ಮ ಪ ದ ನಿ ನಿ ದ ಪ ಮ ಗ ರಿ ಸ ನಿ.

32 ಕಮಾಚ್ : ಸ ಮ ಗ ಮ ಪ ದ ನಿ ಸ - ಸ ನಿ ದ ಪ ಮ ಗ ರಿ ಸ ಎಂದು ಶ್ರೇಣಿಯನ್ನು ಹೊಂದಿರುವ ಕಮಾಚ್ 28ನೇ ಮೇಳವಾದ ಹರಿಕಾಂಭೋಧಿಯಲ್ಲಿ ಜನ್ಯ. ವಕ್ರ ಷಾಡವ, ಸಂಪೂರ್ಣರಾಗ. ಸ ಮತ್ತು ಪ ಗಳಲ್ಲದೆ ಚ-ರಿ. ಅಂ-ಗಾಂ, ಶು-ಮ, ಚ-ದೈ, ಕೈ-ನಿ ಗಳು ಈ ರಾಗದ ಸ್ವರಸ್ಥಾನಗಳು. ಭಾಷಾಂಗ ಸ್ವರವಾಗಿ ಕಾಕಲಿ ನಿಷಾದವು ಸನಿಸಾ ಎಂಬ ಪ್ರಯೋಗದಲ್ಲಿ ಬರುತ್ತದೆ. ಸಾಗಮ ಪದನಿಸ ಸಮಗಮ ನಿದನಿಸ ಮಗಸ ಪಾದನಿದಪಮಾಮ, ಗಾಮನಿದ ನಿಪ, ನಿದಪಮಾಮ ನಿದಾನಿಪಾದಮಾ, ಮಾಗಸ, ಮಾನಿದಗಾರಿಸಾ ಎಂಬ ಪ್ರಯೋಗಗಳು ಬಹು ರಂಜನೀಯ.

33 ಮಣಿರಂಗು : ಸ ರಿ ಮ ಪ ನಿ ಸ ಸ ನಿ ಪ ಮ ಗ ರಿ ಸ. ಎಂಬ ಔಡವ ಷಾಡವ ಶ್ರೇಣಿಯಲ್ಲಿ ಷಡ್ಜ, ಚ-ರಿ, ಕೈ-ನಿ ಗಳು ಮೇಳೈಸುತ್ತವೆ. ಆರೋಹದಲ್ಲಿ ಗ-ದ ಗಳೂ ಅರೋಹಣದಲ್ಲಿ ದ ಮಾತ್ರವೂ ವರ್ಜ್ಯ ಸ್ವರಗಳು. ರಿ. ಮ. ನಿ ಶು-ಮ, ಪಂ, ಗಳು ರಾಗದ ಜೀವಸ್ವರಗಳು. ಮಂಗಳಕರವಾದ ಸದಾ ವೇಳೆಯಲ್ಲಿಯೂ ಹಾಡಬಹುದಾದಂತಹ ರಾಗ.

34 ಕೇದಾರ ಗೌಳ : ಈ ರಾಗವು ಸರಿಮಪನಿಸ-ಸನಿದಪಮಗರಿಸ ಎಂದು ಶ್ರೇಣಿಯನ್ನು ಹೊಂದಿ 28ನೇ ಹರಿ ಕಾಂಭೋಧಿಯಲ್ಲಿ ಜನ್ಯ. ಷಡ್ಜ, ಪಂಚಮ, ಚ-ರಿ, ಅಂ-ಗಾಂ, ಶು-ಮ, ಚ-ದೈ ಮತ್ತು ಕೈಶಿಕಿನಿಷಾದ ಸ್ವರಗಳು ಈ ರಾಗದಲ್ಲಿ ಬಳಸುವುದು. ರಿ. ನಿ ಗಳು ರಾಗ ಛಾಯಾಸ್ವರಗಳು. ರಾತ್ರಿವೇಳೆಯಲ್ಲಿ ಹಾಡಿದರೆ ರಂಜಿಸುವ ಈ ರಾಗವು ತ್ರಿಸ್ಥಾಯಿಯಲ್ಲಿಯೂ ವ್ಯಾಪ್ತಿ ಹೊಂದಿರುತ್ತದೆ. ಉಪಾಂಗ ರಾಗ.

| | | | |
|---|---|---|---|
| ವರ್ಣ | ಸಾಮಿ ದಯಚೂಡ | ಆದಿ | ತಿರುವಟ್ಟಿಯೂರ್ ತ್ಯಾಗಯ್ಯರ್ |
| | ವೀರಿಬೋಣಿ | ಜಂಪ | ರುದ್ರಪಟ್ಟಣಂ ವೆಂಕಟರಾಮಯ್ಯ |
| ಕೃತಿಗಳು | ತುಳಸೀಬಿಲ್ವ | ಆದಿ | ತ್ಯಾಗರಾಜ |
| | ವೇಣುಗಾನ ಲೋಲುನಿ | ರೂಪಕ | ತ್ಯಾಗರಾಜ |
| | ನೀಲಕಂಠಂ | ರೂಪಕ | ಮುತ್ತುಸ್ವಾಮಿ ದೀಕ್ಷಿತರು |
| | ಸರಗುಣ ಪಾಲಿಂಪ | ಆದಿ | ರಾಮನಾಡ್ ಶ್ರೀನಿವಾಸಅಯ್ಯಂಗಾರ್ |
| | ರಾಮಾ ಮಾಂ ಪರಿಪಾಲಯ | ಆದಿ | ಸ್ವಾತಿ ತಿರುನಾಳ್ |
| ತರಂಗ | ಮಂಗಳಾಲಯ | ಆದಿ | ನಾರಾಯಣ ತೀರ್ಥ |

35 ಧನ್ಯಾಸಿ : ಔಡವ, ಸಂಪೂರ್ಣವಾದ ಈ ರಾಗವು 8ನೇ ಮೇಳವಾದ ಹನುಮತೋಡಿಯಲ್ಲಿ ಉಪಾಂಗ ಜನ್ಯ. ಈ ರಾಗವು ಸಗಮಪನಿಸ-ಸನಿದಪಮಗರಿಸ ಎಂಬುದಾಗಿ ಶ್ರೇಣಿಯನ್ನು ಹೊಂದಿ ಪ್ರಕೃತಿಸ್ವರಗಳೆರಡರ ಜೊತೆಗೆ ಶು-ರಿ, ಸಾ-ಗಾಂ, ಶು-ಮ, ಶು-ದೈ, ಕೈ ನಿಷಾದಗಳನ್ನೊಳಗೊಂಡಿರುತ್ತದೆ. ಗ. ನಿ ಗಳು ಅಂಶಸ್ವರ. ತ್ರಿಸ್ಥಾಯಿಯಲ್ಲಿ ವ್ಯಾಪ್ತಿಯುಳ್ಳ ಈ ರಾಗ ಬೆಳಗ್ಗೆ ಹಾಡಿದರೆ ಬಹುರಂಜನೀಯವಾಗಿರುತ್ತದೆ.

| | | | |
|---|---|---|---|
| ಪದವರ್ಣ | ಏ ಮಗುವಾ | ಆದಿ | ಮೈಸೂರು ಸದಾಶಿವರಾಯರು |
| ಕೃತಿಗಳು | ಸಂಗೀತಜ್ಞಾನಮು | ಆದಿ | ತ್ಯಾಗರಾಜ |
| | ನೀಚಿತ್ತಮು | ಛಾಪು | ,, |
| | ಮೀನಲೋಚನಿ | ಆದಿ | ಶ್ಯಾಮಾಶಾಸ್ತ್ರಿ |
| | ಜಪಾಕುಸುಮ | ಆದಿ | ಮುತ್ತಯ್ಯ ಭಾಗವತರು |
| | ತಾರಕಮಂತ್ರಮು | ಆದಿ | ಭದ್ರಾಚಲ ರಾಮದಾಸರು |

36 ಗೌಳ : ಔಡವ ವಕ್ರ-ಷಾಡವ ರಾಗವಾದ ಗೌಳವು 15ನೇ ಮಾಯಮಾಳವ ಗೌಳದಲ್ಲಿ ಜನ್ಯ. ಸ. ರಿಮಪ ನಿಸ ಸನಿಪಮ ರಿಗಮರಿಸ ಎಂದು ಪ್ರಚಾರದಲ್ಲಿರುವ ಶ್ರೇಣಿಯಲ್ಲಿ ಷಡ್ಜ, ಶು-ರಿ, ಅಂ-ಗಾಂ, ಶು-ಮ, ಪಂ, ಕಾಕಲಿ ನಿಷಾದ ಮುಂತಾದ ಪ್ರಕೃತಿ ವಿಕೃತಿ ಸ್ವರಗಳು ಬರುತ್ತವೆ. ಗ. ದ ಗಳು ಆರೋಹಣದಲ್ಲಿಯೂ ದೈವತವು ಅವರೋಹಣದಲ್ಲಿಯೂ

ವರ್ಜ್ಯ. ಘನಪಂಚಕ ರಾಗಗಳಲ್ಲಿ ಬಂದು. ಈ ಉಪಾಂಗರಾಗದಲ್ಲಿ ರಿ. ಮ. ನಿ ಗಳು ರಾಗ ಛಾಯಾ ಸ್ವರಗಳು. ಪಮಗ ಮರಿಸ, ಸರಿಗಮರಿಸ, ಸನಿಪಮರಿಸ ಎಂಬುದು ವಿಶೇಷ ಪ್ರಯೋಗ. ಈ ಪ್ರಾಚೀನ ರಾಗವು ತ್ರಿಸ್ಥಾಯಿ ವ್ಯಾಪ್ತಿ ಹೊಂದಿ ಸಾರ್ವಕಾಲಿಕ ರಾಗವಾಗಿ ಮಂಗಳಕರವಾಗಿ ಉಳಿದುಕೊಂಡು ಬಂದಿದೆ. ಈ ರಾಗದಲ್ಲಿ ಪ್ರಸಿದ್ಧ ರಚನೆಗಳು ಯಾವುವೆಂದರೆ,

| | | | |
|---|---|---|---|
| ಪಂಚರತ್ನ ಕೃತಿ | ದುಡುಕುಗಲ | ಆದಿ | ತ್ಯಾಗರಾಜರು |
| ಕೃತಿಗಳು | ಪ್ರಣಮಾಮ್ಯಹಂ | ಆದಿ | ವಾಸುದೇವಾಚಾರ್ಯರು |
| | ಶ್ರೀ ಮಹಾಗಣಪತೇ | ತ್ರಿಪುಟ | ಮುತ್ತುಸ್ವಾಮಿ ದೀಕ್ಷಿತರು |

37 ಭೈರವಿ : 20ನೇ ಮೇಳ ನಠಭೈರವಿಯಲ್ಲಿ ಸಂಪೂರ್ಣ ಜನ್ಯ. ಭಾಷಾಂಗ ರಾಗ. ಷಡ್ಜ, ಚ-ರಿ, ಸಾ-ಗಾಂ, ಶು-ಮ, ಪಂ, ಶು-ದೈ, ಮತ್ತು ಕೈಶಿಕಿ ನಿಷಾದಗಳು ಈ ರಾಗದಲ್ಲಿ ಮೇಳೈಸತಕ್ಕ ಪ್ರಕೃತಿ ವಿಕೃತಿ ಸ್ವರಗಳು. ಚತುಶ್ರುತಿ ದೈವತವು ಅನ್ಯಸ್ವರ. ಆರೋಹಣದಲ್ಲಿ ಚತುಶ್ರುತಿ ದೈವತವೂ ಅವರೋಹಣದಲ್ಲಿ ಶುದ್ಧ ದೈವತವೂ ಬರುತ್ತದೆ. ರಿ. ಗ. ಮ. ನಿ ಗಳು ದೀರ್ಘವಾಗಿ ರಾಗ ಭಾವ ಸ್ಫುರಿಸಲು ಸಹಕಾರಿಯಾಗಿರುತ್ತವೆ. ದೀರ್ಘ ವ್ಯಾಪ್ತಿಯುಳ್ಳ ರಾಗ. ತ್ರಿಸ್ಥಾಯಿ ಸಂಚಾರ ಹೊಂದಿರುವ ಸಾರ್ವಕಾಲಿಕ ಪ್ರಸಿದ್ಧರಾಗ. ಸ. ರಿ. ಗ. ಮ. ಪ. ದ. ನಿ. ಸ. ಸ ನಿ. ದ ಪ. ಮಗ. ರಿಸ. ಎಂದು ಸಂಪೂರ್ಣ ಶ್ರೇಣಿಯನ್ನು ಹೊಂದಿರುತ್ತದೆ. ಪ್ರಸಿದ್ಧ ರಚನೆಗಳೆಂದರೆ :

| | | | |
|---|---|---|---|
| ಸ್ವರಜತಿ | ಕಾಮಾಕ್ಷಿ | ಛಾಪು | ಶ್ಯಾಮಾಶಾಸ್ತ್ರಿ |
| ವರ್ಣ | ವಿರಿಬೋಣಿ | ಅಟ್ಟ | ಆದಿ ಅಪ್ಪಯ್ಯ |
| | ನಿನ್ನುಕೋರಿ | ಆದಿ | ಪೊನ್ನಯ್ಯ |
| ಕೃತಿಗಳು | ಕೋಲುವೈಯುನ್ನಾಡೆ | ಆದಿ | ತ್ಯಾಗರಾಜ |
| | ನೀವಂಟಿ ದೈವಮು | ಆದಿ | ತ್ಯಾಗರಾಜ |
| | ಬಾಲಗೋಪಾಲ | ಆದಿ | ಮುತ್ತುಸ್ವಾಮಿ ದೀಕ್ಷಿತರು |
| | ಇಕನನು ಬ್ರೋವ | ಆದಿ | ಪಲ್ಲವಿ ಶೇಷಯ್ಯರ್ |
| ಅಷ್ಟಪದಿ | ಶ್ರಿತಕಮಲಾ | | |
| | ಕುಚಮಂಡಲ | ಆದಿ | ಜಯದೇವ |
| ಕೃತಿಗಳು | ನೀ ಪಾದಮುಲೆ | ಆದಿ | ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್ |
| ಪದ | ಮುಂಡತಿ | ತ್ರಿಪುಟ | ಕ್ಷೇತ್ರಜ್ಞ |

38 ಶ್ರೀರಂಜಿನಿ : ಇದು 22 ನೇ ಮೇಳ ಖರಹರ ಪ್ರಿಯದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಚತುಶ್ರುತಿ ದೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಪಂಚಮ ವರ್ಜ್ಯ. ಷಾಡವ-ಷಾಡವ. ರಿ ಗ ದ ನಿ ರಾಗಛಾಯಾ ಸ್ವರಗಳು.

| | | | |
|---|---|---|---|
| ಕೆಲವು ರಚನೆಗಳು : ಕೃತಿ | ಮಾರುಬಲ್ಕ | ಆದಿ | ತ್ಯಾಗರಾಜರು |
| | ಭುವಿನೀ ದಾಸುಡನೇ | ಆದಿ | „ |
| | ಬ್ರೋಚೇವಾರೆವರೆ | ಆದಿ | „ |
| | ಸರಿಯೆವ್ವರೆ | ಆದಿ | „ |
| | ಸೊಗಸುಗಾ | ರೂಪಕ | „ |

ಸಂಚಾರ : ರೀ ಗ ಮ ಗ ರಿ ಸಾ ಧ ನಿ ಸ ರಿ ಗ ಮ ರಿ ಗಾ ರಿ ಗ ಮ ದ ನಿ ದಾ ಮ ದ ನಿ ಸಾ ನಿ ಸ ರಿ ಗ ಮ ಗ ರಿ
ಸಾ ಸ ನಿ ಗ ರಿ ಸ ನಿ ದ ಮಾ ಮ ದ ನಿ ದ ಮ ಗಾ ರಿ ರೀ ಗ ರಿ ಸ ನಿ ಧ ನಿ ಸಾ.

39 ಕೇದಾರ : 29 ನೇ ಮೇಳ ಧೀರಶಂಕರಾಭರಣ ಜನ್ಯ. ವಕ್ರಷಾಡವ–ಔಡವ. ಗಮಕ ವರೀಕ ರಕ್ತಿರಾಗ. ದ್ವಿತೀಯ ಘನಪಂಚಕಕ್ಕೆ ಸೇರಿದ್ದು. ರಿ ದ ಆರೋಹಣದಲ್ಲಿಯೂ, ಧೈವತವು ಅವರೋಹಣದಲ್ಲಿಯೂ ವರ್ಜ್ಯ. ಮ ನಿ ಗಳು ರಾಗಛಾಯಾ ಸ್ವರಗಳು. ಸ ಗ ಮ ಪ, ಪಾ ಸ ಸಾ ನಿ ಪಾ, ಸ ರಿ ರಿ ಗಾ ಸ ಇವು ವಿಶೇಷ ಪ್ರಯೋಗಗಳು. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಪಂಚಮ, ಮತ್ತು ಕಾಕಲಿ ನಿಷಾದ ಇವು ಈ ರಾಗದ ಸ್ವರಸ್ಥಾನಗಳು.

| | | | |
|---|---|---|---|
| ಕೆಲವು ರಚನೆಗಳು : ಕೃತಿ | ರಾಮಾ ನೀಸ್ಪೈ | ಆದಿ | ತ್ಯಾಗರಾಜರು |
| | ಮರಚೇವಾಡನಾ | ಆದಿ | ” |
| | ಆನಂದನಟನ | ಖಂಡಏಕ | ದೀಕ್ಷಿತರು |

ಸಂಚಾರ : ಧ ನಿ ನಿ ಸಾ ಸ ಮ ಗ ಮ ಪ ಮ ಗ ಮ ಪ ನಿ ಸಾ ಸ ಮ ಗ ರಿ ಸಾ ಸ ರಿ ರಿ ಗಾ ಸ ಸ ನಿ ಪಾ ಮ
ಗ ಮ ಪ ನಿ ಪ ಸ ಸಾ ನಿ ಪಾ ಮ ಗ ಮ ಪ ನಿ ಪಾ ಮ ಮ ಗ ರಿ ಗ ಸಾ ಸ ನಿ ಧ ನಿ ಸ ಮ ಗ ಮ ಪ
ಸ ನಿ ಪ ಮ ಗ ರಿ ಸ ರಿ ಗಾ ಸ.

40 ಬಿಲಹರಿ : ಇದು 29ನೇ ಮೇಳ ಧೀರಶಂಕರಾಭರಣದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ ಶುದ್ಧಮಧ್ಯಮ, ಪಂಚಮ, ಚತುಶ್ರುತಿ ಧೈವತ, ಕಾಕಲಿ ಮತ್ತು ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಭಾಷಾಂಗ ರಾಗ. ಕೈಶಿಕಿ ನಿಷಾದವು ಅನುಸ್ವರ. ರಿ ದ ನಿ ಗಳು ರಾಗಛಾಯಾ ಸ್ವರಗಳು. ಜಂಟಿ ಮತ್ತು ದಾಟುಸ್ವರಗಳು ರಂಜನೀಯ ಗಮಕ ವರೀಕ ರಕ್ತಿರಾಗ. ಪ್ರಾತಃಕಾಲದ ಹಾಡಿಕೆಗೆ ತುಂಬ ಮನೋರಂಜಕವಾಗಿರುತ್ತದೆ. ಉತ್ಸಾಹವನ್ನು ತುಂಬುವ ರಾಗ. ಪದನಿದಪ, ಪದನಿಪ, ಪನಿದಪ ಎಂಬ ಪ್ರಯೋಗಗಳಲ್ಲಿ ಕೈಶಿಕಿ ನಿಷಾದವು ಬರುತ್ತದೆ.

| | | | |
|---|---|---|---|
| ಕೆಲವು ರಚನೆಗಳು : ಜತಿಸ್ವರ | ಸಾರಿಗಾಪಾ | ಆದಿ | |
| ವರ್ಣ | ಇಂತಚೌಕ | ಆದಿ | ವೀಣಾ ಕುಪ್ಪಯ್ಯರ್ |
| ಕೃತಿ | ನಾ ಜೀವಾಧಾರ | ಆದಿ | ತ್ಯಾಗಯ್ಯ |
| | ದೊರಕುನಾ | ಆದಿ | ,, |
| | ಇಂತಕನ್ನಾನಂದಮೇಮಿ | ರೂಪಕ | ,, |
| | ನರಸಿಂಹ | ಛಾಪು | ,, |
| | ಕಾಮಾಕ್ಷಿ | ಆದಿ | ದೀಕ್ಷಿತರು |
| | ಪರಿದಾನಮಿಚ್ಚಿತೆ | ಝಂಪೆ | ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |
| | ಸಾರಸದಳ | ರೂಪಕ | ತಿರುವಟ್ರಿಯೂರ್ ತ್ಯಾಗಯ್ಯರ್ |
| ತರಂಗ | ಪೂರಯ ಮಮ | ಆದಿ | ನಾರಾಯಣತೀರ್ಥ |
| ಜಾವಳಿ | ಪಾರಿಪೋವಲೆರಾ | ರೂಪಕ | ಪಟ್ಟಾಭಿರಾಮಯ್ಯ |

ಸಂಚಾರ : ಸರಿಪಮಗರಿಸಾ ರಿಗಸರೀಸನಿಧ ಧಗರಿಸದಿದಾ ಸರಿಗಪಾ ರಿಗದಪಮಗರಿಸಾ ರಿಗಪದಸಾ
ನಿಸದನಿಪಾ ದಸರಿಗಾ ಮಗರಿಗಸರೀಸನಿದ ಪಾದನಿಪದಪಾ ಮಗರಿಗ ದಪಮಗರಿಸಾ
ಸನಿನಿದ ಪಧಗರಿಸಾ

41 ಮೋಹನ : ಇದು 28ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಪಂಚಮ, ಚತುಶ್ರುತಿ ಧೈವತ ಇವು ಈ ರಾಗದ ಸ್ವರಗಳು. ಔಡವ–ಔಡವ ಉಪಾಂಗರಾಗ. ನಿ ಮತ್ತು ಮ ವರ್ಜ್ಯ. ಸರ್ವಸ್ವರ ಗಮಕ ವರೀಕ ರಕ್ತಿರಾಗ. ಹಿಂದೂಸ್ಥಾನಿಯ ಭೂಪ್ ರಾಗವು ಇದನ್ನು ಹೋಲುತ್ತದೆ. ರಿ, ಗ,ದ ರಾಗಛಾಯಾ ಸ್ವರಗಳು.

| | | | |
|---|---|---|---|
| ಕೆಲವು ರಚನೆಗಳು : ಗೀತೆ | ವರವೀಣಾ | ಆದಿ | ರಾಮನಾಡ್ ಶ್ರೀನಿವಾಸಯ್ಯಂಗಾರ್ |
| ವರ್ಣ | ನಿನ್ನುಕೋರಿ | ಆದಿ | ತ್ಯಾಗಯ್ಯ |
| ಕೃತಿ | ಭವನುತ | ಆದಿ | ,, |
| | ನನ್ನುಪಾಲಿಂಪ | ಆದಿ | ,, |
| | ಮೋಹನರಾಮ | ಆದಿ | ,, |
| | ಏನ್‌ಪಳ್ಳಿಕೊಂಡಿರಯ್ಯ | ಆದಿ | ಅರುಣಾಚಲಕವಿ |
| | ಕಂಡು ಕಂಡು ನೀ ಎನ್ನ | ಖಂಡಛಾಪು | ಪುರಂದರದಾಸರು |
| | ಮೋಹಮೆಲ್ಲ | ರೂಪಕ | ಪಟ್ಟಾಭಿರಾಮಯ್ಯ |

ಸಂಚಾರ : ಗಾಗರಿ ಸರಿಗರಿ ಗಪದರಿಸದಪಗ ದಪಗರಿಸರಿಗಾರಿಸರೀಧಸಾಪಧಸಸರೀ ಪಗರಿಸಾರಿ ಪದಸದಪಗ ಸಾದಪಗಪದಸಾದಾ ಸರಿಗಾರಿಗರಿರಿಗಾ ದದಪಗರಿಗದಪದಾ ದಪಾಗರಿಪಗರಿಸರೀ ರಿರಿಗಸರಿ ಧಧಪಸರಿಗಾ ರಿಗಸರೀಸಾ.

* * * *

ಈ ಸಂಪುಟದಲ್ಲಿ ಸುಪ್ರಸಿದ್ಧ ವಾಗ್ಗೇಯಕಾರರ ಕೃತಿಗಳನ್ನು ಆರಿಸಿ ಕೊಟ್ಟಿದೆ. ಅವರ ಪರಿಚಯವನ್ನು ಸ್ಥೂಲವಾಗಿ ಈ ಕೆಳಗೆ ಮಾಡಿದೆ :

1. ಮೈಸೂರು ವಾಸುದೇವಾಚಾರ್ಯರು 1865–1961. ಬೆಂಗಳೂರಿನ ಬಳಿಯ ಕಾನಕಾನಹಳ್ಳಿಯಲ್ಲಿ ಜನಿಸಿದರು. ಬಾಲ್ಯದಿಂದಲೇ ಮೈಸೂರಿನ ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ವಿದ್ಯಾಭ್ಯಾಸವನ್ನು ಶಾಸ್ತ್ರೀಯವಾಗಿ ಮಾಡಿದರು. ಮೊದಲಿಗೆ ವೀಣಾ ಪದ್ಮನಾಭಯ್ಯನವರಲ್ಲಿ ಸಂಗೀತಾಭ್ಯಾಸ ಮಾಡಿ, ಶ್ರೀಮನ್ಮಹಾರಾಜರ ಪ್ರೋತ್ಸಾಹ ಪಡೆದು ತಿರುವೈಯಾರಿಗೆ ಹೋದರು. ಅಲ್ಲಿ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರಲ್ಲಿ ಸಂಗೀತದ ಲಕ್ಷ್ಯ ಲಕ್ಷಣ ಗಳನ್ನು ಆಮೂಲಾಗ್ರವಾಗಿ ಕಲಿತರು. ಆಮೇಲೆ ಮೈಸೂರು ರಾಜಾಸ್ಥಾನದಲ್ಲಿ ಆಸ್ಥಾನ ವಿದ್ವಾಂಸರಾದರು. ಇವರ ವಿದ್ವತ್ತನ್ನು ಮೆಚ್ಚಿ 'ಸಂಗೀತ ಶಾಸ್ತ್ರರತ್ನ' ಎಂಬ ಬಿರುದನ್ನು ಮಹಾರಾಜರು ನೀಡಿದರು.

ವಾಸುದೇವಾಚಾರ್ಯರಿಗೆ ಗೇಯರಚನಾ ಪ್ರತಿಭೆ ಜನ್ಮತಃ ಬಂದ ಸಂಪತ್ತು. 'ವಾಸುದೇವ' ಎಂಬ ಅಂಕಿತದಲ್ಲಿ ಮುನ್ನೂರಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಅವುಗಳ ಭಾಷೆ ತೆಲುಗು ಇಲ್ಲವೇ ಸಂಸ್ಕೃತ 'ವಾಸುದೇವ ಕೀರ್ತನ ಮಂಜರಿ' ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. ಮದರಾಸಿನ ಅಡಿಯಾರಿನ ಕಲಾಕ್ಷೇತ್ರದಲ್ಲಿ ತಮ್ಮ ಜೀವನದ ಕೊನೆಯ ಭಾಗವನ್ನು ಕಳೆದ ವಾಸುದೇವಾಚಾರ್ಯರು ಶ್ರೀಮದ್ ವಾಲ್ಮೀಕಿ ರಾಮಾಯಣದ ಶ್ಲೋಕಗಳಿಗೆ ರಾಗಸಂಯೋಜನೆ ಮಾಡುವ ಮಹತ್ತಾದ ಕಾರ್ಯ ನಿರ್ವಹಿಸಿದರು. ಭಾರತ ಸರಕಾರವು ಅವರಿಗೆ 'ಪದ್ಮಭೂಷಣ' ಪದವಿಯನ್ನು ನೀಡಿ ಪುರಸ್ಕರಿಸಿತು.

ಇವರ ಅತ್ಯಂತ ಪ್ರಸಿದ್ಧವಾದ ರಚನೆಗಳಲ್ಲಿ ಕೆಲವು :

| | |
|---|---|
| ರಾರಾ ರಾಜೀವಲೋಚನ | ಮೋಹನ |
| ಬ್ರೋಚೇವಾರೆವರುರಾ | ಕಮಾಚ್ |
| ಶ್ರೀ ಚಾಮುಂಡೇಶ್ವರಿ ಪಾಲಯಮಾಂ | ಬಿಲಹರಿ |

2. ತಂಜಾವೂರು ಪೊನ್ನಯ್ಯ ಪಿಳ್ಳೆ 1809ರಲ್ಲಿ ತಂಜಾವೂರಿನಲ್ಲಿ ಜನಿಸಿದರು. ತಂಜಾವೂರಿನ ಸುಪ್ರಸಿದ್ಧ ಭರತನಾಟ್ಯ ಪ್ರವೀಣ ಸೋದರರಾದ ಚಿನ್ನಯ್ಯ, ಪೊನ್ನಯ್ಯ, ಶಿವಾನಂದಂ, ವಡಿವೇಲು ಇವರಲ್ಲಿ ಎರಡನೆಯವರು. ಇವರ ಸಂಗೀತಾಭ್ಯಾಸವು ಮೊದಲಿಗೆ ಮುತ್ತುಸ್ವಾಮಿ ದೀಕ್ಷಿತರಲ್ಲಿ ನಡೆಯಿತು. ಅಭಿನಯಕ್ಕೆ ತಗುವ ಹಲವು ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಶಬ್ದ, ಪದವರ್ಣ, ಜಾವಳಿ ಮುಂತಾದ ಬಗೆಯ ಕೃತಿಗಳನ್ನು ರಚಿಸಿದ್ದಾರೆ.

ಮಾಯಾಮಾಳವಗೌಳ ರಾಗದ 'ಮಾಯಾತೀತ ಸ್ವರೂಪಿಣಿ' ಇವರ ಪ್ರಸಿದ್ಧ ರಚನೆಗಳಲ್ಲಿ ಒಂದು.

3. ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ 1845–1902. ಇವರ ತಂದೆ ಭಾರತಂ ವೈದ್ಯನಾಥಯ್ಯರ್. ಸಂಗೀತ

ಮತ್ತು ಸಂಸ್ಕೃತ ಎರಡರಲ್ಲೂ ಅಪ್ರತಿಮ ಪಾಂಡಿತ್ಯಕ್ಕೆ ಹೆಸರಾದ ಮನೆತನ ಅವರದು. ಸುಬ್ರಹ್ಮಣ್ಯ ಅಯ್ಯರ್
ಅವರ ಪ್ರಥಮ ಸಂಗೀತಾಭ್ಯಾಸ ಅವರ ಸೋದರಮಾವಂದಿರೇ ಆದ ಮೇಲಟ್ಟೂರು ಗಣಪತಿ ಶಾಸ್ತ್ರಿಯವರಲ್ಲಿ ನಡೆಯಿತು'
ಅನಂತರ ಮಾನಂಬುಚಾವಡಿ ವೆಂಕಟಸುಬ್ಬಯ್ಯರ್ ಅವರಲ್ಲಿ ಪ್ರೌಢ ಅಭ್ಯಾಸ ಮಾಡಿ ಪ್ರಸಿದ್ಧರಾದರು. ತಮ್ಮ ಮೂವತ್ತ
ನೆಯ ವಯಸ್ಸಿನಲ್ಲಿ ಸಂಗೀತಕಚೇರಿಗಳನ್ನು ಮಾಡತೊಡಗಿ ಸಮಕಾಲೀನ ವಿದ್ವಾಂಸರ ಹೃತ್ಪೂರ್ವಕ ಮೆಚ್ಚಿಗೆ ಪಡೆದು ಅವರಿಗೆ
ಸರಿಸಮಾನರಾಗಿ ನಿಂತರು. ಬೇಗಡೆ ರಾಗವನ್ನು ಹಾಡುವುದರಲ್ಲಿ ಅವರಿಗಿದ್ದ ಅಪಾರವಾದ ಪ್ರತಿಭೆ, ಮನೋಧರ್ಮಗಳನ್ನು
ಕಂಡು ಅವರನ್ನು ಬೇಗಡೆ ಸುಬ್ರಹ್ಮಣ್ಯ ಅಯ್ಯರ್ ಎಂದೇ ಸಂಬೋಧಿಸುತ್ತಿದ್ದರಂತೆ. ತಮ ಗುರುಪರಂಪರೆಯ ಹಿರಿಯರಾದ
ತ್ಯಾಗರಾಜರ ಮಾರ್ಗ ಮತ್ತು ಶೈಲಿಯನ್ನು ಅನುಸರಿಸಿ ಹಲವಾರು ಪ್ರಸಿದ್ಧ ಕೃತಿಗಳನ್ನು ರಚನೆ ಮಾಡಿದ್ದಾರೆ. ಮುಖ್ಯವಾಗಿ
ಇವರ ಕೃತಿಗಳ ಭಾಷೆ ತೆಲುಗು ಮತ್ತು ಸಂಸ್ಕೃತ. ತಿಲ್ಲಾನಗಳು, ವರ್ಣಗಳು, ಕೀರ್ತನೆಗಳು ಕೂಡಿದಂತೆ ನೂರಕ್ಕೂ
ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಇವರು ಮೈಸೂರು ವಾಸುದೇವಾಚಾರ್ಯರ ಗುರುಗಳು.

4. ವೀಣಾ ಕುಪ್ಪಯ್ಯರ್ 1798–1860. ಜನ್ಮಸ್ಥಳ ತಿರುವೆಟ್ರಿಯೂರ್. ತಂದೆ ವೀಣಾ ಸಾಂಬಯ್ಯರ್.
ತಂದೆಯವರಲ್ಲೇ ಸಂಗೀತಾಭ್ಯಾಸವನ್ನು ಪ್ರಾರಂಭಿಸಿದ ಕುಪ್ಪಯ್ಯರ್ ಬಹು ಬೇಗ ಸಂಗೀತ ಪ್ರಾಢಿಮೆ ಗಳಿಸಿ ಪ್ರಸಿದ್ಧ
ರಾದರು. ವೀಣೆಯಲ್ಲದೆ ಪಿಟೀಲು ನುಡಿಸುವುದರಲ್ಲಿಯೂ ಅಮೋಘ ಪರಿಣತಿ ಗಳಿಸಿದರು. ಸುಪ್ರಸಿದ್ಧ ವಾಗ್ಗೇಯಕಾರರೂ'
ನಾದಬ್ರಹ್ಮರೆನಿಸಿದ ಸಂತರೂ ಆದ ತ್ಯಾಗರಾಜರೊಂದಿಗೆ ಕೆಲ ಸಮಯ ಕೃತಿರಚನಾ ಕೌಶಲ ಮತ್ತು ತಂತ್ರಗಳನ್ನು ಅಭ್ಯಾಸ
ಮಾಡಿದರು. ಇವರು 'ಗೋಪಾಲದಾಸ' ಎಂಬ ಅಂಕಿತದಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಅಪೂರ್ವರಾಗ
ವಾದ ನಾರಾಯಣಗೌಳವನ್ನು ಲೀಲಾಜಾಲವಾಗಿ ಹಾಡುತ್ತಿದ್ದುದರಿಂದ ಇವರಿಗೆ ನಾರಾಯಣಗೌಳ ಕುಪ್ಪಯ್ಯರ್ ಎಂದೇ
ಹೆಸರಾಗಿತ್ತು. ಮೈಸೂರಿನ ಪ್ರಭು ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯ ಅವಧಿಯಲ್ಲಿ (1707–1863) ಮೈಸೂರಿಗೆ ಬಂದಿದ್ದ
ಕುಪ್ಪಯ್ಯರ್ ಅವರು ಚಾಮುಂಡೇಶ್ವರಿಯನ್ನು ಕುರಿತು ಬೇಗಡೆ ರಾಗದಲ್ಲಿ 'ಇಂತ ಪರಾಕೇಲನನ್ನು' ಎಂಬ ಕೃತಿಯನ್ನು
ರಚಿಸಿದರು. ಅನೇಕ ವರ್ಣ, ಕೀರ್ತನೆಗಳಲ್ಲದೆ ಕಾಳಹಸ್ತೀಶ ಪಂಚರತ್ನ, ವೆಂಕಟೇಶಪಂಚರತ್ನಗಳೆಂಬ ಸಮುದಾಯ ಕೃತಿಗಳೂ
ಇವರ ರಚನೆಗಳು. ಇವರ ಒಬ್ಬನೇ ಮಗ ತಿರುವೆಟ್ರಿಯೂರ್ ತ್ಯಾಗಯ್ಯರ್ ಅವರು ತಂದೆಯ ಕೃತಿಗಳೆಲ್ಲವನ್ನೂ ಸಂಕಲಿಸಿ
'ಪಲ್ಲವಿ ಸ್ವರಕಲ್ಪವಲ್ಲಿ' ಎಂಬ ಸಂಗೀತ ಲಕ್ಷ್ಯಗ್ರಂಥವನ್ನು ಬರೆದರು.

5. ಸುಬ್ಬರಾಯಶಾಸ್ತ್ರಿ 1803–1862. ಪ್ರಸಿದ್ಧ ವಾಗ್ಗೇಯಕಾರರಾದ ಶ್ಯಾಮಾಶಾಸ್ತ್ರಿಗಳ ದ್ವಿತೀಯ
ಕುಮಾರರು. 1803ರಲ್ಲಿ ತಂಜಾವೂರಿನಲ್ಲಿ ಜನಿಸಿದರು. ಬಾಲ್ಯದಿಂದಲೇ ತಂದೆಯವರಲ್ಲಿ ಸಂಗೀತಾಭ್ಯಾಸವೂ, ಸಂಸ್ಕೃತ,
ತಮಿಳು, ತೆಲುಗು ಭಾಷೆಗಳಲ್ಲಿ ಪಾಂಡಿತ್ಯವೂ ಲಭಿಸಿತು. ಹಲವು ಕಾಲ ತ್ಯಾಗರಾಜರಲ್ಲಿಯೂ ಸಂಗೀತಾಭ್ಯಾಸ
ಮಾಡಿದರು. ಆ ಕಾಲದಲ್ಲಿ ಪ್ರಖ್ಯಾತ ಹಿಂದೂಸ್ಥಾನೀ ಸಂಗೀತ ವಿದ್ವಾಂಸರಾಗಿದ್ದ ಕೋಕಿಲಕಂಠ ಮೇರುಸ್ವಾಮಿ,
ರಾಮದಾಸಸ್ವಾಮಿ ಇವರಲ್ಲಿ ಅಭ್ಯಾಸಮಾಡಿ ಔತ್ತರೇಯ ಪದ್ಧತಿಯ ಸಂಗೀತದಲ್ಲೂ ಪರಿಶ್ರಮ ಪಡೆದರು. ಹಾಡಿಕೆಯ
ಜೊತೆಗೆ ಪಿಟೀಲು ಮತ್ತು ಸಾರಂಗಿ ವಾದ್ಯದಲ್ಲಿ ಪರಿಣತಿ ಪಡೆದಿದ್ದರು. ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ದೇವ
ದೇವಿಯರನ್ನು ಕುರಿತು ಹಲವಾರು ಕೃತಿಗಳನ್ನು ರಚಿಸಿದರು.

ಸುಬ್ಬರಾಯಶಾಸ್ತ್ರಿಗಳ ಕೆಲವು ಪ್ರಸಿದ್ಧ ರಚನೆಗಳು ಇವು :

| | |
|---|---|
| ನಿನ್ನು ಸೇವಿಂಚಿನ | ಯದುಕುಲಕಾಂಭೋಜಿ |
| ಜನನೀ ನಿನ್ನುವಿನಾ | ರೀತಿಗೌಳ |
| ಏಮನಿ ನೇ | ಮುಖಾರಿ |
| ನಿನ್ನುವಿನಾ ಗತಿಗಾನ | ಕಲ್ಯಾಣಿ |

6. ಮೈಸೂರು ಸದಾಶಿವರಾವ್ 1793–1873 ಸದಾಶಿವರಾಯರ ಬಾಲ್ಯದ ವಿಚಾರವಾಗಿ ಹೆಚ್ಚು ತಿಳಿದುಬರುವು
ದಿಲ್ಲ. ಸ್ವಲ್ಪ ವಯಸ್ಸಾದ ಮೇಲೆ ವಾಲಾಜಪೇಟೆಯಲ್ಲಿ ಇದ್ದುಕೊಂಡು ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದ ವೆಂಕಟರಮಣ

ಭಾಗವತರಲ್ಲಿ ಶಿಷ್ಯವೃತ್ತಿ ಮಾಡಿದರು. ಶೀಘ್ರವೇ ಪ್ರಸಿದ್ಧ ವಿದ್ವಾಂಸರಾದ ಸದಾಶಿವರಾವ್ ಅವರು ಮೈಸೂರಿನಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಮಹಾರಾಜರ ಸಮ್ಮುಖದಲ್ಲಿ ಹಾಡಿ ಅವರ ಮೆಚ್ಚಿಗೆಗೆ ಪಾತ್ರರಾದರು. ಆಸ್ಥಾನದ ವಿದ್ವಾಂಸಶ್ರೇಷ್ಠರಾದರು. ಆಮೇಲೆಯೇ ಇವರಿಗೆ ಮೈಸೂರು ಸದಾಶಿವರಾವ್ ಎಂದು ಹೆಸರಾದುದು. ಕರ್ಣಾಟಕ ಸಂಗೀತಕ್ಕೆ ಸದಾಶಿವರಾಯರ ಕೊಡುಗೆ ಅಮೂಲ್ಯ. ಅವರ ಹಲವಾರು ಕೃತಿಗಳು ನಮ್ಮ ದುರ್ದೈವದಿಂದ ನಷ್ಟವಾಗಿ ಹೋಗಿದ್ದು, 52 ಕೃತಿಗಳು ಮಾತ್ರ ದೊರೆತಿವೆ. ಮೈಸೂರಿನ ಸಂಗೀತ ಕಲಾಭಿವರ್ಧಿನಿ ಸಭೆಯವರು ಅವುಗಳನ್ನು ಗ್ರಂಥ ರೂಪದಲ್ಲಿ ಪ್ರಕಟಿಸಿದ್ದಾರೆ. ಅಪರೂಪ ರಾಗಗಳಾದ ಪುನ್ನಾಗತೋಡಿ, ಚಂದ್ರಚೂಡ, ಗಂಭೀರನಾಟ ಮುಂತಾದವು ಗಳಲ್ಲಿಯೂ ಕೃತಿರಚನೆ ಮಾಡಿದ್ದಾರೆ. ಪ್ರಸಿದ್ಧರಾದ ವೀಣಾ ಶೇಷಣ್ಣ ಮತ್ತು ಸುಬ್ಬಣ್ಣನವರು ಇವರ ಶಿಷ್ಯರು.

ಹರಿಕಾಂಭೋಜಿಯ 'ಸಾಕೇತನಗರನಾಥ', ಕಾಂಭೋಜಿಯ 'ಸಾಮ್ರಾಜ್ಯದಾಯಕೇಶ', ಅಠಾಣದ 'ವಾಚಾಮ ಗೋಚರುಂಡನಿ', ಭೈರವಿಯ 'ಶ್ರೀ ಪಾರ್ಥಸಾರಥಿ', ಸಾವೇರಿಯ 'ಶ್ರೀ ಕಾಮಕೋಟಿಪೀಠಸ್ಥಿತೇ', ಪೂರ್ವಿಕಲ್ಯಾಣಿಯ 'ಗಂಗಾಧರ' ಮುಂತಾದುವು ಇವರ ಸುಪ್ರಸಿದ್ಧ ರಚನೆಗಳು.

8. **ಭದ್ರಾಚಲ ರಾಮದಾಸರು.** 1620-1688. ಇವರ ಮನೆತನದ ಹೆಸರು ಕಂಚೇರ್ಲಾ, ನಾಮಕರಣದ ಹೆಸರು ಗೋಪನ್ನ. ಆದರೆ ಭದ್ರಾಚಲದ ರಾಮದೇವರ ಉಪಾಸಕರಾದ ಇವರನ್ನು ಭದ್ರಾಚಲ ರಾಮದಾಸರೆಂದೇ ರೂಢಿ ಯಲ್ಲಿ ಕರೆದಿದೆ. ರಘುನಾಥಭಟ್ಟಾಚಾರ್ಯರೆಂಬುವರು ಇವರ ಗುರುಗಳು. ಚಿಕ್ಕಂದಿನಲ್ಲಿಯೇ ತೆಲುಗು ಮತ್ತು ಸಂಸ್ಕೃತ ಗಳಲ್ಲಿ ಅಮೋಘ ಪಾಂಡಿತ್ಯ ಗಳಿಸಿದರು. ವೃತ್ತಿಯಲ್ಲಿ ಭದ್ರಾಚಲದ ತಹಸೀಲ್ದಾರರಾಗಿದ್ದರು. ರಾಮದಾಸರ ಕೃತಿಗಳೆಲ್ಲ ಸಂಕೀರ್ತನ ರೂಪದಲ್ಲಿದ್ದು ರಾಮದೇವರ ಸ್ತುತಿಯಾಗಿವೆ. 100 ಕ್ಕಿಂತಲೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. 'ದಾಶರಥೀ ಶತಕಂ' ಅವರ ಸಾಹಿತ್ಯ ನಿರ್ಮಾಣ ಪ್ರತಿಭೆಗೆ ನಿದರ್ಶನ. 'ಎನ್ನಗಾನು ರಾಮಭಜನ', 'ಓರಾಮ ನೀನಾಮ', 'ಅಂತಾ ರಾಮಮಯಂ' ಮುಂತಾದುವು ಇವರ ಪ್ರಸಿದ್ಧ ಕೃತಿಗಳು.

9. **ಶ್ಯಾಮಾಶಾಸ್ತ್ರಿ.** 1762-1827. 1762ರ ಏಪ್ರಿಲ್ 26ನೇ ತಾರೀಖು ತಂಜಾವೂರು ಜಿಲ್ಲೆಯ ತಿರುವಾರೂರಿ ನಲ್ಲಿ ಶ್ಯಾಮಾಶಾಸ್ತ್ರಿಗಳು ಜನಿಸಿದರು. ಅವರ ತಂದೆ ವಿಶ್ವನಾಥಶಾಸ್ತ್ರಿಯವರು ತಂಜಾವೂರಿನ ಮಹಾರಾಜ ತುಳಜಾಜಿ ಯವರ ಆಶ್ರಯ ಪಡೆದು ಅಲ್ಲಿ ನೆಲಸಿದ್ದರು. ಶ್ಯಾಮಾಶಾಸ್ತ್ರಿಗಳ ನಾಮಕರಣದ ಹೆಸರು ವೆಂಕಟಸುಬ್ರಹ್ಮಣ್ಯ. ಮನೆಯಲ್ಲಿ ಶ್ಯಾಮಕೃಷ್ಣ ಎಂದು ಕರೆಯುತ್ತಿದ್ದರು ಬಾಲ್ಯದಿಂದಲೇ ಸಂಸ್ಕೃತ ಮತ್ತು ತೆಲುಗುಗಳಲ್ಲಿ ಅಪಾರ ಪಾಂಡಿತ್ಯ ಪಡೆದ ಶ್ಯಾಮಾಶಾಸ್ತ್ರಿಗಳು ಅನೇಕ ಅನರ್ಘ ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳ ಸಾಹಿತ್ಯ ಸಂಸ್ಕೃತ ಮತ್ತು ತೆಲುಗಿನಲ್ಲಿವೆ. ಮಧುರೆಗೆ ಪ್ರಯಾಣ ಮಾಡುವಾಗ ಒಮ್ಮೆ ಮಾರ್ಗದಲ್ಲಿಯೇ ಮೀನಾಕ್ಷಿಯನ್ನು ಕುರಿತು 9 ನವರತ್ನ ಕೃತಿಮಾಲಿಕೆಯನ್ನು ರಚಿಸಿದರು.

ಕಾಮಾಕ್ಷಿಯನ್ನು ಕುರಿತ ಸ್ತುತಿರೂಪದ ಮೂರು ಸ್ವರಜತಿಗಳನ್ನು ರಚಿಸಿದ್ದಾರೆ. ಅವರ ಇತರ ಪ್ರಸಿದ್ಧ ಕೃತಿಗಳು :

| | |
|---|---|
| ತೋಡಿ | ನಿನ್ನೆ ನಮ್ಮಿನಾನು |
| ಪುನ್ನಾಗವರಾಳಿ | ಕನಕಶೈಲ ವಿಹಾರಿಣಿ |
| ಆನಂದಭೈರವಿ | ಓ ಜಗದಂಬ |
| ಮಧ್ಯಮಾವತಿ | ಪಾಲಿಂಚು ಕಾಮಾಕ್ಷಿ |

10. **ರಾಮನಾಡ್ ಶ್ರೀನಿವಾಸ ಅಯ್ಯಂಗಾರ್.** 1860-1919. 1860ರ ಆಗಸ್ಟ್ 16ರಂದು ತಮಿಳುನಾಡಿನ ರಾಮನಾಥಪುರಂನಲ್ಲಿ ಜನಿಸಿದರು. ಬಾಲ್ಯದಲ್ಲೇ ಸಂಗೀತಾಭ್ಯಾಸವು ಖ್ಯಾತ ವಿದ್ವಾಂಸರಾದ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರಲ್ಲಿ ನಡೆಯಿತು. ಬಹು ಬೇಗ ಅಸಾಧಾರಣ ಪಾಂಡಿತ್ಯಗಳಿಸಿ ಗುರುವಿನೊಂದಿಗೆ ಹಾಡತೊಡಗಿದರು. ಮಹಾ ವೈದ್ಯನಾಥಯ್ಯರ್ ಅವರಲ್ಲಿ ರಾಗ ತಾನ ಪಲ್ಲವಿ ಹಾಡುವುದನ್ನು ಅಭ್ಯಾಸಮಾಡಿದರು. ರಾಮನಾಥಪುರದ ಆಸ್ಥಾನ

ವಿದ್ವಾಂಸರಾದರು. ಇವರ 100ರಷ್ಟು ಕೃತಿಗಳು ಈಗ ಬಳಕೆಯಲ್ಲಿವೆ. ಪಾಂಡಿತ್ಯಪೂರ್ಣವಾದ ವರ್ಣ, ಜಾವಳಿ, ತಿಲ್ಲಾನ ಗಳನ್ನೂ ಅನೇಕ ಕೃತಿಗಳನ್ನೂ ರಚಿಸಿದ್ದಾರೆ.

11. **ಪಲ್ಲವಿ ಗೋಪಾಲಯ್ಯರ್** 18ನೇ ಶತಮಾನದ ಕೊನೆ ಅಥವಾ 19ನೇ ಶತಮಾನದ ಮೊದಲು ಭಾಗದಲ್ಲಿ ಇದ್ದರು. ಪಚ್ಚಿಮಿರಿಯಂ ಆದಿ ಅಪ್ಪಯ್ಯನವರ ಶಿಷ್ಯಪರಂಪರೆಗೆ ಸೇರಿದವರು. ಗುರುಕೃಪೆಗೆ ಪಾತ್ರರಾಗಿ ಗೋಪಾಲಯ್ಯರ್ ಬಹು ಶೀಘ್ರವಾಗಿಯೇ ರಾಗ ತಾನ ಮತ್ತು ಪಲ್ಲವಿ ಹಾಡುವುದರಲ್ಲಿ ಪರಿಣತಿ ಸಂಪಾದಿಸಿದರು. ತಂಜಾವೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ಜನಪ್ರಿಯ ತಾನವರ್ಣಗಳಾದ ಕಲ್ಯಾಣಿ ಅಟ್ಟತಾಳದ 'ವನಜಾಕ್ಷಿ', ತೋಡಿಯ 'ಕನಕಾಂಗಿ ನೀಜೆಲಿಮಿ' ಇವರ ರಚನೆಗಳು. 'ವೆಂಕಟ' ಎಂಬ ಮುದ್ರೆ ಇವರ ಕೃತಿಗಳಲ್ಲಿದೆ.

ಗೋಪಾಲಯ್ಯರ್ ಅವರ ಇತರ ಕೆಲವು ಪ್ರಸಿದ್ಧ ಕೃತಿಗಳು :

| | |
|---|---|
| ತೋಡಿ | ಅಂಬ ನಾದು ವಿನ್ನಪಮು |
| ನಾಟಕುರಂಜಿ | ನೀದು ಮೂರ್ತಿನಿ |

12. **ಸ್ವಾತಿ ತಿರುನಾಳ್ ಮಹಾರಾಜರು** 1813–1846. ತಂಜಾವೂರು ರಾಜಮನೆತನದಲ್ಲಿ 1813ರಲ್ಲಿ ಜನಿಸಿದರು. ತ್ಯಾಗರಾಜರ ಸಮಕಾಲೀನರು. 18ನೆಯ ವಯಸ್ಸಿನ ವೇಳೆಗೆ ಸಂಸ್ಕೃತ, ತೆಲುಗು, ತಮಿಳು, ಮಲಯಾಳಂ, ಇಂಗ್ಲಿಷ್ ಭಾಷೆಗಳಲ್ಲಿ ಅಮೋಘ ಪಾಂಡಿತ್ಯ ಗಳಿಸಿ ರಾಜ್ಯಭಾರ ಸೂತ್ರ ವಹಿಸಿಕೊಂಡರು. ಉತ್ತರಾದಿ ಮತ್ತು ದಕ್ಷಿಣಾದಿ ಪದ್ಧತಿಗಳೆರಡರಲ್ಲೂ ಸಂಗೀತವನ್ನು ಅಭ್ಯಾಸಮಾಡಿ ಪರಿಣತಿ ಪಡೆದರು. ಕೃತಿರಚನಾ ಕುಶಲತೆಯಲ್ಲಿ ಅಮೋಘ ಪಟುತ್ವ ತೋರಿಸಿದರು. ಹಲವಾರು ಮಂದಿ ವಿದ್ವಾಂಸರನ್ನು ಪೋಷಿಸಿ ನರ್ತನಪಟುಗಳನ್ನೂ, ಕಲಾವಿದರನ್ನೂ ಮೇಲೆತ್ತಿದರು·

ದರು, ತಿಲ್ಲಾನ, ಪದ, ಜಾವಳಿ, ಕೀರ್ತನೆ, ಕೃತಿಭಜನೆ ಮುಂತಾದ ಹಲವಾರು ಪ್ರಕಾರಗಳಲ್ಲಿ ಸ್ವಾತಿ ತಿರುನಾಳ್ ಅವರು ನೂರಾರು ಕೃತಿಗಳನ್ನು ರಚಿಸಿದ್ದಾರೆ. ಪ್ರಸಿದ್ಧ ರಾಗಗಳಲ್ಲದೆ, ಸಾರಂಗನಾಟ, ಲಲಿತಪಂಚಮ, ಗೋಪಿಕಾವಸಂತ ಮುಂತಾದ ಅಪರೂಪ ರಾಗಗಳಲ್ಲಿಯೂ ಕೃತಿರಚನೆ ಮಾಡಿದ್ದಾರೆ. ನವರಾತ್ರಿ ಕೀರ್ತನೆ ಮತ್ತು ನವರತ್ನಮಾಲಿಕಾ ಮೊದಲಾದ ಸಮುದಾಯ ಕೃತಿಗಳನ್ನು ರಚಿಸಿದ್ದಾರೆ. 'ಪನ್ನಗೇಂದ್ರಶಯನ, ಎಂಟು ರಾಗಗಳನ್ನು ಒಳಗೊಂಡ ರಾಗಮಾಲಿಕೆ' 'ಕಮಲಜಾಸ್ಯ' ಹರಿಯ 10 ಅವತಾರಗಳನ್ನು ವರ್ಣಿಸುವ ರಾಗಮಾಲಿಕೆ, 'ಭಾವಯಾಮಿ ರಘುರಾಮಂ' ರಾಮಾಯಣದ ಆರು ಕಾಂಡಗಳನ್ನು ನಿರೂಪಿಸುವ ಕೃತಿ. ಮೊದಲಿಗೆ ಸಾವೇರಿ ರಾಗದಲ್ಲಿದ್ದ ಇದನ್ನು ಸಂಗೀತಕಲಾನಿಧಿ ಶೆಮ್ಮಂಗುಡಿ ಆರ್. ಶ್ರೀನಿವಾಸ ಅಯ್ಯರ್ ಅವರು ರಾಗಮಾಲಿಕೆಗೆ ಅಳವಡಿಸಿದ್ದಾರೆ. 'ಕುಚೇಲೋಪಾಖ್ಯಾನ,' 'ಅಜಾಮಿಳೋಪಾಖ್ಯಾನ, ಮೊದಲಾದ ಹರಿಕಥಾ ಕಾಲಕ್ಷೇಪಕ್ಕೆ ತಕ್ಕ ಕೃತಿಗಳನ್ನು ರಚಿಸಿದ್ದಾರೆ. ಪದ್ಮನಾಭಸ್ವಾಮಿ ದೇವಾಲಯದಲ್ಲಿ ವರ್ಷಕ್ಕೆ ಎರಡು ಬಾರಿ ನಡೆಯುವ ಉತ್ಸವವನ್ನು ವರ್ಣಿಸಿ 'ಉತ್ಸವ ಪ್ರಬಂಧಂ' ರಚಿಸಿದ್ದಾರೆ. 'ಪದ್ಮನಾಭ' 'ಪಂಕಜನಾಭ', 'ಸರಸಿಜನಾಭ', 'ಕಂಜನಾಭ', 'ಜಲಜನಾಭ' ಇತ್ಯಾದಿ ಮುದ್ರೆಗಳನ್ನು ಕೃತಿಗಳಲ್ಲಿ ಅಳವಡಿಸಿದ್ದಾರೆ. ಉತ್ತರಾದಿ ಪದ್ಧತಿಯಲ್ಲಿ ಧ್ರುಪದ್, ಖ್ಯಾಲ್, ತಪ್ಪ ಶೈಲಿಯಲ್ಲಿ 37 ಕೃತಿಗಳನ್ನು ರಚಿಸಿದ್ದಾರೆ.

13. **ಮುತ್ತುಸ್ವಾಮಿ ದೀಕ್ಷಿತರು.** 1776–1835. 1776ರ ಮಾರ್ಚಿ 24ರಂದು ಮುತ್ತುಸ್ವಾಮಿ ದೀಕ್ಷಿತರು ತಿರುವಾರೂರಿನಲ್ಲಿ ಜನಿಸಿದರು. ತಂದೆ ಹಂಸಧ್ವನಿ ರಾಗಕರ್ತರಾದ ರಾಮಸ್ವಾಮಿ ದೀಕ್ಷಿತರು ಬಾಲ್ಯದಲ್ಲಿ ಮುದ್ದುಸ್ವಾಮಿ ದೀಕ್ಷಿತರೆಂದು ಕರೆಯುತ್ತಿದ್ದರು. ಬಾಲ್ಯದಿಂದಲೇ ಸಂಗೀತದಲ್ಲಿ ಅಪಾರವಾದ ಆಸಕ್ತಿಯಿದ್ದ ದೀಕ್ಷಿತರು ಒಬ್ಬ ಶಿಲ್ಪಿಯ ನೆರವಿನಿಂದ ಮಣಲಿಗೆ ಹೋದರು. ಅಲ್ಲಿ ಚಿದಂಬರನಾಥ ಯೋಗಿಯವರು ಇವರ ಪ್ರತಿಭೆಯನ್ನು ಗುರುತಿಸಿ, ಭವಿಷ್ಯತ್ತನ್ನು ಮನಗಂಡು, ಇವರ ಪತ್ನಿಯರನ್ನೂ ಇವರನ್ನೂ ಕಾಶಿಗೆ ಕರೆದುಕೊಂಡು ಹೋದರು. ಅಲ್ಲಿ ಯತಿಗಳಿಂದ ದೀಕ್ಷಿತರಿಗೆ ಶ್ರೀ ವಿದ್ಯಾ ಉಪದೇಶವಾಯಿತು. ಗಂಗಾಸ್ನಾನ ಮಾಡಿ, ನೀರಿನಲ್ಲಿ ನಿಂತು ಗುರ್ವಾಜ್ಞೆಯಂತೆ ದೇವರನ್ನು ಪ್ರಾರ್ಥಿಸಲು ತಾನಾಗಿಯೇ ಒಂದು ವೀಣೆಯು ದೀಕ್ಷಿತರಿಗೆ ದೊರಕಿತು. ದಕ್ಷಿಣಕ್ಕೆ ಹಿಂದಿರುಗಿ ತಿರುತ್ತಣಿ ಎಂಬ ಕ್ಷೇತ್ರದಲ್ಲಿ ಧ್ಯಾನಾಸಕ್ತರಾಗಿದ್ದಾಗ ಸುಬ್ರಹ್ಮಣ್ಯ ಸ್ವಾಮಿಯು ಮಹಾಪುರುಷನೊಬ್ಬನ ರೂಪದಲ್ಲಿ ಬಂದು ಇವರ ಬಾಯಿಗೆ ಕಲ್ಲು

ಸಕ್ಕರೆ ಹಾಕಿದನಂತೆ. ಅಲ್ಲೇ ದೀಕ್ಷಿತರ ಕೃತಿರಚನಾ ಪ್ರತಿಭೆ ಕುಡಿನರಿದು 'ಶ್ರೀನಾಥಾದಿ ಗುರುಗುಹೋ ಜಯತಿ' ಎಂಬ ಮಾಯಾಮಾಳವಗೌಳದ ರಚನೆ ಹರಿಯಿತಂತೆ. ನವಗ್ರಹ ಕೃತಿಗಳು, ಷೋಡಶ ಗಣಪತಿ ಕೃತಿಗಳು, ನವಾವರಣ ಕೃತಿಗಳು, ಪಂಚಲಿಂಗಸ್ಥಳ ಕೃತಿಗಳು ಇತ್ಯಾದಿ ಸಮುದಾಯ ಕೃತಿಗಳಿಂದ ಕರ್ಣಾಟಕ ಸಂಗೀತ ಭಂಡಾರವನ್ನು ಶ್ರೀಮಂತಗೊಳಿಸಿದ್ದಾರೆ ದೀಕ್ಷಿತರು. ಇವರ ಕೃತಿಗಳಲ್ಲಿ ರಾಗಮುದ್ರೆ, ಕ್ಷೇತ್ರಮುದ್ರೆ, ಪ್ರಬಂಧಮುದ್ರೆ, ರಾಜಮುದ್ರೆ ಮುಂತಾದುವನ್ನು ಕಾಣಬಹುದು.

14. ತ್ಯಾಗರಾಜರು : 1767–1847 ಕರ್ಣಾಟಕ ಸಂಗೀತದಲ್ಲಿ ಅಜರಾಮರವಾದ ಹೆಸರು ತ್ಯಾಗರಾಜರದು. ಕರ್ಣಾಟಕ ಸಂಗೀತ ಮತ್ತು ತ್ಯಾಗರಾಜ ಎರಡೂ ಅನನ್ಯ ಎಂಬಷ್ಟುಮಟ್ಟಿಗೆ ಅದು ನೆಲೆಗೊಂಡಿದೆ ಸುಪ್ರಸಿದ್ಧ ವಾಗ್ಗೇಯಕಾರರೂ, ಸಂತರೂ, ನಾದೋಪಾಸಕರೂ, ಶ್ರೀರಾಮನ ಭಕ್ತರೂ ಆದ ಶ್ರೀ ತ್ಯಾಗರಾಜರು 1767ರ ಮೇ 4ನೆಯ ದಿನದಂದು ತಿರುವಾರೂರಿನಲ್ಲಿ ಜನಿಸಿದರು. ತಂದೆ ರಾಮಬ್ರಹ್ಮ. ತ್ಯಾಗರಾಜರಿಗೆ ಸಂಸ್ಕೃತ, ತೆಲುಗು ಭಾಷೆಗಳಲ್ಲಿ, ವೇದ ವೇದಾಂಗಗಳಲ್ಲಿ ಅಮೂಲಾಗ್ರ ಅಭ್ಯಾಸ ಆಗಿತ್ತು. ಶೋಂಠಿ ವೆಂಕಟರಮಣಯ್ಯ ಎಂಬುವರಲ್ಲಿ ಸಂಗೀತಾಭ್ಯಾಸ ಮಾಡಿದರು. ತಂದೆಯ ಕಾಲಾನಂತರ ಅವರ ಪೂಜಾವಿಗ್ರಹ ಶ್ರೀರಾಮ ಸೀತಾ ಲಕ್ಷ್ಮಣ ಪಂಚಾಯತನ ವಿಗ್ರಹವನ್ನು ಪರಮ ಭಕ್ತಿಯಿಂದ ಆರಾಧಿಸುತ್ತ ಬಂದರು. ಉಂಛವೃತ್ತಿಯಿಂದ ಜೀವನ ನಡೆಸಿದರು. ಭಕ್ತಿಯೇ ಅವರ ಸರ್ವಸ್ವವೂ ಆಯಿತು. ನಾದ ಅವರ ಉಸಿರಾಯಿತು. 96 ಕೋಟಿ ರಾಮನಾಮ ಜಪ ಮಾಡಿ ಶ್ರೀರಾಮಚಂದ್ರನ ಸಾಕ್ಷಾತ್ ದರ್ಶನವನ್ನು ಪಡೆದಿದ್ದರಂತೆ. ಅಸಂಖ್ಯಾತವಾಗಿ ಕೃತಿಗಳನ್ನು ರಚಿಸಿದರು. ದಿವ್ಯನಾಮ ಸಂಕೀರ್ತನೆಗಳು. ಉತ್ಸವ ಸಂಪ್ರದಾಯ ಕೀರ್ತನೆಗಳು, ಕೋವೂರು, ಲಾಲ್‌ಗುಡಿ, ತಿರುವೆಟ್ರಿಯೂರ್ ಪಂಚರತ್ನ ಕೀರ್ತನೆಗಳು, ಘನರಾಗ ಪಂಚರತ್ನ ಕೃತಿಗಳು— ಮೊದಲಾದ ಸಮುದಾಯ ಕೃತಿಗಳನ್ನು ರಚಿಸಿದರು. ಇವರ 'ಪ್ರಹ್ಲಾದ ಭಕ್ತಿವಿಜಯ', 'ನೌಕಾಚರಿತ್ರ' ಮತ್ತು 'ಸೀತಾ ರಾಮ ವಿಜಯ' ಮೂರು ಪ್ರಸಿದ್ಧ ಗೇಯ ನಾಟಕಗಳು.

ಅನೇಕಾನೇಕ ಶಿಷ್ಯರನ್ನು ನಿರ್ಮಿಸಿ, ಕರ್ಣಾಟಕ ಸಂಗೀತಕ್ಕೆ ಭವ್ಯವಾದ ಒಂದು ಪರಂಪರೆಯನ್ನು ಹಾಕಿದ ತ್ಯಾಗ ರಾಜರು ನಾದೋಪಾಸಕರಲ್ಲಿ ಅಗ್ರಗಣ್ಯರು. ಇವರ ರಚನೆಗಳು ಅನೇಕ ಕೃತಿಗಳ ರೂಪದಲ್ಲಿ ಪ್ರಕಟವಾಗಿವೆ.

15. ಆನಯ್ಯ. 1800–1832 ತಂಜಾವೂರಿನ ದೊರೆ ಎರಡನೆಯ ಶರಭೋಜಿಯ ಆಸ್ಥಾನದಲ್ಲಿ ಆನೈಅಯ್ಯರ್ ಮತ್ತು ಅಯ್ಯಮಯ್ಯರ್ ವಿದ್ವಾಂಸರಾಗಿದ್ದರು. ಸಂಸ್ಕೃತ, ತೆಲಗು, ತಮಿಳು, ಭಾಷೆಗಳಲ್ಲಿ ಮಹಾ ಪ್ರತಿಭಾವಂತರಾಗಿದ್ದರು. ಸಾಮಾನ್ಯವಾಗಿ ಸೋದರರಿಬ್ಬರೂ ಕೂಡಿಯೇ ಹಾಡುತ್ತಿದ್ದರು. ಆದರೆ ರಚನೆಗಳನ್ನೂ ಇಬ್ಬರೂ ಕೂಡಿಯೇ ಮಾಡಿವರೆ ಎಂಬ ಬಗ್ಗೆ ಸಂದೇಹವಿದೆ. ಆನಯ್ಯನವರ ರಚನೆಗಳಲ್ಲಿ 'ಉಮಾದಾಸ' ಎಂಬ ಅಂಕಿತವಿದೆ.

16. ಪಾಪನಾಶಂ ಶಿವಂ. 1890. ತಂಜಾವೂರು ಜಿಲ್ಲೆಯ ನನ್ನಿಲಂ ತಾಲ್ಲೂಕಿನ ಪೊಲಹಂ ಎಂಬ ಗ್ರಾಮದಲ್ಲಿ ಜನಿಸಿದ ಇವರ ನಾಮಕರಣದ ಹೆಸರು ರಾಮಯ್ಯ. ಪಾಪ ಪರಿಹಾರಾರ್ಥವಾಗಿ ಯಾವಾಗಲೂ ಪುಣ್ಯಕ್ಷೇತ್ರಗಳ ಯಾತ್ರೆ ಮಾಡುತ್ತಲೇ ಇದ್ದುದರಿಂದ ಪಾಪನಾಶಂ ಶಿವಂ ಎಂದೇ ಇವರಿಗೆ ಹೆಸರಾಯಿತು. ತಿರುವನಂತಪುರದ ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ. ವ್ಯಾಕರಣಪಂಡಿತ ಪದವಿ ಸಂಗೀತಾಭಿರುಚಿ ಬಹಳವಾಗಿದ್ದ ಶಿವಂ ಅವರು ನೀಲಕಂಠದಾಸರೆಂಬ ಭಕ್ತ ವಾಗ್ಗೇಯಕಾರರ ಅನುಗ್ರಹದಿಂದ ಸಂಗೀತ ಕಲಿತು ಕೃತಿರಚನೆ ಮಾಡಿದರು. ನೀಲಕಂಠದಾಸರ ಹಲವು ಕೃತಿಗಳನ್ನು ಪ್ರಚಾರಪಡಿಸಿದರು. ಕೃತಿಗಳಲ್ಲದೆ 'ಶ್ರೀರಾಮಚರಿತ ಗೀತಂ' ಎಂಬ ರಾಮಾಯಣವನ್ನು ನಿರೂಪಿಸುವ ಸಣ್ಣ ಕೃತಮಾಲಿಕೆಯೊಂದನ್ನು ರಚಿಸಿದ್ದಾರೆ. ಹಲವಾರು ಹರಿಕಥೆಗಳನ್ನು ರಚಿಸಿದ್ದಾರೆ.

17. ವಾಲಾಜಪೇಟೆ ವೆಂಕಟರಮಣ ಭಾಗವತರು. 1781 ರಲ್ಲಿ ತಂಜಾವೂರು ಡಿಸ್ಟ್ರಿಕ್ಟ್‌ನ ಅಯ್ಯಂಪೇಟೆಯಲ್ಲಿ ಜನಿಸಿದರು. ಇವರ ತಂದೆ ನನ್ನುಸ್ವಾಮಿ ಭಾಗವತರು ತೆಲುಗು ಸಂಸ್ಕೃತ ಭಾಷೆಯಲ್ಲಿ ನುರಿತ ವೆಂಕಟರಮಣ ಭಾಗವತರು ತ್ಯಾಗರಾಜರಲ್ಲಿ ಸಂಗೀತವನ್ನು ಕಲಿಯಲು ಇಚ್ಛಿಸಿದರು. ಎರಡು ವರುಷಗಳ ಕಾಲ ತ್ಯಾಗರಾಜರ ಮನೆಯಲ್ಲಿ ಅವರು

ಶಿಷ್ಯರಿಗೆ ಪಾಠ ಪ್ರವಚನಗಳನ್ನು ಮಾಡುವ ವೇಳೆಯಲ್ಲಿ ಭೇಟಿಯಿತ್ತು ಗಮನಿಸಿದರು. ಅಲ್ಪಕಾಲದಲ್ಲಿ ಗುರುವಿಗೆ ತಕ್ಕ ಶಿಷ್ಯನಾಗಿ ಜ್ಞಾನ ಸಂಪಾದಿಸಿದರು. ಇವರು ತಮ್ಮ ರಚನೆಗಳಿಗೆ ರಾಮಚಂದ್ರಪುರ ಎಂಬ ಅಂಕಿತವನ್ನು ಸೇರಿಸಿರುವರು. ಸ್ವರಜತಿ, ವರ್ಣ ಕೃತಿ ಮೊದಲಾದ ರಚನಾಪ್ರಕಾರಗಳನ್ನು ರಚಿಸಿದುದರ ಜೊತೆಗೆ ಹಲವಾರು ಹೆಸರಾಂತ ವಿದ್ವಾಂಸರಿಗೆ ಗುರುಗಳಾಗಿಯೂ ಸೇವೆಸಲ್ಲಿಸಿರುವರು.

18. ವಿ. ರಾಮರತ್ನಂ. 1917ರಲ್ಲಿ ಚಿತ್ಪುರಿಯಲ್ಲಿ ಜನಿಸಿದ ವೃಪ್ಸಲಧಡಿಯಂ ರಾಮರತ್ನಂ ಅವರ ತಂದೆ ಶ್ರೀ ವಿ. ಸುಬ್ಬರಾಮಯ್ಯ. ರಾಮರತ್ನಂ ತಮ್ಮ ಪ್ರಾರಂಭಿಕ ಶಿಕ್ಷಣವನ್ನು ಗಾನಕಲಾ ಸಿಂಧು ಸುಬ್ಬರಾಮಯ್ಯನವರಲ್ಲಿಯೂ, ಪಾಲಘಾಟ್ ಸೋಮೇಶ್ವರ ಭಾಗವತರಲ್ಲಿಯೂ ಪಡೆದರು. ಆಮೇಲೆ ಮೈಸೂರು ಟಿ. ಚೌಡಯ್ಯನವರ ಶಿಷ್ಯರಾಗಿ ಪ್ರೌಢ ಶಿಕ್ಷಣವನ್ನು ಪಡೆದುದರ ಜೊತೆಗೆ ಆಗ ಸುಪ್ರಸಿದ್ಧರಾಗಿದ್ದ ಮೈಸೂರು ವಾಸುದೇವಾಚಾರ್ಯರು, ಅರಿಯಾಕುಡಿ ರಾಮಾನುಜಯ್ಯಂಗಾರ್, ಚೆಂಬೈವೈದ್ಯನಾಥಯ್ಯರ್, ಮುಸಿರಿ ಸುಬ್ರಹ್ಮಣ್ಯ ಅಯ್ಯರ್, ಆಲತ್ತೂರು ಶ್ರೀನಿವಾಸ ಅಯ್ಯರ್ ಇವರ ಪ್ರಭಾವಕ್ಕೊಳಪಟ್ಟರು. ಮಧುರೆ ಮಣಿಅಯ್ಯರ್ ಅವರ ಕಚೇರಿಗೆ ಮನಸೋತ ಕಿವಿ ಅವರದು. ಚೌಡಯ್ಯನವರು ಸ್ಥಾಪಿಸಿದ ಅಯ್ಯನಾರ್ ಕಲಾಶಾಲೆಯ ಪ್ರಿನ್ಸಿಪಾಲರಾಗಿ ಇಪ್ಪತ್ತು ವರ್ಷ ಕೆಲಸಮಾಡಿ ನೂರಾರುಜನ ಶಿಷ್ಯ ಶಿಷ್ಯೆಯರಿಗೆ ಮಾರ್ಗದರ್ಶನ ಮಾಡಿ, 1965 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪಿಸಿದ ಲಲಿತಕಲಾ ಕಾಲೇಜಿನ ಪ್ರಿನ್ಸಿಪಾಲರಾದರು. ರಾಷ್ಟ್ರಕವಿ ಕುವೆಂಪು ಅವರಿಂದ ಪ್ರಚೋದಿತರಾಗಿ ಕೃತಿಗಳ ರಚನೆಗೆ ತೊಡಗಿದ ರಾಮರತ್ನಂ ಅವರು ಈಗಾಗಲೆ ಸುಮಾರು ಇಪ್ಪತ್ತು ಕೃತಿಗಳನ್ನು ರಚಿಸಿದ್ದಾರೆ.

19. ಆರ್. ಎನ್. ದೊರೆಸ್ವಾಮಿ. 1916ರ ಡಿಸೆಂಬರ್ 12ರಂದು ಜನಿಸಿದ ಶ್ರೀ ದೊರೆಸ್ವಾಮಿ ಅವರು ರುದ್ರಪಟ್ಟಣದವರು. ಮೊದಲು ಸೇಲಂ ದೊರೆಸ್ವಾಮಿ ಅಯ್ಯಂಗಾರ್ ಅವರ ಬಳಿ ವೀಣೆಯಲ್ಲಿ ಪ್ರಾರಂಭಿಕ ಶಿಕ್ಷಣ ಪಡೆದು ಆಮೇಲೆ ಸುಪ್ರಸಿದ್ಧ ವೈಣಿಕ ವಿದ್ವಾಂಸರಾಗಿದ್ದ ವೀಣಾ ವೆಂಕಟಗಿರಿಯಪ್ಪನವರ ಬಳಿ ಸುಮಾರು ಹದಿನೈದು ವರ್ಷ ಪ್ರೌಢ ಅಧ್ಯಯನ ನಡೆಸಿದರು. 1947ರಲ್ಲಿ ಮೈಸೂರು ಮಹಾರಾಜರ ಆಸ್ಥಾನ ವಿದ್ವಾಂಸರಾದರು. 1957ರಿಂದ ಹನ್ನೆರಡು ವರ್ಷ ಕಾಲ ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ವೀಣೆಯ ಅಧ್ಯಾಪಕರಾಗಿ ಕೆಲಸ ಮಾಡಿದ ದೊರೆಸ್ವಾಮಿಯವರು 1965 ರಿಂದ ಮೈಸೂರು ವಿಶ್ವವಿದ್ಯಾನಿಲಯದ ಲಲಿತಕಲಾ ಕಾಲೇಜಿನಲ್ಲಿ ವೀಣಾ ವಿಭಾಗದ ರೀಡರ್ ಆಗಿ ಆಮೇಲೆ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ. 'ಕರ್ನಾಟಕ ಸಂಗೀತದ ಗೇಯ ರಚನೆಗಳು' ಎಂಬ ಕಿರು ಕೃತಿಯ ಜೊತೆಗೆ ಶ್ರೀ ವಿ. ರಾಮರತ್ನಂ ಅವರೊಂದಿಗೆ 'ಸಂಗೀತ ಶಾಸ್ತ್ರ ಪರಿಚಯ' ಎಂಬ ಪಠ್ಯ ಪುಸ್ತಕವನ್ನೂ 'ನೌಕಾ ಚರಿತ್ರ'ದ ಸಂಪಾದನವನ್ನೂ ಪ್ರಕಟಿಸಿದ್ದಾರೆ.

20. ಮೈಸೂರು ಟಿ. ಚೌಡಯ್ಯ. 1895–1967. ತಿರುಮಕೂಡಲು ನರಸೀಪುರದಲ್ಲಿ 1895ರಲ್ಲಿ ಜನಿಸಿದ ಚೌಡಯ್ಯನವರಿಗೆ ಬಾಲ್ಯ ಪಾಠ ಅವರ ತಾಯಿ ಸುಂದರಮ್ಮನವರಿಂದ. 1910ರಿಂದ ಆಗ್ಗೆ ವಿಶೇಷ ಖ್ಯಾತಿಗಳಿಸಿದ್ದ ಬಿಡಾರಂ ಕೃಷ್ಣಪ್ಪನವರ ಬಳಿ ಪಿಟೀಲು ವಾದನದ ಕಲಿಕೆ ನಡೆಯಿತು. ಅತ್ಯಂತ ಕಟ್ಟುನಿಟ್ಟಾದ ಶಿಕ್ಷಣ ಪಡೆದು ಪರಿಣತರಾಗಿ ಗುರುಗಳಿಗೇ ಪಕ್ಕವಾದ್ಯ ನುಡಿಸಿದರು. ನಾಲ್ಕು ತಂತಿಗಳ ಬದಲು ಏಳು ತಂತಿಗಳನ್ನು ಕಟ್ಟಿ ಪಿಟೀಲು ನುಡಿಸಿ ಅದ್ಭುತ ನಾದ ಹೊರಡಿಸಿದ ಖ್ಯಾತಿ ಚೌಡಯ್ಯನವರದು. ದಾಕ್ಷಿಣಾತ್ಯ ಸಂಗೀತ ಕ್ಷೇತ್ರದಲ್ಲಿ ಇವರ ಹೆಸರು ಬಹು ಬೇಗ ಮನೆ ಮಾತಾಯಿತು. ಅನೇಕಾನೇಕ ಶಿಷ್ಯರನ್ನು ತಯಾರು ಮಾಡಿದರು, ಮಹಾ ವಿದ್ವಾಂಸರನೇಕರಿಗೆ ಪಕ್ಕವಾದ್ಯ ನುಡಿಸಿದರು, ಪಿಟೀಲಿಗೇ ಒಳ್ಳೆಯ ಹೆಸರು ತಂದಿತ್ತರು. 1941ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರಿಂದ 'ಸಂಗೀತರತ್ನ' ಬಿರುದು ಪಡೆದರು ಶ್ರೇಷ್ಠ ವಿದ್ವಾಂಸರೂ, ಸಹೃದಯರೂ, ತರುಣ ವಿದ್ವಾಂಸರ ಬಗ್ಗೆ ಸಹಾನುಭೂತಿಯುಳ್ಳವರೂ ಆದ ಚೌಡಯ್ಯನವರು ವಾಗ್ಗೇಯಕಾರರೂ ಆಗಿದ್ದು ಕೆಲವು ಕೃತಿಗಳನ್ನು ರಚಿಸಿದ್ದಾರೆ.

* * * *

ಸ್ಥೂಲವಾಗಿ ಸಂಗೀತಾ ರಚನಾ ಪ್ರಕಾರಗಳ ಲಕ್ಷಣಗಳು ಹೀಗಿರುತ್ತವೆ :

೧. ಸ್ವರಜತಿ : ಅಭ್ಯಾಸಗಾನಕ್ಕೆ ಸೇರಿದ ಪ್ರೌಢರೀತಿಯ ರಚನೆ. ಧಾತುವು ಸಾಮಾನ್ಯವಾಗಿ 3, 5, 7 ಜತಿ ಕ್ರಮದ ಗುಂಪಿನ ಜೋಡಣೆಯಿಂದ ಹೆಣೆಯಲ್ಪಟ್ಟಿರುತ್ತದೆ. ಮಾತು ಭಾಗವು ಕೆಲವು ವೇಳೆ ದೇವತಾಪ್ರಾರ್ಥನೆಯಿಂದಲೂ

ಕೆಲವು ವೇಳೆ ಶೃಂಗಾರಭಾವದಿಂದಲೂ ಕೂಡಿರುತ್ತದೆ. ಶ್ಯಾಮಾಶಾಸ್ತ್ರಿಗಳು ರಚಿಸಿರುವ ಕಾಮಾಕ್ಷಿದೇವಿಯ ಸ್ತುತಿಯಿಂದ ಕೂಡಿರುವ ಈ ರಚನೆಗಳನ್ನು ಕೆಲವು ವೇಳೆ ಸಭಾ ಕಚೇರಿಗಳಲ್ಲಿಯೂ ಹಾಡುವುದನ್ನು ಕೇಳಬಹುದು. ಈ ಸ್ವರಜತಿಗಳು ರಚನಾ ಪ್ರಕಾರಗಳಲ್ಲಿಯೇ ಅತ್ಯುತ್ತಮವಾದ ರಚನೆಯಾಗಿದ್ದು ರತ್ನತ್ರಯವೆಂದು ಹಲವು ತಜ್ಞರು ಇವನ್ನು ಸಂಬೋಧಿಸಿರುತ್ತಾರೆ. ಈ ಪ್ರಕಾರದ ಸ್ವರೂಪವನ್ನು ಇದರ ಹೆಸರೇ ಸೂಚಿಸುವಂತೆ ಸ್ವರದ ಜೋಡಣೆಗಳೂ, ಅದಕ್ಕೆ ಸಾಮಾನ್ಯವಾಗಿ ಹೆಣೆಯುವ ಯಥಾಕ್ಷರ ಸಾಹಿತ್ಯವೂ ರೂಪಿಸುತ್ತವೆ. ಸಾಹಿತ್ಯದ ಅರ್ಥವು ಭಿನ್ನಭಿನ್ನವಾಗಿ ರೂಪಿಸಲ್ಪಡುತ್ತದೆ. ಸ್ವರಜತಿಯನ್ನು ಹಾಡುವುದು ಜತಿಸ್ವರವನ್ನು ಹಾಡುವ ಕ್ರಮದಲ್ಲಿಯೇ ಆದರೂ ಇಲ್ಲಿ ಸಾಹಿತ್ಯವನ್ನು ಸೇರಿಸಿರುತ್ತಾರೆ. ಈ ರಚನೆಯಲ್ಲಿಯೂ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ಮೂರು ಭಾಗಗಳನ್ನೂ ಕಾಣಬಹುದು. ಪಲ್ಲವಿಯನಂತರ ಅನುಪಲ್ಲವಿಯನ್ನು ಹಾಡಿ ಪ್ರತಿಯೊಂದು ಚರಣದ ಅಂತ್ಯದಲ್ಲಿಯೂ ಪಲ್ಲವಿಯನ್ನು ಪುನರಾವರ್ತಿಸಲಾಗುವುದು. ಶ್ಯಾಮಾಶಾಸ್ತ್ರಿಗಳು ರಚಿಸಿರುವ ಸ್ವರಜತಿಗಳಲ್ಲಿ ಅನುಪಲ್ಲವಿಯ ಭಾಗವು ಕಂಡು ಬರುವುದಿಲ್ಲ. ಈ ರಚನಾ ಪ್ರಕಾರಗಳನ್ನು ರಚಿಸಿದವರಲ್ಲಿ ಶ್ಯಾಮಾಶಾಸ್ತ್ರಿ, ಸ್ವಾತಿ ತಿರುನಾಳ್ ಮಹಾರಾಜರು, ಚಿನ್ನಿಕೃಷ್ಣದಾಸರು, ಪೊನ್ನಯ್ಯ ಸಹೋದರರು, ಮತ್ತು ವೀಣೆ ಶೇಷಣ್ಣನವರು ಇವರ ಹೆಸರುಗಳು ಸ್ಮರಣೀಯವಾದುವು.

೨. ಜತಿಸ್ವರ : ಹಾಡುವ ಕ್ರಮ, ಚೌಕಟ್ಟು ಸ್ವರಜತಿಯನ್ನೆ ಹೋಲುತ್ತಿದ್ದರೂ, ಈ ಪ್ರಕಾರದಲ್ಲಿ ಸಾಹಿತ್ಯ ಕಾಣಬರುವುದಿಲ್ಲ. ಸ್ವರಸಮೂಹವು ಜತಿಯ ಕ್ರಮವಾಗಿ ಸಾಮೂಹಿಕವಾಗಿ ಹೆಣೆಯಲ್ಪಟ್ಟು ಭರತನಾಟ್ಯರಚನಾ ಪ್ರಕಾರವೆಂದು ಪ್ರಸಿದ್ಧಿ ಪಡೆದಿರುತ್ತದೆ. ನಾಟ್ಯಕಲಾವಿದನ ಪಾದಕುಶಲತೆಗೆ ಯೋಗ್ಯವಾದ ಪ್ರಕಾರ ನಾಟ್ಯಶಾಸ್ತ್ರ ಪ್ರಯೋಗ ಕೋವಿದರಾದ ತಂಜಾವೂರು ಪೊನ್ನಯ್ಯ, ಚಿನ್ನಯ್ಯ, ವಡಿವೇಲು ಸಹೋದರರು ಹಲವಾರು ಜತಿಸ್ವರಗಳನ್ನು ರಚಿಸಿರುವರು. ಹಲವಾರು ರಾಗಮಾಲಿಕಾ ಜತಿಸ್ವರಗಳೂ ಬಳಕೆಯಲ್ಲಿವೆ. ಕೆಲವು ಜತಿಸ್ವರಗಳಲ್ಲಿ ಜತಿ ಅಥವಾ ಸೊಲ್ಕಟ್ಟು ಸ್ವರಗಳು ರಚನೆಯ ಪ್ರಥಮದಲ್ಲಿಯೂ, ಅಂತ್ಯದಲ್ಲಿಯೂ ಕಂಡುಬರುತ್ತವೆ. ಲಯದ ಚೌಕಟ್ಟಿಗೆ ಒಳಪಡುವಂತಹ ತಾಳಪ್ರಧಾನವಾದ ರಚನೆ. ಈ ರಚನೆಯನ್ನು ಸ್ವರ ಪಲ್ಲವಿಯೆಂದೂ ಕರೆಯುವುದು ವಾಡಿಕೆ. ಇವುಗಳನ್ನು ಚೌಕವಾಗಿಯೂ, ಮಧ್ಯಮ ಕಾಲದಲ್ಲಿಯೂ ಹಾಡಬಹುದು.

೩. ವರ್ಣ : ರಾಗ ಭಾವ ಸಮನ್ವಿತವಾದ ಪಾಂಡಿತ್ಯಪೂರ್ಣವಾದ ರಚನೆ. ಇಲ್ಲಿ ವಿಶೇಷವಾಗಿ ಸಂಗೀತಕ್ಕೆ ಪ್ರಾಮುಖ್ಯತೆಯಿರುವುದು. ಸಾಹಿತ್ಯಭಾಗವು ಕಡಮೆಯಿರುವುದು. ನಮ್ಮ ಸಂಗೀತದಲ್ಲಿ ಈ ರಚನೆಗಳನ್ನು ವಿದ್ಯಾರ್ಥಿಗಳು ಕೃತಿಗಳನ್ನು ಕಲಿಯುವುದಕ್ಕೆ ಮುಂಚೆ ಕಲಿಯುವರು. ಸಾಹಿತ್ಯ ಭಕ್ತಿರಸಪೂರಿತವಾಗಿಯೂ, ಶೃಂಗಾರರಸಯುಕ್ತವಾಗಿಯೂ ಇರಬಹುದು. ವರ್ಣದಲ್ಲಿ ಎರಡು ಪ್ರಮುಖ ಭಾಗಗಳನ್ನು ಕಾಣಬಹುದು. 1. ಪೂರ್ವಾಂಗ 2. ಉತ್ತರಾಂಗ. ಪೂರ್ವಾಂಗವೆಂದರೆ, ಪಲ್ಲವಿ, ಅನುಪಲ್ಲವಿ, ಮುಕ್ತಾಯಸ್ವರದಿಂದ ಕೂಡಿರುವ ಭಾಗ. ಉತ್ತರಾಂಗವೆಂದರೆ ಚರಣ. ಚರಣವು ಸ್ವರ ಅಥವ ಎತ್ತುಗಡೆ ಸ್ವರಗಳಿಂದ ಕೂಡಿರುತ್ತದೆ. ವರ್ಣಗಳಲ್ಲಿರುವ ಚರಣವನ್ನೆ ಚಿಟ್ಟಪಲ್ಲವಿಯೆಂದೂ ಉಪಪಲ್ಲವಿಯೆಂದೂ, ಎತ್ತುಗಡೆ ಪಲ್ಲವಿಯೆಂದೂ ಸಂಬೋಧಿಸುವುದುಂಟು. ವರ್ಣಗಳಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳುಂಟು. ಅವು ತಾನವರ್ಣ ಮತ್ತು ಪದವರ್ಣ.

೪. ತಾನವರ್ಣ : ತಾನವರ್ಣಗಳಲ್ಲಿ ಸಾಮಾನ್ಯವಾಗಿ ಪಲ್ಲವಿ, ಅನುಪಲ್ಲವಿ, ಚರಣಗಳಿಗೆ ಸಾಹಿತ್ಯವಿರುವುದು. ಪ್ರತಿ ಸಾಹಿತ್ಯದ ಅಕ್ಷರಗಳ ಅಂತರದಲ್ಲಿ ಅಕಾರ, ಇಕಾರ, ಉಕಾರಗಳನ್ನು ಸೇರಿಸಿ ಹಾಡಬೇಕಾಗುವುದು. ವರ್ಣವನ್ನು ಹಾಡುವಾಗ ಮೊದಲು ಪೂರ್ವಾಂಗವನ್ನು ಹಾಡಿ ಪಲ್ಲವಿಯನ್ನು ಪುನಃ ಹಾಡಿ ನಿಲ್ಲಿಸಬೇಕು ನಂತರ ಚರಣವನ್ನು ಹಾಡಿ ಎತ್ತುಗಡೆ ಸ್ವರಗಳ ಅಂತ್ಯದಲ್ಲಿಯೂ ಚರಣವನ್ನು ಪುನರಾವರ್ತಿಸಬೇಕು. ತಾನವರ್ಣಗಳನ್ನು ಆದಿ, ರೂಪಕ, ಝಂಪ, ತ್ರಿಪುಟ, ಅಟ್ಟ ಮುಂತಾದ ತಾಳಗಳಲ್ಲಿಯೂ ನೋಡಬಹುದು. ಇವುಗಳನ್ನು ಸಂಗೀತ ಕಛೇರಿಯ ಪ್ರಾರಂಭದಲ್ಲಿ ಹಾಡುತ್ತಾರೆ. ಇವು ರಾಗದ ರಾಗರಂಜಕ ಪ್ರಯೋಗಗಳನ್ನೂ ವಿಶೇಷ ಸಂಚಾರಗಳನ್ನೂ ಅಪೂರ್ವ ಪ್ರಯೋಗಗಳನ್ನೂ ತಿಳಿಸುತ್ತವೆ. ಅಭ್ಯಾಸಗಾನದಲ್ಲಿ ವರ್ಣಗಳು ಬಹಳ ಮುಖ್ಯವಾದವು. ತಾನದ ಶೈಲಿಯನ್ನು ಹೊಂದಿರುವುದರಿಂದ ಈ ಪ್ರಕಾರಗಳಿಗೆ ತಾನವರ್ಣಗಳೆಂದು ಸಂಬೋಧಿಸುವುದು ಉಚಿತವಾಗಿದೆ.

೫. **ಪದವರ್ಣ :** ತಾನವರ್ಣದಂತೆ ಪಲ್ಲವಿ, ಅನುಪಲ್ಲವಿ, ಚರಣ, ಎತ್ತುಗಡೆ ಸ್ವರಗಳನ್ನೊಳಗೊಂಡ ಭರತನಾಟ್ಯ ರಚನೆ. ಇವುಗಳಿಗೆ ಚೌಕವರ್ಣಗಳೆಂದು ಹೆಸರು. ಇವುಗಳಲ್ಲಿ ಪ್ರತಿಯೊಂದು ಭಾಗಕ್ಕೂ ಸಾಹಿತ್ಯವು ಇದ್ದು ಅವು ಶೃಂಗಾರ ಭಾವವನ್ನು ಪ್ರತಿಪಾದಿಸುತ್ತವೆ. ಈ ರಚನೆಯಲ್ಲಿ ಸಾಹಿತ್ಯಾರ್ಥದ ಹಲವಾರು ಭಾವಗಳನ್ನು ಪುಷ್ಟೀಕರಿಸಲು ಅಭಿನಯಕ್ಕೆ ಅವಕಾಶವನ್ನುಂಟುಮಾಡುತ್ತದೆ. ಕೆಲವು ಪದವರ್ಣಗಳಲ್ಲಿ ಸಾಹಿತ್ಯದ ನಡುವೆ ಸೊಲ್ಕಟ್ಟು ಅಥವಾ ಪಾಠಾಕ್ಷರಗಳನ್ನು ಸೇರಿಸಿರುತ್ತಾರೆ. ನಿಧಾನವಾದ ನಿಟ್ಟಿನಲ್ಲಿ ಹೆಣೆಯಲ್ಪಟ್ಟು ಸ್ವರದ ಭಾಗಕ್ಕೆ ಪಾದಕುಶಲತೆಯನ್ನೂ, ಸಾಹಿತ್ಯ ಭಾಗಕ್ಕೆ ಅಭಿನಯವನ್ನೂ ರೂಪಿಸುತ್ತಾರೆ. ವೀಣಾ ಕುಪ್ಪಯ್ಯರ್, ಪಟ್ಣಂ ಸುಬ್ರಹ್ಮಣ್ಯಯ್ಯರ್, ತಂಜಾವೂರು ಪೊನ್ನಯ್ಯಪಿಳ್ಳೆ ಸಹೋದರರು, ಶ್ರೀನಿವಾಸ ಅಯ್ಯಂಗಾರ್ಯರು ಮುಂತಾದ ವಾಗ್ಗೇಯಕಾರರು ಹಲವಾರು ತಾನವರ್ಣಗಳನ್ನು ರಚಿಸಿರುವರು.

೬. **ಕೃತಿ :** ಸಂಗೀತ ರಚನಾ ಪ್ರಕಾರಗಳಲ್ಲಿ ಇದು ಮುಖ್ಯವಾದದ್ದು. ಇಲ್ಲಿಯ ಸಾಹಿತ್ಯಸಾಮಾನ್ಯವಾಗಿ ದೇವತಾಸ್ತುತಿ ಅಥವಾ ತತ್ವ-ನೀತಿ ಧಾತುವಿಗೆ ಪ್ರಧಾನವಾದ ಸ್ಥಾನವಿರುವ ರಚನೆ. ಕೃತಿಗಳಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ವಿಭಾಗಗಳಿರುವುದು. ಕೆಲವು ವೇಳೆ ಪಲ್ಲವಿ ಮತ್ತು ಚರಣಗಳು ಮಾತ್ರವೇ ಇರುವುದುಂಟು. (ಸಮಷ್ಟಿ ಚರಣಕೃತಿಗಳು) ಮುದ್ದುಸ್ವಾಮಿ ದೀಕ್ಷಿತರ ಕೃತಿಗಳಲ್ಲಿ ಈ ಲಕ್ಷಣವನ್ನು ಸಾಮಾನ್ಯವಾಗಿ ಕಾಣಬಹುದು. ಮತ್ತೆ ಕೆಲವು ವೇಳೆ ಹಲವು ಚರಣಗಳಿದ್ದು ಅಲ್ಲಿಯ ಸಾಹಿತ್ಯವನ್ನೇ ಒಂದೇ ಧಾತುವಿಗೋ ಬೇರೆ ಬೇರೆ ಧಾತುಗಳಿಗೋ ಅಳವಡಿಸಿರುವುದುಂಟು. ಒಂದೇ ಧಾತುವಿನಲ್ಲಿದ್ದರೆ ಎಲ್ಲಾ ಮತ್ತು ಮುದ್ರಾಚರಣವನ್ನೂ, ಬೇರೆ ಬೇರೆ ಧಾತುಗಳಲ್ಲಿದ್ದರೆ ಎಲ್ಲ ಚರಣಗಳನ್ನೂ ಹಾಡುವುದು ಪದ್ಧತಿ. ಕೃತಿಗಳನ್ನು ಹಾಡುವಾಗ ಸೌಂದರ್ಯವರ್ಧನೆಗಾಗಿ ಸಂಗತಿ, ಚಿಟ್ಟೆಸ್ವರ, ಸೊಲ್ಕಟ್ಟು ಸ್ವರ, ಮಧ್ಯಮಕಾಲ ಸಾಹಿತ್ಯ, ಸ್ವರಸಾಹಿತ್ಯ ಮುಂತಾದುವುಗಳನ್ನೂ ಸೇರಿಸಲು ವಾಗ್ಗೇಯಕಾರರಿಗೆ ಸ್ವಾತಂತ್ರ್ಯವಿರುತ್ತದೆ.

ಕೀರ್ತನೆಗಳೂ ಕೃತಿಯನ್ನು ಹೋಲುವಂತಹ ರಚನೆಗಳೇ. ಇಲ್ಲಿನ ಸಾಹಿತ್ಯ ಭಾಗವು ಭಕ್ತಿರಸಪ್ರಧಾನವಾದ ಭಗವನ್ನಾಮ ಸ್ತುತಿಯಾಗಿರುತ್ತದೆ. ಧಾತು ಸರಳವಾಗಿರುತ್ತದೆ. ಸಾಮಾನ್ಯವಾಗಿ ಇವು ಗೋಷ್ಠಿಗಾನಕ್ಕೆ ಚೆನ್ನಾಗಿ ಅಳವಡುವ ರಚನೆಗಳು.

ಕೀರ್ತನ ಮತ್ತು ಕೃತಿ ಕರ್ತೃಗಳಲ್ಲಿ ತಾಳ್ಲಪಾಕಂ ವಾಗ್ಗೇಯಕಾರರು, ಪುರಂದರದಾಸರು. ಭದ್ರಾಚಲ ರಾಮದಾಸರು, ನಾರಾಯಣತೀರ್ಥರು, ತ್ಯಾಗರಾಜರು, ಮುದ್ದುಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರಿಗಳು, ವೀಣಾ ಕುಪ್ಪಯ್ಯರ್, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಪೂಚಿ ಶ್ರೀನಿವಾಸ ಅಯ್ಯಂಗಾರ್, ಮೈಸೂರು ವಾಸುದೇವಾಚಾರ್ಯ, ಮೈಸೂರು ಸದಾಶಿವ ರಾವ್—ಇವರ ಹೆಸರು ಸ್ಮರಣೀಯವಾಗಿವೆ.

೭. **ಪದ :** ವಿಳಂಬ ನಡೆಯುಳ್ಳ ಈ ರಚನಾ ಪ್ರಕಾರವು ಧಾತು ಮಾತು ಪ್ರೌಢಿಮೆಯಿಂದ ಕೂಡಿರುತ್ತದೆ. ಸಾಮಾನ್ಯ ಶೃಂಗಾರ ರಸಪ್ರಧಾನವಾದ ಸಾಹಿತ್ಯ ಅತಿ ವಿರಳವಾಗಿದ್ದು ಪ್ರೌಢನುಟ್ಟದ ಸಂಗೀತಕ್ಕೆ ಅಳವಡಿಸಿರುತ್ತದೆ. ಕ್ಷೇತ್ರಯ್ಯನವರು ಪದ ರಚನಾಕಾರರಲ್ಲಿ ಶ್ರೇಷ್ಠರು. ಮೂವಲೂರ್ ಸಭಾಪತಿ ಅಯ್ಯರ್, ಘನಂಕೃಷ್ಣಯ್ಯರ್ ಮುಂತಾದವರು ಪದರಚನಾಕಾರರು. ಕೃತಿಯಂತೆಯೇ ಪದಗಳು ಪಲ್ಲವಿ, ಅನುಪಲ್ಲವಿ ಮತ್ತು ಕೆಲವು ವೇಳೆ ಹಲವಾರು ಚರಣಗಳನ್ನು ಹೊಂದಿರುತ್ತವೆ.

೮. **ಜಾವಳಿ :** ದ್ರುತ ನಡೆಯುಳ್ಳ ಈ ರಚನೆಗಳು ಪಲ್ಲವಿ, ಅನುಪಲ್ಲವಿ, ಚರಣಗಳಿಂದ ಕೂಡಿದ್ದು ಗಾನ ಕ್ರಮದಲ್ಲಿ ಕೃತಿರಚನೆಯನ್ನೆ ಹೋಲುತ್ತದೆ. ಶೃಂಗಾರ ರಸಭಾವವನ್ನು ಪ್ರತಿಪಾದಿಸುವ ಸಾಹಿತ್ಯವನ್ನು ವೇಗವಾಗಿ ಸಾಗುವ ಸಂಗೀತಕ್ಕೆ ಅಳವಡಿಸಿರುತ್ತದೆ. ದೇಶ್ಯ ರಾಗಗಳಲ್ಲಿ ಹೆಚ್ಚು ಜಾವಳಿಗಳನ್ನು ಕಾಣಬಹುದು.

೯. **ರಾಗಮಾಲಿಕೆ :** ಹೆಸರೆ ಸೂಚಿಸುವಂತೆ ಹಲವಾರು ರಾಗಗಳನ್ನು ಜೋಡಿಸಿರುವ ಮಾಲಿಕೆ. ಪಲ್ಲವಿ ಅನುಪಲ್ಲವಿ ಮತ್ತು ಹಲವು ಚರಣಗಳನ್ನೊಳಗೊಂಡಿರುತ್ತದೆ. ರಾಗ ಬದಲಾವಣೆಯಾಗುವಾಗ ಪಲ್ಲವಿ ಹಾಡುವುದಕ್ಕೆ ಮುಂಚಿತವಾಗಿ ರಾಗಮಾಲಿಕೆಯನ್ನು ಅಳವಡಿಸಿರುವ ತಾಳದಲ್ಲಿ ಒಂದು ಅಥವಾ ಎರಡು ಆವರ್ತ ಪಲ್ಲವಿ ಹಾಡುವ ರಾಗದಲ್ಲಿಯೇ ಚಿಟ್ಟೆಸ್ವರವನ್ನೇ ರಚಿಸಿ ಸೇರಿಸಿರುವ ರಾಗಮಾಲಿಕೆಗಳು ಹಲವಾರು ಉಂಟು. ಇದಕ್ಕೆ ಮಕುಟಸ್ವರ ಎಂದು ಹೆಸರು.

## ಭಾಗ ೧

ತೋಡಿ : ರೂಪಕ

ಪಲ್ಲವಿ :

ಕರುಣಿಸು ಪ್ರಮಥ ಗಣಪತೇ ಕಾಮಿತಗಳ ಕೊಡುವ ದೇವ

ಅನುಪಲ್ಲವಿ :

ಕರಿಕಲಭಮುಖ ಗೌರೀತನಯ
ಶರಣರಪೊರೆವ ಸುಗುಣಾಕರ

ಚರಣ :

ಕಮನೀಯ ಚತುರ್ಬಾಹು ಕಮಲಾಯತ ಲೋಚನ
ಕಮಲಪುರ*ಸುವಿರಾಜಿತ ಕಮಲಸಂಭವ ರಾಮನುತ ||

ಸ್ವರಪ್ರಸ್ತಾರ :

ಪಲ್ಲವಿ :

; ಮ ಗ – , ರಿ ಸಾ ಸ ಸ || ಸ ಧ – ನಿ ರಿ ಸಾ || , , – , , ಮಾ ಪ ಮ ಗ ರಿ ||
. ಕ ರು . ಣಿ ಸು ಪ್ರ ಮ || ಥ ಗ ಣ ಪ ತೇ || . . . . ದೇ . . . . . ||

೧ ನಿ ರಿ ಮ ಗ – , ರಿ ಸಾ ದ ಪ ಮ ಗ || ರಿ ಸ ಧಾ – ನಿ ರಿ ಸಾ || ; ಸ ರಿ , ಗ ಮಾ ದ ದ ||
ವ . ಕ ರು . ಣಿ ಸು ಪ್ರ . . ಮ || ಥ . ಗ ಣ ಪ ತೇ || . ಕಾ . . ಮಿ ತ ಗ ಳ ||
ದ ನಿ ಸ ನಿ – ದ ಮ ಮಾ ಪ ಮ ಗ ರಿ ಸ ನಿ ||
ಕೊ. ಡು ವ . ದೇ . . ವ||

೨ ಸ ರಿ ಮ ಗ – , ರಿ ಸಾ || || ಸ ರಿ ಗ ಮ –
. . ಕ ರು ಣಿ ಸು . ಪ್ರ ಮ || ಥ ಗ ಣ ಪ ತೇ . || ಕಾ . . ಮಿ ತ ಗ ಳ ||
ಸ ರಿ ಗ ಮ ದ ಮ ಗ ಮ ದ ನಿ ಸ ರಿ ||
ಕಾ . . . ಮಿ . ತ . ಗ . ಳ
ಗ ರಿ ನಿ ದ – ಮ ಗ ಮಾ ಪ ಮ ಗ ರಿ ಸ ನಿ ||
ಕೊ. ಡು . ವ . ದೇ . . . . ವ . ||

ಸ ರಿ ಮ ಗ , ರಿ ಸಾ ಸ ಸ || ಸಾ ಸಾ - ಸ ರಿ ವ ಮ ಗಾ || ಗ ರಿ ರೀ – ರಿ ನಿ ಸಾ , , ||
. . ಕ ರು . ಣಿ ಸು ಪ್ರ ಮ || ಥ ಗ ಣ. ಪ . ತೇ || . . . . . . . . ||

*ತಿರುವಾರೂರು

ಅನುಪಲ್ಲವಿ :

; ಪ ದ – , ನಿ ಸಾ ಸ ನಿ ದ ಪ ॥ ದ ಮ ದಾ – , ನೀ ಸ ನಿ ॥ ಸಾ – ನಿ ಸ ರಿ ಸ ನಿ ಸ ನಿ ದ ॥

. ಕ ರಿ . ಕ ಲ ಭ ಮು . ॥ ಖ . ಗೌ . ರೀ ತ ನ ॥ ಯ . . . . . . . . ॥

೧ ಪ ಮ ಪ ದ – , ನಿ ಸಾ ನಿ ಸ ರಿ ಸ ನಿ ದ ॥ ಪ ಮ ದ ಪ – , ದ ನೀ ಸ ನಿ ॥

. . ಕ ರಿ . ಕ ಲ ಭ . . . ಮು . ॥ ಖ . ಗೌ . . ರೀ . ತ ನ ॥

ಸೀ ನಿ ಗ – , ರಿ ಸಾ ಸ ನಿ ದ ನಿ ॥

ಯ ಶ ರ . ಣ ರ ಪೊ . ರೆ . ॥

ಸಾ ರಿ ನಿ – , ದ ಪ ದ ಮಾ ಪ ಮ ಗ ರಿ ॥

ವ ಕ ರು ಣಾ . ಕ . . . . . ॥

ನಿ ರಿ*

– ರ

ಚರಣ :

; ಮ ಮ – , ಮಾ , ಮ ॥ ಮ ಮ – ; ಮಾ ಪ ಮ ಗ ರಿ ಗಾ ॥ ; ಮ ಗ – , ರಿ ಸಾ ಧ ನಿ ॥

ಕ ಮ ನೀ . . ಯ ॥ ಚ ತು ರ್ಬಾ . . . . ಹು ಕ ಮ ಲಾ . ಯ ತ ॥

ಸಾ , ರಿ – ಸ ರಿ ಪ ಮ ಗಾ ॥

ಲೋ . . . ಚ . ನಾ ॥

(೧) ; ಮ ಮ – , ಗ ರೀ , ಗ ಮಾ ॥ ಮ ನಿ ದ ದ – ಪ ಮ ಮಾ ಪ ಮ ಗ ರಿ ಗಾ ॥

ಕ ಮ ನೀ . . ಯ ॥ ಚ . . ತು . . ರ್ಬಾ . . . . ಹು ॥ ಕಮಲಾಯತ ॥

ಪ ಮ ಗ ರಿ – ಸ ರಿ ಪ ಮ ಗಾ ॥

ಲೋ . . . . ಚ . ನಾ ॥

(೨) ॥ ಗ ಮ ದ ನಿ – ಸಾ ರಿ ಸ ನಿ ದ ಪ ಮ ಗಾ ॥

ಕ ಮ . ನೀ . . ಯ ॥ ಚ . ತು . . . . ರ್ಬಾ . . ಹು ಕಮಲಾಯತ ॥

ಸಾ – , ರಿ ಪ ಮ ಗಾ ॥

ಲೋ . ಚ . ನಾ ॥

ಅನುಪಲ್ಲವಿಯಂತೆ :

ಕಮಲಾಪುರ–ಸುವಿರಾಜಿತ
ಕಮಲಸಂಭವ–ರಾಮನುತ ॥

---

ರ* ಕರುಣಿಸು

# ಜತಿಸ್ವರಗಳು

## ೧

ರಾಗ : ವಸಂತ    ತಾಳ : ತ್ರಿಶ್ರ ಏಕ    ಪೊನ್ನಯ್ಯಪಿಳ್ಳೆ

1 ॥ ಸಾ ಽಽ ಸ ನಿ ॥ ದ ಮ ಗಾ ರಿ ನಿ ॥ ಸಾ ಽಽ ನಿ ಸ ॥ ಗಾ ಮ ದ ನಿ ದ ॥
ಸರಿಸನಿ ದನಿದಮ ಗಾ ; । ಮನಿದಮ ಗಮಗರಿ ಸಾ, ನಿ । ದನಿಸಗ ಮದಸಗ ಮದದನಿ ॥
॥
ಸರಿನಿಸ ದನಿಮದ ಗಮದನಿ ॥ ಸಾ

2 ದಾನಿದಮದ । ನಿದಮಮಗಮ । ದಾ ಽ ರೀಽ ಸಾಽ । ಮಾ ಽ ಗಾ ಽ ರಿಗಮ ॥

ದಾನಿದ ದಮಗಮ ಗರಿಗಮ ॥ ದಾ ನಿ ರಿಗರಿ ಮಗನಿದಗಮ ॥ ದಾಸನಿ ನಿದದಮ ಗಮದನಿ ॥

ಧಾಗರಿ ಸನಿದನಿ ದಮದನಿ ॥ ಸಾ

3 ಸಾ ಽಽ. ಸನಿದನಿ । ಸರಿನಿದ ದನಿದಮಗಮಗರಿ । ಸಾ ಽ ಽ ದನಿಸರಿ । ನೀಽಸಗ ಮದಗಾಮದನಿಸ ॥

ಮಾದನಿ ಸರಿ ಸಾನಿದ ಗರಿ । ಗಾ ಮದ ನಿರಿಸಾ ಗಮದನಿ ॥

ಸಸಾನಿ ದನಿದಮ ದಾ ॥ ನಿನೀದ ಮನಿದಮ ಗಾ ॥ ದದಾಮ ಗಮಗರಿಸಾಽನಿ ॥

ಸಗಾಮ ಗಮಾದ ಮದಾನಿ । ಸರಿಸ ನಿಸನಿ ದನಿದ ಮದನಿ ॥ ಸಾ ಽ ಸನಿನಿದಮ ಗಾ ಽ ನಿ ॥

ದಮಗರಿಸಾಽಸಗಮದನಿ ॥ ಸಾ ॥

## ೨

ರಾಗ : ಶಂಕರಾಭರಣ    ತಾಳ : ಮಿಶ್ರ ಛಾಪು    ಪೊನ್ನಯ್ಯಪಿಳ್ಳೆ

॥ ಸಾ ಽಽ ಽ ದಾ ॥ ನೀ ಽ ಽ ಽ ದಾ ॥ ಪಾ ಽ ಮಾಗಾ ॥ ಸಾ ಽ ಽ ಽ ನೀ ॥ ಸಾರಿಗಾಮಗ ॥
ಽಽ ಮಪಾ ದಪ ॥ ಽಽ ದನೀ ಸನಿ ॥ ದಪಾ ಮಪದನಿ ॥ (ಸಾ)
1 ದಪಮಗಾಮಪ ॥ ರಿಗಾಮಪದನಿ ॥ ದನಿಸರಿನಿಸದ ॥ ಪಮಗಮಪದನಿ ॥ (ಸಾ)
2 ಪಾಪಮಗರಿಗ ॥ ಮಗರಿ ಸರಿಗಮ ॥ ಪಪದದ ನಿಸನಿ ॥ ದಪಗ ಮಪದನಿ ॥ (ಸಾ)
3 ನಿನಿ ನೀ ದಪಮ ॥ ಪದಾಮಪಾ ಗಮಪದ ॥ ನೀಸರಿ ಸಾ ನಿಸನಿದಪಾ ॥ ಮಾದಪಾಮ ॥

ಗಮ ಪಾದನಿ ॥

ರಿಗರಿರಿಗರಿಸ ॥ ರಿಸನಿಪದನಿಸ ॥ ರಿಸನೀ ಸನಿದಾ ನಿದಪಾಽಽ । ದಪಮಾಗರಿ ಸಾರಿಗ ಮಪದನಿ । (ಸಾ)

೩

ರಾಗ : ಶಂಕರಾಭರಣ | ತಾಳ : ತ್ರಿಶ್ರ ಏಕ | ಪೊನ್ನಯ್ಯಪಿಳ್ಳೆ

ಸಾ, ರಿ ಸನಿ ॥ ದಪಾಮಗಮ ॥ ಪಾ೯ ಸದಪ ॥ ಮಗ ರೀಗಮ ಪಾದನಿ ॥ ಸಾ;; ॥

1 ಪಾ ೯ ದಪಮಾಪಮ ॥ ಗಾಮಗರೀಗರಿಸಾಸನಿ ॥ ಸಾ ೯ ಸನಿಸಾಗರಿ ॥ ಗಾಮಗ ಮಾಪಮಪಾದನಿ ॥

ಸಾ ; ; ॥

2 ಮಾ೯ ಪಮಗಸರಿಗ ॥ ಮಾ೯ ಪದಪಪಮಗ ॥ ಮಾ೯ ಪಸನೀದಪ ॥ ಮಾ೯ ಗರಿ ಗಸರಿಗ ॥

ಮಾಗಸರಿಸಮಾ ಗಸಪಮ ॥ ಮಾಗದಪಪಮಗ ಮಪದನಿ ॥ ಸಾ ; ; ॥

3 ಸಾ೯ ರಿಸನಿಸನಿದ ॥ ನಿದಪ ದಪಮ ಪಮಗಮಗರಿ ॥ ಸಾ೯ ಸನಿರಿಸಗರಿ ॥ ಮಗಪಮ ದಪನಿದ

ಸನಿರಿನಿ ॥ ಸಾ೯ ೯ ನಿದನಿಸ ॥ ನೀ೯ ೯ ೯ ದಪಮದ ॥ ಪಾ೯೯ ಮಗರಿಗ ॥ ಸಾ೯ ರಿಗಮಪದನಿ ॥ ಸಸಾಪ

ಪಾಸಸಾ ಸಪಾ ॥ ಪಸಾನಿ ದಪಮಗಮಪದನಿ ॥ ಸಾ ; ; ॥

೪

ರಾಗ : ಜಂಜೂಟಿ | ತಾಳ : ಆದಿ | ರಾಮಾಚಾರ್ಯರು

ಪಲ್ಲವಿ : ಮಾ೯ ಗ ರಿ ಸ ನಿ ಧ । ಪಾ ೯ ದ । ಸರೀಗ ॥
ಮಾ ೯ ಗ ರಿ ಸ ನಿ ಧ । ಪಾ ೯ ಧಸ । ರೀ ಸರಿ ಗಾ ರಿಗ ॥
ಮಾ೯ ಗ ರಿ ಸ ನಿ ಧ । ಪಾ ೯ ಧಸ । ರಿಗಾಸ ರಿಗಮಪ ॥

ಅನುಪಲ್ಲವಿ : ಮಾ ಪದ ಮಾ ಪಗ । ೯ ಮ ರೀ । ಗ ಸ ೯ ರಿಗ ॥

ಚರಣ : ಮಾ ೯ ಮಪ ಮಮಗಗ ರಿಸರಿರಿ । ಗಾ ; ಸರಿ । ಸಸಧಪ ಧಸರಿಗ ॥

1 ಗಾ,ರಿ ಸಾ ದಾ, ಪ ಧಾ । ಸಾ,ರಿ ಗಾ । ಮಗಮದ ಪಾ ॥

2 ಪಾ,ದ ನಿದ ಮಾ,ಪ ದಪ । ಗಾ,ಪ ಮಗ । ಮಮಗಗ ರಿಸರಿಪ ॥ ಮಾ

2 3 ಸಾರಿಗ ಮಮ ಪಮಗರಿ ಗಗ । ರಿಸರಿಗ ಸಸ । ಧಸರಿಮ ಗಗ ॥

ಮನಿದನಿ ಪಾದ ಮಾಪ ಗಪಮಗರಿಸ । ರಿಗಮಪಾಮಗಮ । ೯ಗರಿಗಾಸರಿಗ ॥ ಮಾ ॥

3 ಮಪದಾ ದಾದಾ ಪದನೀ ನೀನೀ । ದನಿದಮಪದಪಗ । ಮಾಗರಿ ಸರಿಗಾ ॥

ಮಪದಾ ದಪಮನಿ ದನಿಪಾ ; ಮದ । ಪದಮಾ ; ಪಮ । ಗಾಮಗ ರೀದಪ ॥

ಮಾಗರಿ ಸಾನ್ಧಿ ಧಾಧಸ ರಿಗಮಪ । ಗಾರಿಗ ಮಾಗಪ । ಮಮಗಗ ರಿಸರಿಗ ॥ ಮಾ ॥

೫

ರಾಗ : ಹಂಸಧ್ವನಿ ತಾಳ : ಆದಿ

॥ ಸಾ ॥ ನಿ ಪ ಗ ರಿ ಸ । ರಿ ॥ ಗ । ರಿ ಗ ಪ ನಿ ॥

2 ಸನಿಪ ಸಾನಿಪಗ ನಿಪಾಗಪಗರಿಸ । ನಿಪಾನಿಸರಿಗಪ । ನಿಪಾಗರಿಗಪನಿ ॥

3 ಸನಿಸರೀಸನಿಪ ಗಪನಿ ಸಾನಿಪಗ । ರಿಗಪನೀಪಗರಿ । ಸರಿಗರೀಗಪನಿ ॥

4 ಪಾ॥ ಪನಿಸನಿಪಗ ರಿಸರಿಗ । ಪಾ॥ ಪನಿ । ಸರಿಸನಿ ಪಗರಿಗ ॥

ಪಾ॥ ನಿಪಗರಿಸ ನೀಸರಿಗ । ಪಾ॥ ಸ ನೀಪಗ । ಪಾ॥ , ಗರಿಗಪನಿ ॥ ಸಾ ॥

5 ಸಾ॥ ರಿಗರಿಸನಿಪ ಗರಿಸರಿ । ಗಾ॥ ರಿಗ । ಪಗರಿ ಸನಿಪ ಸನಿ ॥

ಸಾ॥ ರಿಗರಿಸನಿಪಾನಿಸರಿ । ಗಾ॥ಪಗರಿಸರಿ । ಗಾ, ನಿಪಾಗರಿ ॥

ಗಾ॥ಸನಿಪಗರಿಗಾ॥ ಸರಿಗಪನಿ । ಸರಿಸನಿಸನಿಪನಿ । ಪಗಪಗರಿಸರಿಗ ॥

ಪನಿಸರಿಗಪಗರಿ ಸಗರಿಸ ನಿಪನಿಸ । ರಿಗರಿಸನಿಪ ಸನಿಪಗರಿ ಸರಿಗಪನಿ ॥ ಸಾ ॥

೬

ರಾಗ : ಕಲ್ಯಾಣಿ ತಾಳ : ಆದಿ

1 ಸಾ॥ ನಿದಪಮಗ । ರಿ॥ ಪ । ॥ ಮಗರಿ ॥ ಸಾ॥ ದಾನಿಸರಿ । ಗಾ, ಮಾ, ಪ । ॥ ದ ॥ ನಿ ॥

2 ಸರಿಸನಿದಪ_ಮದಪಮಗರಿ ಸರಿಸನಿ । ಗರಿಸ ಪಮಗ_ನಿದ । ಪ ರಿಸನಿ ದಪದನಿ ॥ ಸಾ ॥

3 ರೀ, ಸನಿದಪಮಗರಿಸನಿ । ಸಾ॥ರಿಸ । ಗರಿ ಪಮದಪನಿದ ॥

ನೀಸಸರಿಸ ಪದನಿಮಾಪ ಸಗರಿನಿ । ೯ ಸ ರಿ ರಿಗಗಮಮ । ಪಪದದನಿ ಪದನಿ ಸಾ ॥

4 ಸಾ೯ ಸನಿನಿದದಪಪಮಗಮ । ಪಾ೯ ಗಮ । ಗಪಮದ ಪನಿದರಿ ।

ಸರಿಗಮಗರಿ ನಿಸರಿಗರಿಸ ಸನಿದನಿ । ಗರೀಸನಿದ ರಿಸ । ೯ನಿದಪ ದದಾನಿ ॥ ಸಾ ॥

# ೨. ಸ್ವರ ಜತಿಗಳು

**1.** ರಾಗ : ಧನ್ಯಾಸಿ ಆದಿತಾಳ ಪೊನ್ನಯ್ಯಾಪಿಳ್ಳೈ

ಪll ಗೋಪಾಲ ಲೋಲ ಈ ವೆಥ ತಾಳ ಜಾಲ ಬಾಲll

ಅ. ಪll ರಾಜಾಧಿರಾಜ ವರದರಾಜll

ಗೋಪಿಕಲನು ಗಾರವ ಮುನು ಗಾಚಿನ ಮನೋಹರ ನೀದಾನ ಸದಾನನಿದಿll
ನಂದ ಗೋವಿಂದ ಮುಕುಂದಾ ಸದಾ ಸೀತಾವರ ಮಾನಮದೇಮಿರ ವೇಣುll
ಪದಯುಗಂಬುಲುಕು ಮ್ರೊಕ್ಕೆದ ಮಾಧವ ಪದಯುಗಾನು ಮದಿನಿ ಮದಿಂಚಿರಾದಾll
ವೇರುದಲಚನೇಲ ಕೋರಿಕಲನು ನೊಸಗವೇಮಿರ ನರವರ ಸಂತಾನll
ಸಾಮಿವರ ಕನಲದೇಲ ಪಗವಲದಾ ಸಾಮಗಾನ ವಿನೋದಾ ನುತll
ಸೀತಾವರ ಮಾನಪತಿ ಗತಿನಿ ಮದಿನಿ ಸದಾ ದಲಚೆದ ಕೊಲಿಚೆದ ಮದನll

ಅರ್ಥ : ಗೋಪಾಲಲೋಲ, ರಾಜಾಧಿರಾಜ, ವರದರಾಜ, ಈ ವೆಥ-ಈ ವ್ಯಥೆಯನ್ನು ; ತಾಳಜಾಲ_ತಾಳಲಾರೆನು. ಗೋಪಿಕಲನು_ಗೋಪಿಕಾಸ್ತ್ರೀಯರ ; ಗಾರವಮುನುಗಾಚಿನ_ಗೌರವವನ್ನು ಕಾಪಾಡಿದ, ಮನೋಹರನು ನೀದಾನ_ನೀನಲ್ಲವೆ ; ನಂದ ಗೋವಿಂದ, ಮುಕುಂದ, ಸದಾ ಸೀತಾವರ_ಸೀತಾರಮಣನೆ, ಮಾನಮು_ಸಿಟ್ಟು, ಆದೇಮಿರಾ_ಏತಕ್ಕಯ್ಯ ? ಪದಯುಗಂಬುಲಕು_ನಿನ್ನಪಾದ ಕಮಲಗಳಿಗೆ; ಮ್ರೊಕ್ಕೆದ—ನಮಸ್ಕರಿಸುತ್ತೇನೆ ; ಮಾಧವ, ಪದಯುಗಾನು_ನಿನ್ನ ಪಾದಗಳು ; ಮದಿನಿ_ಮನಸ್ಸಿನಲ್ಲಿ, ಮದಿಂಚಿರಾದ_ಮುದವನ್ನುಂಟು ಮಾಡ ಬಾರದೆ ! ; ವೇರುದಲಚನೇಲ_ಬೇರೆ ಏಕೆ ಭಾವಿಸುತ್ತೀಯೆ ? ಕೋರಿಕಲನು_ಕೋರಿಕೆಗಳನ್ನು ; ಒಸಗ ವೇಮಿರಾ_ಏಕೆ ಈಡೇರಿಸುವುದಿಲ್ಲ ? ನರವರ_ಶ್ರೇಷ್ಠನಾದವನೆ, ಸಂತಾನ ಗೋಪಾಲ, ಸ್ವಾಮಿ, ಕನಲದೇಲ_ ಏಕೆ ಸಿಟ್ಟುಗೊಂಡಿದ್ದೀಯೆ ? ; ಪಗಪಲದಾ_ನನ್ನ ಮೇಲೆ ಹಗೆ ಬೇಡ ; ಸಾಮಗಾನ ವಿನೋದ, ಸೀತಾವರ, ಮಾನಪತಿ, ನನ್ನ ಮನಸಿನಲ್ಲಿ ನಿನ್ನನ್ನು; ಸದಾ ದಲಚೆದ_ಪರಿಭಾವಿಸುತ್ತಿದ್ದೇನೆ ; ಕೊಲಿಚೆದ_ಸೇವಿಸುತ್ತಿ ದ್ದೇನೆ.

ಭಾವ : ಮದನಗೋಪಾಲ, ನನ್ನ ಮೇಲೆ ಏಕೆ ಅಸಮಾಧಾನಗೊಂಡಿದ್ದೀಯೆ? ನಾನು ನಿನ್ನ ಪಾದಗಳನ್ನೇ ಗತಿಯೆಂದು ಸದಾ ಭಾವಿಸುತ್ತಿದ್ದೇನೆ, ಸೇವಿಸುತ್ತಿದ್ದೇನೆ. ನಿನ್ನ ಪಾದಕಮಲಗಳು ನನ್ನ ಮನಸ್ಸಿನಲ್ಲಿ ನೆಲೆಸಿ ಅಲ್ಲಿ ಆನಂದದ ಮುದವುಂಟಾಗುವಂತೆ ಮಾಡಲಿ.

**2.** ರಾಗ : ಅಠಾಣ ತ್ರಿಶ್ರ ಏಕತಾಳ ಪೊನ್ನಯ್ಯಾಪಿಳ್ಳೈ

ಪll ಸಾಮಿನಿ ರಮ್ಮನವೇ ವೇಗಮೇ ದಯಚೇಸಿಯಿಪುಡು ll

ಅ. ಪll ಚಲಂಬುನಲದನವೇ ಮುದಂಬುನರಿಪೆದವೇ ಯುರಂಬು ದುರುಸುರಂಬುಯನು ಜೆದರೆನು ವಲುವಲು ವದಲೆನು ll

ಚll ದಾನಿಂಟಿಕೇಗುಟ ಬಲುಧಾರಾಳವ್ನೈ ಮನಸು ನಿಧಾನಂಬು ತಾ ಮರಚಿ ಸದಾ ವೆಂಟ ದಿರಿಗಗನೇಲ ll

ದಾನಿಯನಿದಾನಿ ಮಿತದಾತೆಲಿಯದಾಯನುಚು ॥
ಸಾರಸದಳ ಲೋಚನುಡೈನ ಚೆಲುವುಡು ಕಾಮಿನಿತೋ ಸೊಗಸುಗಾನು ಸರಸಮಾಡುಕೊನಿ ॥
ಹಾಯಿಗನು ಸದಾ ಕಲಿಸೆನು ಆಯಿಟುಗಲಡಾಸದಯುಡು ಗೆಯಾಳಿಯೆಡ ಒಯ್ಯಾರಿನ ದಲಜೂ
ಚುಕೊನಿ ದಾನಿ ಸರಿಯೆವರು ಲೇದನುಚು ದಲಚಿ ನೆನರುಜಾಯ ತಗದನುಚುನು ॥

ಅರ್ಥ : ದಯಚೇಸಿ–ದಯವಿಟ್ಟು; ಯಿಪುಡು–ಈಗ; ಸಾಮಿನಿ–ಸ್ವಾಮಿಯನ್ನು; ರಮ್ಮನವೇ–ಬರಹೇಳೇ; ಚಲಂಬು ವಲದು ಅನವೇ–ಹಟ ಮಾಡಬೇಡ ಎಂದು ಹೇಳೇ; ಮುದಮುನು ಅರಿಪೆದವೇ–ಸಂತೋಷವನ್ನು ಹೇಳೇ; ಉರಂಬು–ಎದೆಯು; ದುರುಸು–ರಭಸವಾಗಿ; ಉರಂಬುಯನು ಚೆದರೆನು–ಬಡಿದು ಚೆದುರುತ್ತಿದೆ; ವಲುವಲು–ಬಟ್ಟೆಗಳು; ವದಲೆನು–ಜಾರುತ್ತಿವೆ; ನಿಧಾನಂಬು–ತನ್ನ ನಿಕ್ಷೇಪವನ್ನು; ತಾ ಮರಚಿ–ಮರೆತು; ದಾನಿಂಟಿಕಿ–ಅವಳ ಮನೆಗೆ; ತಗುಟೆ ಸದಾ ವೇಂಟದಿರಿಗಗನೇಲ–ಏಕೆ ಸದಾ ತಿರುಗುತ್ತಿರುತ್ತಾನೆ ಎಂದು ನೆನರುಜಾಯ ತಗದು–ಆಲೋಚಿಸುವುದು ತಕ್ಕುದಲ್ಲ.
[ಕೆಲವು ವಾಕ್ಯಗಳಿಗೆ ಅರ್ಥ ಸ್ಪಷ್ಟವಾಗಿಲ್ಲ]

**3.** ರಾಗ : ತೋಡಿ ಮಿಶ್ರ ಏಕತಾಳ — ಪೊನ್ನಯ್ಯಪಿಳ್ಳೆ

ಪ|| ಸಾಮಿಕಿ ಜಾಲಮೇಲನೇ ಸಖಿಯರೊಯಿಪುಡು||
ಅ. ಪ|| ಭೂಮಿಲೊ ಶ್ರೀ ತಂಜಾಪುರಿ ಬೃಹದೀಶ್ವರುಡೈನ||
ಮು. ಸ್ವರ ಸಾಹಿತ್ಯ|| ಭಾಮಾಮಣಿ ಸತತಮು ಸಾಮಿ ನಿನ್ನೇ ಮಿಗಲದಲಚಿ
ದಿನಂಬುನಿಗಿ ಕನಂಬುನನು ಮನಂಬುನನು ಸದಾ ಚಿಂತನು
ನೊಂದಿತಿ ತಾಳನು ಸರಸುನಿ ತ್ವರಿತಮುಗ ನೆನರುತೊ ಕೃಪಜೇಸಿ ರಮ್ಮನವೇ ಚೆಲಿ ಇಕನು
ಸಾಮಿಕಿ||

ಚ|| ಪ್ರದ್ಯುಮ್ನುಡಿದಿಗೊ ವಚ್ಚೆರಾ ಕುಸುಮ ಚಾಯಗಂಬುತೋ||
1 ಮಾರುತಮುಲು ವಿಸರಗಾ ಮನಸುನು ತಾ ಭ್ರಮಸಿತಿ||
2 ತುಮ್ಮೆದಲು ಝುಂಮ್ಮೆನುಚು ಮ್ರೋಯಗ ವಿನಿ ವಿರಹಮು ಮಿ
ತಿಮೀರೆನು ನೇ ಬಿರಾನ ಕಾವವೇ ತರುಣಿ ನಿನ್ನೆ ಇಪುಡು ಕೋರಿತಿನಿ||
3 ಕೋರಿಕಲನು ಸೊಗಸುಗ ಸದಾ ಕಲಿಕಿ ತೆಲಿಪಿತಿಮಿಲ
ಸಾರೆಕುನು ದಯತೋನು ನೇ ಯಪಾರಮುಗನು
ದಯಾಕರುನಿ ಪ್ರೇಮತೋನು ಕೌಗಲಿಂಚಿ ಮುದ್ದು ಲಿಂಚಿ
ರತಿಸೇಯುಟಕು ಸಮಯಮು ಸದಯುನಿ ಯಿವಿಧ ಪಿಲುವವೇ||

ಅರ್ಥ : ಸಾಮಿಕಿ–ಸ್ವಾಮಿಗೆ; ಜಾಲಮೇಲನೇ–ಏಕೆ ತಡವಾಗುತ್ತದೆಯೆ; ಸಖಿಯರೋ–ಸಖಿಯರೇ; ಇಪುಡು–ಈಗ; ಭೂಮಿಲೋ ಶ್ರೀತಂಜಾಪುರಿ ಬೃಹದೀಶ್ವರುಡೈನ ಸಾಮಿಕಿ–ತಂಜಾವೂರಿನ ಬೃಹದೀಶ್ವರನಾದ ಸ್ವಾಮಿಗೆ; ಬರಲು ಏಕೆ ತಡವಾಗುತ್ತಿದೆ; ಸಾಮಿ–ಸ್ವಾಮಿ;ಭಾಮಾಮಣಿಯು, ಸತತಮು–ಯಾವಾಗಲೂ;ಮಿಗುಲ–ವಿಶೇಷ ವಾಗಿ; ದಿನಯುನಿಗಿ–ಹಗಲಿನಲ್ಲಿ; ನಿನ್ನೇ ದಲಚಿ–ನಿನ್ನನ್ನೇ ಭಾವಿಸುತ್ತಾಳೆ; ಕನಂಬುನನು ಮನಂಬುನನು–ಕನಸಿನಲ್ಲೂ ಮನಸ್ಸಿನಲ್ಲೂ; ಸದಾ ಚಿಂತನು ಒಂದಿತಿ–ಚಿಂತಿಸುತ್ತಿದ್ದಾಳೆ; ತಾಳನು–ತಾಳಲಾರದಾಗಿದ್ದಾಳೆ; ನೆನರುತೋ–ನೆನಪುಮಾಡಿಕೊಂಡು; ಕೃಪಜೇಸಿ–ಕೃಪೆಯಿಟ್ಟು; ಸರಸುನಿ–ಸರಸನಾದ ದೇವನನ್ನು; ತ್ವರಿತಮುಗ–ಬೇಗ; ಇಕನು–ಇಲ್ಲಿಗೆ; ರಮ್ಮವೇ ಚೆಲಿ–ಬರಹೇಳಿ ಸಖಿ; ಪ್ರದ್ಯುಮ್ನುಡು–ಪ್ರದ್ಯುಮ್ನನು; ಇದಿಗೋ ವಚ್ಚೆರಾ–

ಇದೋ ಬಂದನು; ಕುಸುಮ ಚಾಯುಗಂಬುತೋ–ಕುಸುಮಸಾಯಕದೊಂದಿಗೆ (ಸಾಯಕ–ಬಾಣ); ಮಾರುತಮುಲು–ಗಾಳಿಯು; ವಿಸರಗಾ–ಬೀಸಲು; ಮನುಸುನು ತಾ ಭ್ರಮಸಿತಿ–ಮನಸ್ಸು ಭ್ರಮಿಸುತ್ತಿದೆ; ತುಮ್ಮೆದಲು–ದುಂಬಿಗಳು; ಝುಂಮನುಚು–ಜುಮ್ಮೆಂದು; ಮ್ರೋಯಗ–ಮೊರೆಯಲು; ವಿನಿ–ಕೇಳಿ; ವಿರಹಮು ಮಿತಿಮೀರೆನನೇ–ವಿರಹ ವೇದನೆಯು ಮಿತಿಮೀರುತ್ತಿದೆಯಲ್ಲ! ಬಿರಾನ–ಬೇಗ; ಕಾವವೇ–ಕಾಪಾಡೇ; ತರುಣಿ ನಿನ್ನೆಯಿಪುಡು ಕೋರಿತಿನಿ–ತರುಣಿ, ನಿನ್ನನ್ನೇ ಕೋರುತ್ತಿದ್ದೇನೆ; ಕಲಿಕಿ–ಆ ಶೂರನಿಗೆ; ಕೋರಿಕಲನು–ನನ್ನ ಕೋರಿಕೆಗಳನ್ನು; ಸೊಗಸುಗ ಸದಾ ತೆಲಿಪಿತಿವಿ–ತಿಳಿಸುತ್ತಿದ್ದೇನೆ; ಇಲ ಸಾರೆಕನು–ಮನೆಯ ಹತ್ತಿರಕ್ಕೆ; ದಯತೋನು–ದಯವಿಟ್ಟು ಬಂದು; ದಯಾಕರುನಿ–ಆ ದಯಾಕರನು; ಕೌಗಲಿಂಚಿ–ನನ್ನನ್ನು ಆಲಂಗಿಸಿಕೊಂಡು; ಮುದ್ದು ಲಿಂಚಿ–ಚುಂಬಿಸಿ; ರತಿ ಸೇಯುಟಕು–ಪ್ರೇಮಿಸಲು; ಸಮಯಮು–ಇದು ತಕ್ಕ ಸಮಯವಾಗಿದೆ ಎಂದು; ಉವಿದ-ಹೆಣ್ಣೇ, ಸದಯುನಿ–ಆ ದಯಾಮಯನನ್ನು; ಯಿವಿಧ–ಈರೀತಿ; ಪಿಲುವವೇ–ಕರೆಯೇ.

ಭಾವ : ತಂಜಾವೂರಿನ ಬೃಹದೀಶ್ವರನಾದ ಆ ಸ್ವಾಮಿಯನ್ನೇ ಸದಾ ಇವಳು ನೆನೆಯುತ್ತಿದ್ದಾಳೆ, ಅವನ ಅಗಲಿಕೆಯಿಂದ ವ್ಯಥೆಪಡುತ್ತಿದ್ದಾಳೆ. ಹಗಲಿರುಳೂ ಅವನನ್ನೇ ಕುರಿತು ಚಿಂತಿಸುತ್ತಿದ್ದಾಳೆ. ಗಾಳಿ ಬೀಸಿದರೆ, ದುಂಬಿಗಳು ಮೊರೆದರೆ ಸಹಿಸಲಾರದೆ ಅವಳ ಎದೆ ತಲ್ಲಣಿಸುತ್ತಿದೆ. ಏಳೆ ಸಖಿ, ಹೋಗಿ ಆತನನ್ನು ಕರೆದುಕೊಂಡು ಬಾ ಕರುಣಾಕರನಾದ ಅವನು ನನ್ನ ಬಳಿಗೆ ಬಂದು ನನ್ನನ್ನು ತಬ್ಬಿಕೊಂಡು ಮುತ್ತಿಟ್ಟು ಪ್ರೇಮಿಸಲು ಇದೀಗ ತಕ್ಕ ಸಮಯ ಎಂದು ಹೇಳಿ ಕರೆದುಕೊಂಡು ಬಂದು ನನ್ನನ್ನು ಕಾಪಾಡು.

**4.** ರಾಗ : ಯದುಕುಲಕಾಂಭೋಜಿ ರೂಪಕತಾಳ ಪೊನ್ನಯ್ಯಪಿಳ್ಳೈ

ಪ॥ ಸರೋಜಾಕ್ಷಿರೋ ನಾ ಸಾಮಿನೀವೇಳ
ಸರಸಕು ತೋಡಿತೇವೇ ॥

ಅ. ಪ॥ ಮೇರುವಿಲ್ಲುಡೈನ ತಂಜ ಬೃಹದೀಶ್ವರುಡು
ವೇರುಗಾನೆಂಚಿನ ವಿಧಮುಲರಸೇಯಿಪುಡು ॥

ಮು. ಸ್ವರ ಸಾಹಿತ್ಯ॥ ವಾದೇಲಯಿಕ ತಗದನವೇ ಪದವೇ ರಿಮಪದ ॥ ಚೆಲಿಯ ನೀಕು ತೆಲುಪವಲುನು ॥

ಚ॥ ಮಧ್ಯಮಕಾಲ

ಮಾರುಡು ಶರಮು ವೇಮಾರು ನಾಯುರಮುನ
ದೂಸೇನೇ ಆ ಸದಯುನಿ ನಿಟು ರಮ್ಮನವೇ ॥

1. ರೇ ರಾಜುಗಾಗಲುಕುನೇ ಮನಸುಲೋರ್ರುನೇ ಚೆಲಿ ॥
2. ತುಮ್ಮೆದಲ್ಝೂಯಗ ಸೊಮ್ಮಸಿಲ್ಲಿತಿನೇ ರಮ್ಮನಿ ಕಮ್ಮವೋ ವಿಮ್ಮನಿ ವೇಗಮೇ ॥
3. ಪರಾಕಿ ಗದಾನುಚುನನು ಪಿರಾಳಿದೋರದಿಚಲುದುನಡು
ವರಾಯನಿ ದುರುಸುಗಯಿಪುಡು ಪಿಲುವವೇ ಚೆಲಿಯನೋರ್ವನಿಗ ॥
4. ಸಾರೆಕುನು ಬಾಯೆಡೆ ನಿನ್ನೆ ಸ್ಥಿರಮುನ ದಲಚಿತಿನಿ
ವೇರುಚೇಸಿ ಇಕರಾನಿ ಮಾಯಮೇಮೋ ಏಮಿ ಜೇತುನಿಕ ಭಾಮ ವಿನವೇ ॥
ನಾ ಮೋಹಮಿಂತ ಜೇಸಿನದಿ ನೇ ನೋರ್ವರಿಗ ತೆಲುಪುದುನೇ
ವಿರುಲ ಸೇಯ ಪೈನಿ ಸುಂದನುರಗ ಪೋತೆ ಅದಿಸರಮೈ
ಗತಿಯೇಮೋಯಿಪುಡು ಸುದತಿರೋ ಮದನಿ ಕಲಯ ರಮ್ಮನವೇ ॥

ಅರ್ಥ : ಸರೋಜಾಕ್ಷಿರೋ–ತಾವರೆಯಂತೆ ಕಣ್ಣುಳ್ಳ ಎಲೆ ಸಖಿಯರೆ ; ನಾಸಾಮಿ–ನನ್ನ ಸ್ವಾಮಿಯನ್ನು ; ಈ ವೇಳ–ಈಗ ; ಸರಸಕು–ಸರಸ ಸಲ್ಲಾಪಗಳಿಗೆ ; ತೋಡಿತೇವೇ–ಕರೆದು ತನ್ನಿರೇ ; ಮೇರು ವಿಲ್ತುಡೈನ–ಮೇರು ಪರ್ವತವನ್ನೇ ಬಿಲ್ಲಾಗಿಸಿಕೊಂಡಿರುವ ; ತಂಜ ಬೃಹದೀಶ್ವರುಡು–ತಂಜಾವೂರಿನ ಬೃಹದೀಶ್ವರನು ; ವೇರು ಗಾನೆಂಚಿನ–ಬೇರೆಯಾಗಿ ಎಣಿಸಿದ ; ವಿಧನು–ಬಗೆಗಳನ್ನು ಅರಸೆ–ವಿಚಾರ ಮಾಡಿದೆನು ; ವಾದೇಲಇಕ–ಇಲ್ಲಿ ಇನ್ನು ವಾದವೇಕೆ ? ; ತಗದನವೆ–ಅದು ಸಲ್ಲದು ಎಂದು ಹೇಳಿ ; ಚೆಲಿಯ–ಸಖಿ ; ನೀಕು ತೆಲುಪವಲನು–ನಿನಗೆ ಹೇಳಬೇಕಾಗಿದೆ; ಮಾರುಡು ಶರಮು–ಮನ್ಮಥನ ಬಾಣವು; ವೇಮಾರು–ಅನೇಕಸಾರಿ ; ನಾಯುರಮುನ–ನನ್ನ ಎದೆಗೆ ; ದೂಸೇನೇ–ನಾಟುತ್ತಿವೆಯೇ; ಆ ಸದಯುನನ್ ಇಟುರಮ್ಮನವೇ–ಆ ದಯಾಮಯನನ್ನು ಇಲ್ಲಿಗೆ ಬರಹೇಳೀ; ಚೆಲಿ–ಗೆಳತಿ ; ರೇ ರಾಜು–ಆ ರಾಜರಾಜನು ; ಗಾಗಲುಕುನೇ–ಸಿಟ್ಟಾಗುವನೆ ; ಮನಸುಲೋ ಓರ್ತುನೇ–ನಾನು ಮನಸ್ಸಿನಲ್ಲಿ ಅದನ್ನು ಸಹಿಸುವೆನೆ ; ತುಮ್ಮೆದಲು–ದುಂಬಿಗಳು ; ಕೂಯಗ–ಧ್ವನಿ ಮಾಡಲು ; ಸೊಮ್ಮು ಸಿಲ್ಲಿತಿನೆ–ಶಕ್ತಿಗುಂದಿದೆನೇ ; ಪರಾಕಿಗದಾ–ಅವನು ಎಲ್ಲರಿಂದಲೂ ಪರಾಕುಗೊಂಡನಲ್ಲವೆ ? ಪಿರಾಳಿದೋರದಿ–ನನ್ನನ್ನು ಅನ್ಯಳೆಂದು ನೋಡುವುದು ; ಚಲದು–ಸಲ್ಲದು ಎಂದು ಹೇಳಿ ; ಪರಾಯನಿ–ಆ ವರನನ್ನು ; ದುರುಸುಗ–ವೇಗವಾಗಿ ; ಇಪುಡು ಪಿಲುವವೇ–ಈಗ ಕರೆಯೇ ; ಸಾರೆಕುನು ಬಾಯಡೆ–ಹತ್ತಿರಕ್ಕೂ ಸುಳಿಯುತ್ತಿಲ್ಲವೇ ; ನಿನ್ನೆ–ನಿನ್ನನ್ನೇ; ಸ್ಥಿರಮುನದಲಚಿತಿನಿ–ಸ್ಥಿರವಾಗಿ ಭಾವಿಸುತ್ತಿದ್ದೇನೆ ; ವೇರುಜೇಸಿ–ನನ್ನನ್ನು ಅನ್ಯವಾಗಿ ಪರಿಗಣಿಸಿ ; ಇಕರಾನಿ–ಇಲ್ಲಿಗೆ ಬರದಿರುವ ; ಕಾರಣಮೇಮೋ–ಕಾರಣವೇನೋ ತಿಳಿಯದಲ್ಲ ; ಭಾಮ ಏಮಿ ಚೇತುನಿಕ ವಿನವೇ–ಭಾಮ, ಏನುಮಾಡಲಿ ಕೇಳೇ ; ನಾ ಮೋಹಮು ಇಂತ ಜೇಸಿನದಿ–ನನ್ನ ಮನಸ್ಸಿನಲ್ಲುಂಟಾಗಿರುವ ಮೋಹವು ಹೀಗೆ ಮಾಡುತ್ತಿದೆ ; ಸೇಸೋರ್ವನಿಕ–ಸಹಿಸ ಲಾರೆ ಎಂದು ; ತೆಲುಪುಮನೇ–ತಿಳಿಸೆ; ವಿಮಲಸೇಯ–ಹೂವುಗಳನ್ನು ಮಾಲೆಯಾಗಿ ಕಟ್ಟಿದ ; ಪೈನಿ–ಮೇಲೆ; ಸುಂದನುರಗಮೌತೆ–ಅದು ಹಾವಾಗಿಬಿಟ್ಟರೆ ; ಅದಿ ಸರಮ್ಮೈಗತಿಯೇಮೇ–ಮುತ್ತಿ ಹೂವಿನ ಮಾಲೆ ಯಾಗುವ ಬಗೆ ಹೇಗೇ ? ಮದನಿ ಕಲಯ ರಮ್ಮನವೇ–ಈಗ ಮದನನನ್ನು ಬರಹೇಳೆ ಸಖಿ !

ಭಾವ : ಮನ್ಮಥನ ಬಾಣಗಳು ಎದೆಯನ್ನು ನಾಟುತ್ತಿವೆ, ವಿರಹ ತಾಪವನ್ನು ಸಹಿಸಲಾರೆ. ಸಖಿಯರೆ, ಮೇರು ಪರ್ವತವೇ ಬಿಲ್ಲಾದ ತಂಜ ಬೃಹದೀಶ್ವರ ಸ್ವಾಮಿಯನ್ನು ಬರಹೇಳಿರಿ. ದುಂಬಿಗಳ ಧ್ವನಿ ಕೇಳಿ ನಾನು ತಪಿಸುತ್ತಿದ್ದೇನೆ. ನನ್ನನ್ನು ಅನ್ಯಳೆಂದು ಏಕೆ ಅವನು ಪರಿಗಣಿಸಿದ್ದಾನೋ ತಿಳಿಯದಲ್ಲ ! ಹೂವಿನ ಮಾಲೆಯೆಂದು ಕಟ್ಟಿದರೆ ಅದು ಹಾವಾಗಿಬಿಟ್ಟರೆ ಗತಿಯೇನು ? ದಯವಿಟ್ಟು ಬೇಗ ಮದನನನ್ನು ಬರಮಾಡಿರಿ.

5. ರಾಗ : ಹುಸೇನಿ ರೂಪಕತಾಳ ಪೊನ್ನಯ್ಯಪಿಳ್ಳೆ

ಪ॥ ಏಮಂತಾಯನರಾ ನಾ ಸಾಮಿ
ನೀಕೇಮಂದು ಪೆಟ್ಟೆನುರಾ ನಾ ಸಾಮಿ
ಕಾಮಿನಿ ಜನ ಚಿತ್ತಚೋರ ॥

ಅ. ಪ॥ ಘನುಡೌ ಪ್ರತಾಪಸಿಂಹ ವಜೀರ
ಪ್ರೇಮ ಮೀರಗ ನನ್ನುಜೇರ
ಪಿಲಿಚಿತೇ ರಾವೇಮಿ ನೀಕಿದಿ ಮೇರ ॥

ಮು. ಸ್ವರ ಸಾಹಿತ್ಯ ॥

ನೇನೇ ಮುದ್ದಿಡವಚ್ಚಿತೆ ನನುಕತ್ತಿಂಪುಚುಗೆಲುವುನ
ವೊಗ ಮೇರಗ ಅಟುತ್ರಿಪ್ಪಿತೇ ಅದಿಯೇಮಿರ ತಗುನಾ
ನಗಿಂಚಿ ಬಿಗಿಂಚಿ ನಿನು ಕೌಗಿಟಜೇರ್ಚುಕೊನಿ ನದಿಮಿತೇ
ಕನ್ನು ತಲಿಂಪುಚು ಮರಿಮರಿ ಪದರುಚುನನುಕೊನಿಕಸರೆದವೇಳ ಇದಿಮೇಲುಘನತನಮುಗುನಾ ॥

ಚ॥ ಔಲೇರಾ ನಿನ್ನೆ ಬಾಯನಾಮನದಿ ನಿಜಂಬನುಚು ದಲಚಿತಿಗದ ರಾಯವುಡುಗದಲಿಚನುರಾ ॥

1. ನೆನರುವಾಡವನುಚು ನೇನೆಂಚಿತಿ ಫಳಿ ಫಳಿ ॥
2. ಸರಸರಾಕ ತನಕುಚನುವೀಗಸುನುಮರುಗುರಿಪರಿಚಿತಿ ॥
3. ವಾಟಿ ವಾಟಿ ಪಗಲುನೇ ಕಂಟಿ ಕಂಟಿ ಪದರಾ
   ಚಾಲವಿರಿ ಕೋಲಲಗುನು ಬಾಲೈತಗಿಲಿಂಚಿದಿವಿ ॥
4. ಓಹೋಹೋ ಏಮಂದುನು ನೀಪ್ಪೈ ಅಲ
   ಸಿಮಾಟಿ ಕೋಟುಲ ಮೀಟುಲನು ಕನ್ನುಲಂದು ನಿದ್ದುರಗ ಸೊಕ್ಕುಲೇಮರದೂಡಿ ಮಣಿ ॥
   ಚನುಲಬೋಡು ಔಡುಗಾಡು ಜಡಲವೇಡು ಸುನ್ನಾಟಿನದಿ ॥

ಅರ್ಥ : ನಾ ಸಾಮಿ–ನನ್ನ ಸ್ವಾಮಿಯೆ ; ಏಮಂತಯಾನರಾ–ಏನಂಥ ಅಪ್ಪಣೆಯಾಗಿದೆ ನಿನಗೆ ? ಕಾಮಿನಿಜನ ಚಿತ್ತಚೋರ–ಕಾಮಿನಿಯರ ಮನಸ್ಸನ್ನು ಅಪಹರಿಸುವ ನನ್ನ ಸ್ವಾಮಿಯೆ, ನೀಕು–ನಿನಗೆ ; ಏಮಂದು–ಅದೆಂಥ ಮದ್ದು ; ಪೆಟ್ಟಿನುರಾ–ಹಾಕಿದಳೋ ? ಘನನಾದ ಪ್ರತಾಪಸಿಂಹ ಮಹಾರನಾದ ಸ್ವಾಮಿಯೆ, ಪ್ರೇಮಮೀರಗ–ಅತಿಶಯವಾದ ಪ್ರೇಮದಿಂದ ; ನನ್ನು ಜೇರ–ನನ್ನನ್ನು ಸೇರಲು ; ಪಿಲಿಚಿತೇ–ಕರೆದರೆ ; ರಾವೇಮಿ–ಬರುವುದಿಲ್ಲವೆ ? ನೀಕಿದಿ ಮೇರ–ನಿನಗಿದು ಸರಿಯೇ ? ; ಮುದ್ದುಡ–ನನ್ನ ಮುದ್ದಿನವನೇ ; ನೇನೇವಚ್ಚಿತೆ–ನಾನೇ ಬಂದರೆ ; ನನುಕತ್ತಿಂಪುಚು–ನನ್ನನ್ನು ತಿರಸ್ಕರಿಸುತ್ತಾ, ಗೆಲುವಿನಿಂದ, ವೊಗಮೇರಗ–ಜಂಬದಿಂದ ; ಅಟುತ್ರಿಪ್ಪಿತೇ–ಆಕಡೆಗೆ ತಿರುಗುವೆಯಾ ? ; ಅದಿಯೇಮಿರಾ–ಅದೇಕೆ ; ತಗುನಾ–ಅದು ಸರಿಯೆ ? ; ನಗಿಂಚಿಪೆಗಿಂಚಿ–ನನ್ನನ್ನು ನಕ್ಕು ನಲಿಸಿ ಹಿಗ್ಗಿಸಿ ; ಕೌಗಿಟ ಜೇರ್ಚುಕೊನಿ–ಆಲಿಂಗನದಲ್ಲಿ ಸೇರಿಸಿಕೊಂಡು ; ಅದಿಮಿತೆ–ಅದುಮಿ ; ಕನ್ನು ತಲಿಂಪುಚು–ಕಣ್ಣು ತೆರೆದು ಮುಚ್ಚುತ್ತಾ ; ಮರಿ ಮರಿಪದರುಚುಕೊನಿ–ಮತ್ತೆ ಮತ್ತೆ ಶೃಂಗಾರಧ್ವನಿ ಮಾಡುತ್ತಾ (ಇದ್ದವನು ಈಗ) ಕಸರೆದವುಏಲ-ತಿರಸ್ಕರಿಸುವೆ ಏಕೆ ? ಇದಿ ಮೇಲು ಘನತನ ಮುಗುನಾ–ಇದು ಮೇಲಾದ ಘನತೆಯೋ ? ; ಔಲೇರಾ–ಹೌದೋ ; ನಿನ್ನೇ ಬಾಯನು–ನನ್ನನ್ನು ಕೈ ಬಿಡನು ಎಂದು, ನಾ ಮದಿ–ನಾನು ಮನಸ್ಸಿನಲ್ಲಿ ; ನಿಜಂಬುನಚು ತಲುಚಿಗದಾ–ನಿಜವಾಗಿ ಭಾವಿಸಿದೆನಲ್ಲವೆ ; ಯಿಪ್ಪುಡುಗದಲಿಚೆನುರಾ–ಈಗ ಅದು ಕದಲಿ ಹೋಯಿತಲ್ಲವೆ ? ; ಫಳಿ ಫಳಿ–ಭಲೆ ! ನೆನರುವಾಡನುಚು–ನೀನು ನೆನಪಿಟ್ಟುಕೊಳ್ಳುವೆ ಎಂದು ; ಎಂಚಿತಿ–ಭಾವಿಸಿದೆ ; ಸರಸ–ಸರಸನಾದವನೆ ; ರಾಕ–ನಿನ್ನ ಬರುವಿಕೆಯ ; ಚನುವು–ಸಲಿಗೆಯು ; ತನಕು–ನನಗೆ ; ಈಗಮನು–ಸಮಾಚಾರವನ್ನು ; ಮರುಗುಪರಿಚಿತಿ–ಮರೆಮಾಡಿದೆ ; ವಾಟಿ ವಾಟಿ–ಮತ್ತೆಮತ್ತೆ ಅವುಗಳನ್ನೇ ; ಪಗಲುನೇ–ಹಗಲಲ್ಲಿ ಕೂಡ ; ಕಂಟಿಕಂಟಿ–ಕನಸು ಕಂಡೆ ; ಪದರಾ–ಬೇಗಬಾ ; ಚಾಲ ವಿರಿಕೋಲಲು–ಅನೇಕ ಪುಷ್ಪಬಾಣಗಳು ; ಬಾಲೆ–ಈ ಬಾಲೆಯನ್ನು ; ತಗಿಲಿಂಚಿದಿವಿ–ನಾಟಿಕೊಂಡಿವೆ

[ಮುಂದಿನ ಭಾಗ ಅಂದರೆ ಕೊನೆಯ ಚರಣ ಅರ್ಥವಾಗುವುದಿಲ್ಲ]

ಭಾವ : ನನ್ನ ಮನೆಗೆ ಬರಬಾರದೆಂದು ಯಾರಾದರೂ ನಿನಗೆ ಏನಾದರೂ ಮದ್ದು ಹಾಕಿದ್ದಾಳೋ ಹೇಗೆ ? ನನ್ನ ಮುದ್ದಿನ ಸ್ವಾಮಿ, ನಾನು ನಿನ್ನ ಬಳಿಗೆ ಬಂದರೆ ನಕ್ಕು ನಗಿಸಿ ಆಲಂಗಿಸಿಕೊಳ್ಳದೆ ಏಕೆ ತಿರಸ್ಕರಿಸುವೆ ? ನನ್ನನ್ನು ಕೈಬಿಡನು ಎಂಬ ಧೈರ್ಯದಿಂದ ನಾನಿದ್ದರೆ ನೀನು ಹೀಗೆ ಮಾಡಬಹುದೆ? ನೀನು ನನ್ನನ್ನು ನೆನೆಯುತ್ತೀಯೆ ಎಂದು ಭಾವಿಸಿದೆನಲ್ಲವೆ? ನಿನ್ನನ್ನೇ ನೆನೆದು ಹಗಲಲ್ಲೂ ಕನಸುಕಾಣುತ್ತಿದ್ದೇನೆ. ಪುಷ್ಪಬಾಣಗಳು ನಾಟಿ ನಾನು ವ್ಯಥೆಪಡುತ್ತಿದ್ದೇನೆ.

6. ರಾಗ : ಚಕ್ರವಾಕ ಆದಿತಾಳ — ಪೊನ್ನಯ್ಯಾಪಿಳ್ಳೈ

ಪ॥ ಸದಯಯಿಕ ತಾಳ ಜಾಲನುರಾ
ಸದಾ ನಾಪೈ ದಯಯುಂಚುಮುರಾ॥

ಅ. ಪ॥ ಮೇದಿನಿಲೋ ಶ್ರೀ ತಂಜ ಬೃಹದೀಶ್ವರಾ
ಮೋದಮುತೋನು ನೆನರುಂಚಿ ನನ್ನೇಲರಾ॥

ಮು. ಸ್ವರ ಸಾಹಿತ್ಯ॥

ಸಾಮಿಕ ನಿನು ಇಕ ಕೌಗಿಟಲೋ ನದಿಮಿಹರ್ಷಮುತೋನು ಕಲಯುಟಕುನೇ॥
ಮಿಗುಲಪಲಚಿತಿರಾ ಇಪುಡು ತ್ವರಿತಮುಗನು ಪದರ ದಯಾಕರುಡು ಅನಿ ಧಾತನುರನಿನ್ನೆಕೋರಿತಿ
ಸದಯ ॥

ಚ॥ ಶಂಬರಾರಿ ವೆಥಲಕೋರ್ವಲೇನುರಾ

1. ಚಾಲನೇ ಚಿಂತನೊಂದಿತಿರಾ॥
2. ಚಕ್ರವಾಕಮು ಏಲೆ ಮೆರೆಯುಚುನ್ನ ಸರೋಜಮುಲು ಚಾಲಕಿಕ್ಕಿರಿ ಅ ಸದಯ॥
3. ಪ್ರೊದ್ದಾಯನು ಮಲಯುಜೂಡು ವಿಸರಗಾನು ಇಪುಡು ನೇ ಮುದಾ ಭ್ರಮಚಿತಿ॥
4. ತುಮ್ಮೆದಲ್ ರವಮುಲು ವಿನಿವಿನಿ ಮಿಗುಲ ನೇ ವೆದಲು ಚೆಂದಿತಿ ಕನೇಲು॥
5. ಕೋಕಿಲ ಕಲ ಪಲುಕುಲನು ವಿನಿ ಸರಸ ನೇ ಪರವಶನ್ಯೆ
ಸದಾ ನಿನು ನೇ ಮದಿ ದಲಚಿ ಏಲಾಗುನಿಕ ನೇ ತಾಳುದುರ ರಸಾಕಾರಾ ಪಲುಮರು॥

ಅರ್ಥ : ಸದಯ–ದಯಾಮಯನೆ; ಇಕ ತಾಳಜಾಲನುರಾ–ಇದನ್ನು ನಾನು ಸಹಿಸಲಾರೆನಪ್ಪ; ಸದಾ–ಯಾವಾಗಲೂ ನಾಪೈ–ನನ್ನಮೇಲೆ; ದಯಯುಂಚುಮುರಾ–ದಯೆತೋರಿಸಪ್ಪ; ಮೇದಿನಿಲೋ–ಭೂಮಿಯಲ್ಲಿ; ತಂಜ ಬೃಹದೀಶ್ವರಾ–ತಂಜಾವೂರಿನ ಶ್ರೀ ಬೃಹದೀಶ್ವರ ಸ್ವಾಮಿಯೇ; ಮೋದಮುತೋ–ಸಂತೋಷವಾಗಿ; ನೆನರುಂಚಿ–ನೆನೆದು; ನನ್ನೆ–ನನ್ನನ್ನು; ಏಲರಾ–ನಿನ್ನ ವಶಪಡಿಸಿಕೊ; ಸ್ವಾಮಿಯೆ, ನಿನು ಇಕ ಕೌಗಿಲೋನು ಅದಿಮಿ–ನಿನ್ನ ಆಲಿಂಗನದಲ್ಲಿ ಸಿಲುಕಿಸಿಕೊಂಡು ಅದುಮುತ್ತಾ; ಹರ್ಷಮುತೋನು–ಹರ್ಷದಿಂದ; ಕಲಯುಟಕುನೇ–ಸೇರಲು; ಮಿಗುಲಪಲಚಿತಿರಾ–ವಿಶೇಷವಾಗಿ ಆಶಿಸಿದೆನು ಸ್ವಾಮಿ; ಇಪುಡು–ಈಗ; ತ್ವರಿತಮುಗನು ಪದರಾ–ತ್ವರೆಯಿಂದ ಹೋಗು; ದಯಾಕರುಡನಿ–ನೀನು ದಯಾಮಯನೆಂದು; ದಾತನುರಾ–ಸಂರಕ್ಷಕನೆಂದು; ನಿನ್ನೆ ಕೋರಿತಿನಿ–ನಿನ್ನನ್ನೇ ಕೋರುತ್ತಿದ್ದೇನೆ; ಶಂಬರಾರಿ–ಶಂಬರಾಸುರನನ್ನು ಸಂಹರಿಸಿದ ಮನ್ಮಥನೇ; ವೆಥಲಕು ಓರ್ವಲೇನುರಾ–ವ್ಯಥೆಯನ್ನು ಸಹಿಸಲಾರೆ; ಚಾಲನೇ–ವಿಶೇಷವಾಗಿ; ಚಿಂತನೊಂದಿತಿರಾ–ಚಿಂತಿಸುತ್ತಿದ್ದೇನೆ; ಚಕ್ರವಾಕಮು ಏಲೆ–ಚಕ್ರವಾಕಗಳು ಗೆಲುವಾಗಿವೆ; ಮೆರೆಯುಚುನ್ನ–ಶೋಭಿಸುವ ಸರೋಜಮುಲು–ತಾವರೆಗಳು; ಚಾಲಕಿಕ್ಕಿರಿ–ಒತ್ತಾಗಿ ಅರಳಿವೆ; ಸದಯ–ದಯಾಮಯನೆ ; ಪ್ರೊದ್ದಾಯೆನು

ಹೊತ್ತಾಯಿತು; ಮಲಯು–ಮಲಯಮಾರುತನು, ಜೂಡು–ನೋಡು; ವಿಸರಗಾ–ಬೀಸಲಾಗಿ; ನೇ ಮುದಾ ಭ್ರಮಿಚಿತಿ-ನಾನು ಸಂತೋಷದಿಂದ ಭ್ರಮಿಸುತ್ತಿದ್ದೇನೆ; ತುಮ್ಮೆದಲು–ದುಂಬಿಗಳ; ರವಮುಲು–ಧ್ವನಿಯನ್ನು; ವಿನಿವಿನಿ–ಕೇಳಿಕೇಳಿ; ಮಿಗುಲ–ಅತಿಶಯವಾಗಿ; ನೇ ವೆದಲು ಚೆಂದಿತಿ–ನಾನು ವ್ಯಥೆಪಡುತ್ತಿದ್ದೇನೆ; ಇಕನೇಲು–ಈಗ ನನ್ನನ್ನು ನಿನ್ನ ವಶಪಡಿಸಿಕೊ; ಸರಸ–ಎಲೆ ಸರಸನೆ; ಕೋಕಿಲ ಕಲ ಪಲಕುಲನು ವಿನಿ–ಕೋಗಿಲೆಗಳ ಕಲಕಲ ಧ್ವನಿಯನ್ನು ಕೇಳಿ, ನೇ ಪರವಶವೈ–ನಾನು ಪರವಶಳಾಗಿ; ಸದಾ ನಿನು ನೇ ಮದಿ–ನಿನ್ನನ್ನು ನನ್ನ ಮನಸ್ಸಿನಲ್ಲಿ; ದಲಚಿ–ಚಿಂತಿಸುತ್ತಾ; ಏಲಾಗುನು–ಯಾವ ರೀತಿಯಿಂದ; ಪಲುಮಾರು–ಹಲವು ಸಾರಿ; ನೇ ತಾಳುದುರಾ– ನಾನು ಸಹಿಸಲಾರೆನಯ್ಯ.

ಭಾವ : ಚಕ್ರವಾಕಗಳು ಸಂತೋಷಪಟ್ಟು, ತಾವರೆಗಳು ಅರಳಿ, ಮಲಯಮಾರುತನು ಬೀಸಿ, ದುಂಬಿಗಳು ಮೊರೆಯುತ್ತಿರಲು ನನ್ನ ಮನಸ್ಸು ಸಹಿಸದೆ ಕಷ್ಟಪಡುತ್ತಿದ್ದೇನೆ. ಕೋಗಿಲೆಗಳ ಕಲಕಲ ಧ್ವನಿಯನ್ನು ಕೇಳಿ ನಿನ್ನನ್ನೇ ಮನಸ್ಸಿನಲ್ಲಿ ಭಾವಿಸುತ್ತಾ ಇದ್ದೇನೆ. ಹೇಗೆ ಸಹಿಸಲಯ್ಯ?

**7.** ರಾಗ : ಶಹನ ರೂಪಕತಾಳ ಪೊನ್ನಯ್ಯಪಿಳ್ಳೈ

ಪ॥ ನೇಟಿಕಿ ದಯವಚ್ಚೆನಾ ಚಕ್ಕನಿ ಸಾಮಿ ॥

ಅ.ಪ॥ ನಾಟಿ ಪ್ರೇಮ ನೀ ಮದಿನಂಟಿಯುನ್ನದೆ ಮೇಲು
ಸಟಿ ನೀ ಮಲ್ಲಾ ಜರ್ನುಮೇಟಿ ಸರಸಗಿರಿಟೆ ॥

ಚ॥ ಏಮೋ ನನು ಮರಚಿ ನಾವನಿ ನಾ ಮದಿನಿ ದಲಚಿತಿರಾಯಿಪುಡು
ನಿಜಮುಗನು ॥

ಅರ್ಥ : ನಾ ಚಕ್ಕನಿಸಾಮಿ–ಸುಂದರನಾದ ನನ್ನ ಸ್ವಾಮಿಯೆ ; ನೇಟಿಕಿ–ಇಂದಿಗೆ ; ದಯವಚ್ಚೆನಾ–ದಯೆ ಬಂದಿತೆ ; ನಾಟಿ ಪ್ರೇಮ–ಅಂದಿನ ಪ್ರೇಮವು ; ನೀಮದಿನಿ–ನಿನ್ನ ಮನಸ್ಸಿನಲ್ಲಿ ; ಅಂಟಿಯುನ್ನದೆ–ಅಂಟಿಕೊಂಡಿದೆಯೆ?; ಮೇಲು-ಒಳ್ಳೆಯದು ; ನನು–ನನ್ನನ್ನು ; ಮರಚಿನಾವು ಅನಿ–ಮರೆತುಬಿಟ್ಟಿದ್ದೀಯೆ ಎಂದು ; ನಾ ಮದಿನಿ–ನಾನು ಮನಸ್ಸಿನಲ್ಲಿ ; ದಲಚಿತಿರಾ–ಯೋಚಿಸುತ್ತಿದ್ದೆನಯ್ಯ ; ಇಪುಡು–ಈಗ ; ನಿಜಮುಗನು–ನಿಜವಾಗಿಯೂ ದಯೆ ಬಂದಿತೆ ?

[ಅನುಪಲ್ಲವಿಯ ಎರಡನೆ ಸಾಲು ಅರ್ಥವಾಗುವುದಿಲ್ಲ]

## ೩. ತಾನವರ್ಣಗಳು

1. ರಾಗ : ಪಂತುವರಾಳಿ ಆದಿತಾಳ

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪ|| ಸಾಮಿ ನಿನ್ನೆ ನಮ್ಮಿನ ನಾಪ್ಪೈ
ಚಲಮೇಲ ಜೇಸೇವುರ
ಅ. ಪ|| ಭೂಮಿವೆಲಯು ಶೇಷಾಚಲೇಂದ್ರ
ಧಾಮ ಶ್ರೀ ವೆಂಕಟೇಶ್ವರ
ಚ|| ಪದರಿ ಮಾರು ಡೈನ

ಅರ್ಥ : ನಿನ್ನೆ ನಮ್ಮಿನ-ನಿನ್ನನ್ನೇ ನಂಬಿದ ; ನಾಪ್ಪೈ-ನನ್ನ ಮೇಲೆ ; ಚಲಮು ಏಲ ಜೇಸೇವುರ-ಏಕೆ ಹಟ ಮಾಡುತ್ತೀಯೆ? ; ಭೂಮಿವೆಲಯು-ಭೂಮಿಯಲ್ಲಿ ಬೆಳಗುವ ; ಶೇಷಾಚಲೇಂದ್ರ ಧಾಮ-ಶೇಷಾಚಲ ಪರ್ವತದಲ್ಲಿ ವಾಸಮಾಡುವ, ಶ್ರೀ ವೆಂಕಟೇಶ್ವರ ; ಪದರಿ-ಉತ್ಸಾಹದಿಂದ ಕೂಡಿದ; ಮಾರುಡೈನ-ಮನ್ಮಥ ಸದೃಶನಾದ.

2. ರಾಗ : ಮಧ್ಯಮಾವತಿ ಆದಿತಾಳ

ತಿರುವೊಟ್ರಿಯೂರ್ ತ್ಯಾಗಯ್ಯರ್

ಪ|| ಸರಗುನ ನನ್ನೇಲ
ಜಾಗೇಲ ಜೇಸೇವುರ ||
ಅ. ಪ|| ವರದುಡೈನ ಮಾ ಚಕ್ಕನಿ
ವೇಣುಗೋಪಾಲದೇವ ||
ಚ|| ಒರುಲ ವೇಡನು ||

ಅರ್ಥ : ವರದುಡೈನ-ವರದನಾದ ; ಮಾ ಚಕ್ಕನಿ-ನನ್ನ ಸುಂದರನಾದ ; ವೇಣುಗೋಪಾಲ ದೇವ, ಸರಗುನ-ಬೇಗನೆ ; ನನ್ನು ಏಲ-ನನ್ನನ್ನು ಆಳಲು ; ಜಾಗುಏಲ-ಸಾವಕಾಶವೇಕೆ? ; ಒರುಲ-ಅನ್ಯರನು ; ವೇಹನು ಬೇಡುವುದಿಲ್ಲ.

3. ರಾಗ : ಆರಭಿ ಆದಿತಾಳ

ಪಲ್ಲವಿ ದೊರೆಸ್ವಾಮಿ ಅಯ್ಯರ್

ಪ|| ಸರಸಿಜ ಮುಖಿರೋ ನೀಕು
ಸರಿಯೆವ್ವರೇ ||
ಅ. ಪ|| ಪರಮಾತ್ಮುಡೈನ ಶ್ರೀ ಸು
ಬ್ರಹ್ಮಣ್ಯುಡೇ ನೀಪ್ಪೈ
ಮರುಲು ಕೊನಿ ಚಾಲ
ಪರವಶುಡೈಯುಂಡಗ ||
ಚ|| ನಳಿನಾಕ್ಷಿ ನಿನ್ನೆಂತೊ ||

ಅರ್ಥ : ಸರಸಿರಮುಖಿರೋ-ಸರಸಿಜ ಮುಖಿಯರಲ್ಲಿ ; ನೀಕು-ನಿನಗೆ ; ಸರಿಯೆವ್ವರೇ-ಸಮರು ಯಾರಿದ್ದಾರೆ ? ; ಪರಮಾತ್ಮುಡೈನ-ಪರಮಾತ್ಮನಾದ ; ಶ್ರೀ ಸುಬ್ರಹ್ಮಣ್ಯುಡೇ-ಸುಬ್ರಹ್ಮಣ್ಯನೇ ; ನೀಪ್ಪೈ-ನಿನ್ನಮೇಲೆ ; ಮರುಲುಕೊನಿ-ಮರುಳಾಗಿ ; ಚಾಲ-ವಿಶೇಷವಾಗಿ ; ಪರವಶುಡೈಯುಂಡಗ-ಪರವಶನಾಗಿರುವಾಗ ನಿನಗೆ ಯಾರು ಸಮ ?

4. ರಾಗ : ಬೇಗಡೆ ಆದಿತಾಳ ಶ್ಯಾಮಾಶಾಸ್ತ್ರಿ

ಪ|| ದಯಾನಿಧೇ ಮಾಮವ ಸ
ದಾ ಶ್ಯಾಮಕೃಷ್ಣ ಪೂಜಿತೇ ||
ಅ. ಪ|| ಭಯಾಪಹಾರಿಣಿ
ಶ್ರೀ ರಾಜರಾಜೇಶ್ವರಿ ||
ಚ|| ಪರಮ ಪಾವನಿ ಭವಾನಿ

ಅರ್ಥ : ಶ್ಯಾಮಕೃಷ್ಣ ಪೂಜಿತೇ-ಶ್ಯಾಮಕೃಷ್ಣನಿಂದ ಪೂಜಿತಳಾದವಳೇ ; ಭಯಾಪಹಾರಿಣಿ–ಭಯವನ್ನು ಅಪಹರಿಸುವವಳೇ ; ಶ್ರೀ ರಾಜರಾಜೇಶ್ವರಿ, ಪರಮಪಾವನಿ, ಭವಾನಿ, ಸದಾ ಮಾಮವ-ಸದಾ ನನ್ನನ್ನು ಕಾಪಾಡು.

5. ರಾಗ : ಕೀರವಾಣಿ ಆದಿತಾಳ ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್

ಪ|| ಚಲಮೇಲ ಜೇಸೇವು ಸಾಮಿ
ಚಾಲ ನಮ್ಮಿಯುನ್ನ ನಾ ಪ್ತೈ||
ಅ. ಪ|| ಪಲುಮಾರು ನಿನ್ನೆ ಕೋರಿನ ನಾತೋ
ಪಲುಕವದೇಮಿ ಶ್ರೀ ವೆಂಕಟೇಶ||
ಚ|| ಮಾರುನಿ ಬಾಧಕೋರ್ವಕ ಲೇನುರಾ||

ಅರ್ಥ : ಚಾಲ ನಮ್ಮಿಯುನ್ನ ನಾಪ್ತೈ–ವಿಶೇಷವಾಗಿ ನಂಬಿಕೊಂಡಿರುವ ನನ್ನ ಮೇಲೆ; ಸಾಮಿ–ಸ್ವಾಮಿಯೆ; ಚಲಮೇಲ ಜೇಸೇವು–ಏಕೆ ಕೋಪಮಾಡಿಕೊಂಡಿದ್ದೀಯೆ?; ಪಲುಮಾರು–ಅನೇಕ ಸಲ ಬಾರಿ ಬಾರಿಗೂ; ನಿನ್ನೆ ಕೋರಿನ ನಾತೋ–ನಿನ್ನನ್ನೇ ಕೋರಿದ ನನ್ನೊಂದಿಗೆ; ಪಲುಕವದೇಮಿ–ಏಕೆ ಮಾತನಾಡೆ? ಶ್ರೀ ವೆಂಕಟೇಶ; ಮಾರುನಿ–ಮನ್ಮಥನ; ಮುಬಾಧಕು–ಬಾಧೆಯನ್ನು; ಓರ್ವಲೇನುರ–ಸಹಿಸಲಾರಳಾಗಿದ್ದೇನೆ.

6. ರಾಗ : ಶ್ರೀ ಆದಿತಾಳ

ಪ|| ಎಂದುಕಿಂತ ಮೋಡಿ ಜೇಸೇವುರ
ಏಮಿನೇರಮುರ ನಾಪೈ ಈ ವೇಳ||
ಅ. ಪ|| ಸುಂದರಾಂಗುಡೈನ ಶ್ರೀ
ಸುಂದರೇಶ್ವರ ನನ್ನೇಲುಕೋರ||
ಚ|| ನೀಸಾಟಿವರುನ್ನಾರೀಧರಲೊ||

ಅರ್ಥ : ಸುಂದರಾಂಗುಡೈನ–ಸುಂದರಾಂಗನಾದ; ಶ್ರೀ ಸುಂದರೇಶ್ವರ, ಇಂತ ಮೋಡಿ ಎಂದುಕ ಜೇಸೇವುರ–ಏಕೆ ಹೀಗೆ ಮೋಡಿಮಾಡುತ್ತಿದ್ದೀಯೆ? ನಾಪೈ–ನನ್ನಮೇಲೆ; ಈ ವೇಳ–ಈ ಸಮಯದಲ್ಲಿ; ಏಮಿ ನೇರಮುರ–ಯಾವ ಅಪರಾಧವಿದೆ? ನನ್ನು ಏಲುಕೋರಾ–ನನ್ನನ್ನು ಆಳಿಕೊ; ಈ ಧರಲೋ–ಈ ಭೂಮಿಯಲ್ಲಿ; ನೀ ಸಾಟಿ ನಿನ್ನ ಸಮಾನರು; ಎವರುನ್ನಾರು–ಯಾರಿದ್ದಾರೆ?

7. ರಾಗ : ಶಹನ ಆದಿತಾಳ

ತಿರುವಟ್ರಿಯೂರ್ ತ್ಯಾಗಯ್ಯರ್

ಪ|| ಕರುಣಿಂಪಯಿದಿ ಮಂಚಿ
ತರುಣಮು ಸಾಮಿ||
ಅ. ಪ|| ಪರುಲವೇಡಲೇನು ನಾ
ಪಾಲಿ ಶ್ರೀ ವೇಣುಗೋಪಾಲದೇವ||
ಚ|| ಕೃಪ ಜೂಡುಮು ಈ ವೇಳ||

ಅರ್ಥ : ಶ್ರೀ ವೇಣುಗೋಪಾಲದೇವ, ಇದಿ–ಇದು; ಕರುಣಿಂಪ–ಕರುಣಿಸಲು; ಮಂಚಿ ತರುಣಮು ಸಾಮಿ–ಒಳ್ಳೆಯ ಸಮಯವಾಗಿದೆ ಸ್ವಾಮಿ; ಪರುಲ–ಪರರನ್ನು; ವೇಡಲೇನು–ಬೇಡಲಾರೆ; ನಾ ಪಾಲಿ–ನನ್ನನ್ನು ಪಾಲಿಸು; ಈ ವೇಳ–ಈ ಸಮಯದಲ್ಲಿ; ಕೃಪ ಜೂಡುಮು–ಕೃಪೆಯಿಂದ ನೋಡು.

8. ರಾಗ : ಬಿಲಹರಿ ಆದಿತಾಳ

ತಿರುವಟ್ರಿಯೂರ್ ತ್ಯಾಗಯ್ಯರ್

ಪ|| ಇಂತ ಚೌಕಸೇಯ
ಯಿದಿ ಮೇರಗಾದುರಾ ಸಾಮಿ||
ಅ. ಪ|| ಪಂತಮೇಲರಾ ನಾತೋ ವೇಣುಗೋ
ಪಾಲ ರಾರಾ ಯೀ ವೇಳ||
ಚ|| ನಿನ್ನೇ ಕೋರಿಯುನ್ನಾನುರಾ||

ಅರ್ಥ : ಇಂತ-ಹೀಗೆ; ಚೌಕಸೇಯ–ಅಗ್ಗವಾಗಿ ಪರಿಗಣಿಸುವುದು; ಇದಿ ಮೇರಗಾದುರಾಸಾಮಿ–ಇದು ಯೋಗ್ಯವಾದುದಲ್ಲ ಸ್ವಾಮಿ; ನಾತೋ–ನನ್ನ ಮೇಲೆ; ಪಂತಮೇಲರಾ–ಹಟವೇನು? ವೇಣುಗೋಪಾಲ, ಈ ವೇಳ ರಾರಾ–ಈಗ ಬಾ; ನಿನ್ನೇ ಕೋರಿಯುನ್ನಾನುರಾ–ನಿನ್ನನ್ನೇ ಬೇಡುತ್ತಿದ್ದೇನೆ.

9. ರಾಗ : ಗೌಳ ಆದಿತಾಳ

ತಿರುವಟ್ರಿಯೂರ್ ತ್ಯಾಗಯ್ಯರ್

ಪ|| ಚೆಲಿಮಿ ಕೋರಿ ವಚ್ಚಿಯುನ್ನದಿ
ಚಿತ್ತಮು ನಾದು ಭಾಗ್ಯಮು ||
ಅ. ಪ|| ಸುಲಲಿತಗುಣ ಶ್ರೀಲೋಲ
ಸರಸ ಶ್ರೀ ವೇಣುಗೋಪಾಲ ||
ಚ|| ಎಂಚಿ ಜೂಡ ನೀ ಸರಿಗಾದುರಾ ||

ಅರ್ಥ : ಸುಲಲಿತ ಗುಣ ಶ್ರೀ ಲೋಲ, ಸರಸ ಶ್ರೀ ವೇಣುಗೋಪಾಲ, ಚೆಲಿಮಿಕೋರಿ–ಸ್ನೇಹವನ್ನು ಬಯಸಿ ; ವಚ್ಚಿಯುನ್ನದಿ–ಬಂದಿರುವುದು ; ಚಿತ್ತಮು ನಾದು ಭಾಗ್ಯಮು–ನಿನ್ನ ಚಿತ್ತ, ನನ್ನ ಭಾಗ್ಯ ; ಎಂಚಿಜೂಡ–ಎಣಿಸಿನೋಡಿದರೆ ; ನೀ ಸರಿಗುದುರಾ–ನಿನ್ನ ಸಮರು ಯಾರೂ ಇಲ್ಲವಯ್ಯ.

**10.** ರಾಗಮಾಲಿಕಾವರ್ಣ

ಕರ್ಣಾಟಕ ಕಾಪಿ ತ್ರಿಶ್ರ ಏಕತಾಳ ಸ್ವಾತಿ ತಿರುನಾಳ್

ಪ|| ಸುಮಸಾಯಕ ವಿಧುರಾಮುವ ಮಾಧವ ಸುದತೀ ಮತಿ ಧೀನಾಂ
ಅ. ಪ|| ರಮಣೀಮಣಿಶಯನೇ ತವ ರತಿ ಲಾಲಸ ಹೃದಯಾ
ರಮಯನ ಬಹುಬಾಧಯಾ ಸಖೀ ಸರಸೀರುಹನಾಭಾ||
ಚ|| ಮಾನಿನೀ ತಾಪಂ ಹರೇ ರೇ ||

**11.** ರಾಗ : ನವರಸಕನ್ನಡ ಆದಿತಾಳ ಆರ್. ಎನ್. ದೊರೆಸ್ವಾಮಿ

ಪ|| ಸಾಮಿ ನಿನ್ನೇ ಕೋರಿಯುನ್ನಾನು
ನಾಮೀದ ದಯಯುಂಚರಾ ಈ ವೇಳ
ಅ. ಪ|| ಕಮನೀಯ ಸುಂದರಾಕಾರ
ತಾಮಸಮು ಸೇಯಕ ಲಕ್ಷ್ಮೀರಮಣ ||
ಚ|| ನಾ ಮೊರ ವಿನರಾದಾ ವಾದ ||

ಅರ್ಥ : ಸಾಮಿ–ಸ್ವಾಮಿ ; ನಿನ್ನೇ ಕೋರಿಯುನ್ನಾನು-ನಿನ್ನನ್ನೇ ಪ್ರಾರ್ಥಿಸುತ್ತಿದ್ದೇನೆ ; ಈ ವೇಳ-ಈಗ ; ನಾಮೀದ-ನನ್ನಮೇಲೆ ; ದಯಯುಂಚರಾ–ದಯೆ ತೋರಿಸಯ್ಯ ; ಕಮನೀಯ-ಮನೋಹರವಾದ ; ಸುಂದರಾ ಲಕ್ಷ್ಮೀರಮಣ, ತಾಮಸಮು ಸೇಯಕ-ತಡಮಾಡಬೇಡ ; ನಾ ಮೊರ–ನನ್ನ ಮೊರೆಯು ; ವಿನರಾದಾ-ಕೇಳಿಸುತ್ತಿಲ್ಲವೆ ; ವಾದ-ಹಟವೇಕೆ ?

**12.** ರಾಗ : ವರಾಳಿ ಆದಿತಾಳ ಆರ್. ಎನ್. ದೊರೆಸ್ವಾಮಿ

ಪ|| ಕಮಲಾಕ್ಷಿ ನೀಪೈ ಚಾಲ ಮರುಲುಕೊನ್ನದಿ
ಅ. ಪ|| ಕಾಮಿಂಚಿ ನೀ ಚೆಲಿಮಿ ಕೋರಿಯುನ್ನದಿರಾ ||
ಚ|| ಕೃಪ ಜೂಡರಾ ಲಕ್ಷ್ಮೀರಮಣ ||

ಅರ್ಥ : ಲಕ್ಷ್ಮೀರಮಣ, ಕಮಲಾಕ್ಷಿ-ತಾವರೆಯಂತೆ ಕಣ್ಣುಳ್ಳವಳು, ನೀಪೈ–ನಿನ್ನ ಮೇಲೆ ; ಚಾಲ-ವಿಶೇಷವಾಗಿ ; ಮರುಲುಕೊನ್ನದಿ–ಮರುಳಾಗಿದ್ದಾಳೆ ; ಕಾಮಿಂಚಿ–ನಿನ್ನನ್ನು ಮೋಹಿಸಿ ; ನೀ ಚೆಲಿಮಿ–ನಿನ್ನ ಸ್ನೇಹವನ್ನು ; ಕೋರಿಯುನ್ನದಿರಾ-ಕೋರುತ್ತಿದ್ದಾಳೆ ; ಕೃಪಜೂಡರಾ–ಕೃಪೆಯಿಟ್ಟು ನೋಡು.

## ೪. ಪದವರ್ಣಗಳು

1. ರಾಗ : ವಸಂತ ಝಂಪೆತಾಳ ರಾಮನಾಡ್ ಶ್ರೀನಿವಾಸಯ್ಯಂಗಾರ್

ಪll ದಾನಿ ಕೋರಿಕನು ನೆರವೇರ್ಚುಟಕಿದೇ ತಗಿನ ಸಮಯಮುರಾ ತಾಮರಸಾಕ್ಷ ll

ಅ. ಪll ಮಾನಿನಿ ನೀಪ್ಪೈ ಮರುಲುಕೊನ್ನದಿರಾ ಮದನಾಭಿರಾಮ ಶ್ರೀನಿವಾಸll

ಮುಕ್ತಾಯ ಸ್ವರ ಸಾಹಿತ್ಯll ಸಾರತರಮ್ಮೈ ನಳಿನಾಕ್ಷಿ ನಿನ್ನು ದಲಚಿ ವಲಪು ಮೀರಿ

ಸೊಗಸುಗಲ ನೀ ರತಿನಿ ಸರಗುನ ಚೇಕೊನಿ
ಸರಸಮಾಡುಟಕು ಸದಯುಡೈನ ಪ್ರಾಣದುನಿ

ಚರಣll ದಯಯುಂಚಿ ದಾನಿವೆತದೀರ್ಚುರಾll
ಬಿಲುಚುಕೊನಿರಾವೇಯನಿ ಕರಗಿ ನಾಯೆಡ ಬಲಿಕಿನll

ಎತ್ತುಗಡೆ ಸ್ವರಗಳ ಸಾಹಿತ್ಯll

1. ವೇಮಾಟಕಿ ಬಡಲಿ ನಿನ್ನೆ ಕನವಲಯುನನೆನುರll
2. ಜಾರ ಚೋರಯಲ ಸಾರಸಾಕ್ಷಿ ನಿನು ಚೇರಕೋರಿನದಿ ರಾರಾ
   ಕ್ರೂರ ಮರುಬಾರಿಕೋರ್ವದುರಾll
3. ಕಲಸ್ವನಮುಗಲ ಕಲಿಕೆ ಮಲಸಿ ಸೊಲಸಿಲಲಿ ನಿನು
   ಕಲಯುಟಕು ವಲಚಿನದಿ ವಿಲಂಬಿತಮು ವಲದು ನೀವುll
4. ದಾನಿ ಚತುರತರ ಸರಸಗುಣಮುಲ ನೇನು ಪೊಗಡಿ
   ದೆಲುಪತರಮಾ ಯತಿಶಯಮುಗಾ
   ವನಿತಾಮಣಿಕಿ ಅಧರಮಧುನು ನೊಸಗಿ ಸುಖಪರಚಿ
   ಚೆಲಿಮಿಚೇಯುಟಕು ತಗಿನದಿರಾ ರಮಣ ಶುಭಕರll

ಅರ್ಥ : ತಾಮರಸಾಕ್ಷ–ತಾವರೆಯಂತೆ ಕಣ್ಣುಳ್ಳವನೆ; ದಾನಿಕೋರಿಕನು–ಅವಳ ಕೋರಿಕೆಯನ್ನು; ನೆರವೇರ್ಚುಟಕು–ನೆರವೇರಿಸಲು; ಇದೇ ತಗಿನ ಸಮಯಮುರಾ-ಇದೇ ತಕ್ಕ ಸಮಯವಾಗಿದೆ; ಮದನಾಭಿರಾಮ, ಶ್ರೀನಿವಾಸ, ಮಾನಿನಿಯು ನೀಪ್ಪೈ–ನಿನ್ನ ಬಗೆಗೆ; ಮರುಲು ಕೊನ್ನದಿರಾ–ಮರುಳಾಗಿದ್ದಾಳೆ; ನಳಿನಾಕ್ಷಿ–ತಾವರೆಯಂತೆ ಕಣ್ಣುಳ್ಳ ಅವಳು; ಸಾರತರಮ್ಮೈ–ಗಾಢವಾಗಿ; ನಿನ್ನು ದಲಚಿ–ನಿನ್ನನ್ನೇ ಭಾವಿಸಿ; ವಲಪುಮೀರಿ- ಅತಿಶಯವಾದ ಒಲವಿನಿಂದ; ಸೊಗಸುಗಲ–ಸೊಗಸಾಗಿ; ಸರಗುನ-ಬೇಗ; ನೀರತಿನಿ ಚೇಕೊನಿ–ನಿನ್ನೊಂದಿಗೆ ಶೃಂಗಾರದಲ್ಲಿ ತೊಡಗಿ; ಸರಸಮಾಡುಟಕು–ಸರಸವಾಡಲು; ಸದಯುಡೈನ–ಸದಯನಾಗಿರುವ; ಪ್ರಾಣದುನಿ–ಪ್ರಾಣದನನ್ನು; ಪಿಲುಚುಕೊನಿ–ಕರೆದು; ರಾವೇಯನಿ–ಬಾರೇ ಎಂಬುದಾಗಿ; ಕರಗಿ-ಸೋತು; ನಾಯೆಡ ಬಲಿಕಿನ–ನನ್ನೊಂದಿಗೆ ಹೇಳಿದುದರಿಂದ; ದಯಯುಂಚಿ–ದಯವಿಟ್ಟು; ದಾನಿವೆತದೀರ್ಚುರಾ–ಅವಳ ವ್ಯಥೆಯನ್ನು ಪರಿಹರಿಸು; ವೇಮಾಟಕಿ–ಸಾವಿರಬಾರಿಗೂ; ಬಡಲಿ–ಬಳಲಿ; ನಿನ್ನೆ–ನಿನ್ನನ್ನೆ; ಕನವಲಯುನು ಅನೆನುರಾ–ಕಾಣಬೇಕು ಎಂದಳಯ್ಯ; ಜಾರಚೋರ, ಅಲಸಾರಸಾಕ್ಷಿ–ಆ ಸಾರಸಾಕ್ಷಿಯು; ನಿನುಚೇರ–ನಿನ್ನನ್ನು ಸೇರಲು ಕೋರಿನದಿ–ಕೋರಿದ್ದಾಳೆ; ರಾರಾ–ಬಾರಯ್ಯ; ಕ್ರೂರ ಮರುಬಾರಿಕಿ–ಕ್ರೂರನಾದ ಮದನನ ಧಾಳಿಗೆ;

ಓರ್ವಕುರಾ–ಸಹಿಸಲಾರಳಯ್ಯ; ಕಲಯುಟಕು–ನಿನ್ನನ್ನು ಸೇರಲು; ವಲಚಿನದಿ–ಬಯಸಿದ್ದಾಳೆ; ನೀಳ ವಿಲಂಬಿತಮು ವಲದು–ನೀನು ವಿಳಂಬ ಮಾಡಬಾರದು; ದಾನಿ–ಅವಳ; ಚತುರತರ ಸರಸಗುಣಮುಲ–ಸರಸ ಗುಣಗಳನ್ನು; ನೇನು–ನಾನು; ಪೊಗಡಿ–ಹೊಗಳಿ; ದೆಲುಪ ತರಮಾ–ತಿಳಿಸಲು ಸಾಧ್ಯವಿದೆಯೇ?; ಅತಿಶಯಮುಗಾ–ಅತಿಶಯವಾಗಿ; ವನಿತಾಮಣಿಕಿ–ಅವಳಿಗೆ; ಅಧರ ಮಧುನು ನೊಸಗಿ–ನಿನ್ನ ಅಧರಾಮೃತ ವನ್ನು ನೀಡಿ; ಸುಖಪರಚಿ–ಅವಳನ್ನು ಸುಖಪಡಿಸಿ; ಚೆಲಿಮಿ ಜೇಯುಟಕು–ಸ್ನೇಹವನ್ನು ಉಂಟುಮಾಡಿ ಕೊಳ್ಳಲು; ತಗಿನದಿರಾ-ತಕ್ಕುದಾಗಿದೆ, ಅವಳು ಅದಕ್ಕೆ ಅರ್ಹಳಾಗಿದ್ದಾಳೆ.

ಸಾರಾಂಶ : ಮದನಾಭಿರಾಮ ಶ್ರೀನಿವಾಸ, ಅವಳು ನಿನ್ನನ್ನೇ ನೆನೆದು ಹಂಬಲಿಸುತ್ತಿದ್ದಾಳೆ, ನಿನಗೆ ಮರುಳಾಗಿದ್ದಾಳೆ. 'ನನ್ನ ಪ್ರಾಣದಾಯಕನೊಂದಿಗೆ ಸರಸವಾಡಲು ಕಾತರಿಸಿದ್ದೇನೆ, ಕರೆದು ತಾರೇ' ಎಂದು ನನಗೆ ಹೇಳುತ್ತಾಳೆ. ದಯವಿಟ್ಟು ಬಂದು ಅವಳ ವ್ಯಥೆಯನ್ನು ತೀರಿಸಯ್ಯ. ಕ್ರೂರವಾದ ಮದನನ ಧಾಳಿಗೆ ಸಿಲುಕಿ ಕಷ್ಟಪಡು ತ್ತಿದ್ದಾಳೆ. ಅವಳ ಸರಸ ಗುಣಗಳನ್ನು ನಾನು ಹೊಗಳಿ ಹೇಳಲು ಸಾಧ್ಯವಿದೆಯೆ? ಅವಳನ್ನು ಸುಖಪಡಿ ಸಲು ಇದು ತಕ್ಕ ಸಮಯ.

2. ರಾಗ : ತೋಡಿ ಆದಿತಾಳ ಶಿವಾನಂದಂ

ಪ|| ದಾನಿ ಸಾಟಿ ಜೋಡಿಲೇದುರಾ ದಯಯುಂಚಿ ಈ ವೇಳರಾ
ಅ.ಪ|| ಮಾನಿತ ಗುಣಸಾಂದ್ರ ಮಾ ಪೋಸಲ ಕುಲಾಬ್ಧಿ ಚಂದ್ರ
ಜಾನವೌನೀ ಶಿವಾಜೇಂದ್ರಾ ಜಾಲಮೇಲ ತಾಳಜಾಲ ಈ ವೇಳ ||

ಮುಕ್ತಾಯ ಸ್ವರ ಸಾಹಿತ್ಯ ||

ಸಾಮಿಗಾವಿನು ನೀಕು ತಗಿನದಿರಾ ರತಿ ಸಲುಪುವಿದಮುನ
ತನಕು ಸರಿಸತಿಲೇರನಿ ಪಲುಕುಚುನು ನಿನುಕೋರಿ ತನು ಮೀರಿನದಿ ಈ ಸಾರಿ ||

ಚರಣ|| ಕಾರಡಮು ಜೇಸೇದಿ ಮೇರ

ಎತ್ತುಗಡೆ ಸ್ವರಗಳ ಸಾಹಿತ್ಯ ||

1. ವೇಗರಮ್ಮನದಿರಾ ಪದರಾ ಮರಿ ||
2. ನೀ ಸರಿದೊರಲುಲೇರನುಚು ಅದಿ ನನ್ನು ಕಲಯನುಯುನ್ನ ಮಗುವಪ್ಪೈ ||
3. ಪ್ರಾಣನಾಥುಡು ಏಲರಾಡನಿ ಪಲ್ಕುಚುನು ವಿರಿಪಾನ್ಪುಪ್ಪೆಯದಿ
ಪೊರಲುಚು ನಿನುದಲಚಿ ನನುಪಿಲಿಚಿ ತೆಲುಪವಲೆನುಯಿಕನು ಸಖಿಯರೊ ಅನೆರ||
4. ಎಂತನು ಸಹಿಂಚುನನಿ ಯೆಂಚಗನೇ ವಂಚನುಲುಯುಂಚ ತಗುನಟರಾ
ನಿಮಿಷಂಬು ನೋರ್ವದುರಾ ವಿನರಾ ಚನು ಮೀರ
ಚೆಂತನುಜೇರಿ ಕೌಗಲಿಂಚುಟಕು ಸಮಯಮು ವಚ್ಚಿ ಮೋವಿನೀರ
ನಿನುಗಾಚಿನದಿ ಈವರಕು ||
5. ಪೋಸಲ ಕುಲಮುನ ವೆಲಯು ಶ್ರೀ ಸರಸಭೂಪತಿ ನಿನ್ನೇ ಕಲಯ
ಗೋರಿಯುನ್ನದಾನಿ ಗಾರವಿಂಚಿ ನೀವು ಪ್ರೇಮುಮೀರ ಕಾಮುಕೇಳಿಕೂಡರಾ
ದಾನಿವಿಂತಲನ್ನಿ ಜೂಚಿ ಚಾಲಮೆಚ್ಚಿ ಬಾಸಲಿಚ್ಚಿ ನಿನು ವಿಡನನನುಚುನು

ಪಲುಕುದುವುರಾ
ಮನವಿನಿ ಕೈಕೊನರಾ ಸುಗುಣಾಕರ ಸರಸುಡನುಚು ಮದಿನಿ ದಲಚಿ
ಪಿಲುವಮನೆರಾ ಕಲಿಕಿಯಿಪುಡು ||

ಅರ್ಥ : ಗುಣಸಾಂದ್ರ, ಪೋಸಲಕುಲಾಬ್ಧಿ ಚಂದ್ರ, ದಾನಿಸಾಟಿ-ಅವಳ ಸಮರಾದ ; ಬೋಡಿಲೇದುರಾ-ಹೆಂಗಸು ಬೇರೆ ಯಾರೂ ಇಲ್ಲ ; ದಯಯುಂಚಿ-ದಯವಿಟ್ಟು ; ಈ ವೇಳ-ಈಗ ; ರಾ-ಬಾ ; ಜಾಲಮೇಲ-ಸಾವಕಾಶ ವೇಕೆ ? ; ತಾಳಜಾಲ-ನಾನು ತಾಳಲಾರೆ ; ಸಾಮಿಗಾವಿನು-ನನ್ನ ಸ್ವಾಮಿಯಾಗಿ ನೀನು ಕೇಳು ; ತಗಿನದಿರಾ-ಇದು ನಿನಗೆ ತಕ್ಕುದಾಗಿದೆ ; ರತಿ ಸಲುಪು ವಿದಮುನ-ರತಿ ಸಲ್ಲಿಸುವ ವಿಧಾನಗಳಲ್ಲಿ; ತನಕು ಸರಿ ಸತಿ ಲೇರನಿ-ತನಗೆ ಸಮನಾದ ಸತಿ ಬೇರಿಲ್ಲವೆಂದು ; ಪಲುಕುಚುನು-ಹೇಳುತ್ತ ; ನಿನು ಕೋರಿತನು ಮೀರಿ ನದಿ-ಪ್ರಾರ್ಥಿಸುತ್ತಿದ್ದಾಳೆ ; ವೇಗ ರಮ್ಮನದಿರಾ-ಬೇಗನೆ ಬರಹೇಳಿದ್ದಾಳೆ ; ಮರಿ ಪದರಾ-ಮತ್ತೆ, ನಡೆ ! ಪ್ರಾಣನಾಥುಡು-ನನ್ನ ಪ್ರಾಣನಾಥನು ; ಏಲರಾಡು ಅನಿ-ಏಕೆ ಬರಲೊಲ್ಲೆ ಎಂದು ; ಪಲ್ಕುಚುನು-ನುಡಿಯುತ್ತ ; ವಿರಿಪಾನ್ಪುಪೈಯದಿ-ಹೂವಿನ ಹಾಸಿಗೆಯ ಮೇಲೆ ; ಪೊರಲುಚು-ಹೊರಳಾಡುತ್ತ ; ನಿನ್ನ ದಲಚಿ-ನಿನ್ನನ್ನೇ ಚಿಂತಿಸಿ ; ನನುಪಿಲಿಚಿ-ನನ್ನನ್ನು ಕರೆದು ; ಸಖಿಯರೋ-ಸಖಿಯರೆ ; ಇಕನು ತೆಲುಪವಲೆನು-ಇನ್ನು ತಿಳಿಸಿಬನ್ನಿರಿ ; ಅನೆರಾ-ಎಂದಳಯ್ಯ ; ನೀ ಸರಿದೊರಲುಲೇರನುಚು-ನಿನ್ನ ಸರಿದೊರೆ ಯಾರೂ ಇಲ್ಲವೆಂದು ; ನಿನ್ನು-ನಿನ್ನನ್ನು ; ಕಲಯನುಯುನ್ನ-ಸೇರಬೇಕೆಂದು ಕಾದಿರುವ ; ಮಗುವಪೈ-ಹೆಣ್ಣಿನ ಮೇಲೆ, ಅಸಮಾಧಾನವೇಕೆ ? ಎಂತನು ಸಹಿಂಚು-ಎಷ್ಟಾದರೂ ಸಹಿಸಿಕೊಳ್ಳುತ್ತಾಳೆ ; ಎಂಚಗನಿ-ಎಂದುಕೊಂಡು ; ವಂಚನುಲು ಉಂಚ-ವಂಚನೆ ಮಾಡುವುದು ; ತಗುನಟರಾ-ತಕ್ಕುದಲ್ಲವಯ್ಯ ; ನಿಮಿಷಂಬುಗನು-ನಿಮಿಷಮಾತ್ರವಾದರೂ; ಓರ್ವದುರಾ-ಸಹಿಸಲಾರಳಯ್ಯ; ವಿನರಾ-ಕೇಳು; ಚನು ಮೀರ-ಅಧಿಕವಾದ ಸ್ನೇಹದಿಂದ ; ಚಂತನುಜೇರಿ-ನಿನ್ನ ಪಕ್ಕಕ್ಕೆ ಬಂದು ; ಕೌಗಲಿಂಚುಟಕು-ಆಲಂಗಿಸಿಕೊಳ್ಳಲು ; ಸಮಯಮು-ಇದು ಸಮಯವಾಗಿದೆ ; ವಚ್ಚಿ-ಬಂದು ; ಮೋವಿನೀರ-ಮುಖವನ್ನು ಕೊಡು ; ಈ ವರಕು-ಇದುವರೆಗೂ; ನಿನುಗಾಚಿನದಿ-ನಿನ್ನನ್ನು ಕಾದಿದ್ದಾಳೆ ; ಪೋಸಲ ಕುಲದಲ್ಲಿ, ವೆಲಯು-ಪ್ರಸಿದ್ಧನಾದ ಸರಸಭೂಪತಿಯೆ ; ನಿನ್ನೇ-ನಿನ್ನನ್ನು ; ಕಲಯ-ಸೇರಲು ; ಕೋರಿಯುನ್ನದಾನಿ-ಕೋರುತ್ತಿರುವ ಅವಳನ್ನು; ಗಾರವಿಂಚಿ-ಗೌರವಿಸಿ ; ನೀವು-ನೀನು ; ಪ್ರೇಮಮೀರ-ಅಧಿಕವಾದ ಪ್ರೇಮದಿಂದ ; ಕಾಮಕೇಳಿಕೂಡರಾ-ಅವಳೊಂದಿಗೆ ಪ್ರೇಮಕೇಳಿಯಲ್ಲಿ ಕೂಡು ; ದಾನಿವಿಂತಲನ್ನಿ ಜೂಚಿ-ಅವಳ ಕುಶಲ ಚಮತ್ಕಾರಗಳನ್ನು ನೋಡಿ ; ಬಾಸಲಿಚ್ಚಿ-ಮಾತುಕೊಟ್ಟು ; ಚಾಲಮೆಚ್ಚಿ-ತುಂಬ ಮೆಚ್ಚಿ ; ನಿನು ವಿಡವನು-ನಿನ್ನನ್ನು ಬಿಡೆನು ; ಅನುಚುನು-ಎನ್ನುತ್ತಾ ; ಪಲುಕುದುವುರಾ-ಹೇಳುವೆ; ನಾ ಮನವಿನಿ-ನನ್ನ ಮನವಿಯನ್ನು ; ಕೈಕೊನರಾ-ಕೈಗೊಳ್ಳು ; ಸುಗುಣಕರ, ಸರಸುಡು ಅನುಚು-ನೀನು ಸರಸನು ಎಂದು ; ಮದಿನಿದಲಚಿ-ಮನಸ್ಸಿನಲ್ಲಿ ಭಾವಿಸಿ ; ಪಿಲುವುಮು ಅನೆರಾ-ಕರೆ ಎಂದಳು.

ಭಾವ : ಅವಳ ಸಮಳಾದ ಹೆಂಗಸು ಬೇರೆಯಾರೂ ಇಲ್ಲವಯ್ಯ, ಪೋಸಲಕುಲವೆಂಬ ಸಮುದ್ರಕ್ಕೆ ಚಂದ್ರನಂತಿರುವವನೇ, ಬೇಗನೆ ಬಾ, ಏಕೆ ಸಾವಕಾಶ ಮಾಡುತ್ತಿದ್ದೀಯೆ ? ಶೃಂಗಾರ ಕ್ರೀಡೆಯಲ್ಲಿ ತನಗೆ ಸರಿಸಾಟಿ ಬೇರೆ ಯಾರೂ ಇಲ್ಲವೆಂದು ಅವಳು ನಿನ್ನನ್ನು ಕೋರುತ್ತಿದ್ದಾಳೆ. ನನ್ನ ಪ್ರಾಣನಾಥನು ಇನ್ನೂ ಏಕೆ ಬರಲಿಲ್ಲ ಎನ್ನುತ್ತಾ, ಹೂವಿನ ಹಾಸಿಗೆಯ ಮೇಲೆ ಹೊರಳಾಡುತ್ತಾ ನಿನ್ನನ್ನೇ ಸದಾ ಚಿಂತಿಸಿ ಕೊರಗುತ್ತಿದ್ದಾಳೆ. 'ಸಖಿಯರೆ, ಅವನ ಸಮಾನ ಬೇರೆ ಯಾರೂ ಇಲ್ಲ, ಈ ಹೆಣ್ಣಿನ ಮೇಲೆ ಅವನಿಗೆ ಏಕೆ ಅಸಮಾಧಾನ ? ವಿರಹವೇದನೆ ಎಷ್ಟಾದರೂ ಸಹಿಸಿಕೊಂಡಾಳು ಎಂದು ವಂಚಿಸುವುದು ತಕ್ಕುದಲ್ಲವಯ್ಯ ಎಂದು ಹೇಳಿ ಕರೆತನ್ನಿರಿ'-ಎಂದಳು. ನಿಮಿಷ ಮಾತ್ರವಾದರೂ ನಿನ್ನ ಅಗಲಿಕೆಯನ್ನು ಅವಳು ಸಹಿಸಳು.

ಅವಳೊಂದಿಗೆ ಸೇರಿ, ಗಾಢವಾದ ಆಲಿಂಗನದಲ್ಲಿ ಅವಳಿಗೆ ಸಂತೋಷ ನೀಡಿ, ಅವಳ ಕುಶಲ ಚಮತ್ಕಾರಗಳನ್ನು ನೋಡಿ ಮೆಚ್ಚಿ, 'ನಿನ್ನನ್ನು ಕೈಬಿಡುವುದಿಲ್ಲ' ಎಂದು ಮಾತುಕೊಟ್ಟು ಸಮಾಧಾನ ಮಾಡಯ್ಯ.

3. ರಾಗ : ಧನ್ಯಾಸಿ ಆದಿತಾಳ ಪೊನ್ನಯ್ಯಪಿಳ್ಳೈ

ಪ|| ಸಾಮಿ ನಾ ಪೈ ದಯರಾದಾ ಚಾಲವೇಡಗ

ಅ. ಪ|| ಕಾಮಿತಾರ್ಥಮುಲಿಚ್ಚಿ ಕಲಯು ಸಂತಾನರಾಮ||

ಮುಕ್ತಾಯ ಸ್ವರ ಸಾಹಿತ್ಯ|| ಎಂತೋ ದಲಚಿ ಕಾಚಿಯುನ್ನಾನುರಾ ನೀದು ಕೌಗಿಟ<br>ನನ್ನು ಜೇರ್ಚುಟಕು ಕಿನುಕಸೇಯುಟಕು ತಗದುರಾ ಇಪುಡು<br>ಸಾಕ್ಷಾತ್ಕಾರುಡ ವೈವೆಲಯು||

ಚರಣ|| ಮಾರುಡು ಇದಿಗೊ ವಚ್ಚಿ

ಎತ್ತುಗಡೆ ಸ್ವರಗಳ ಸಾಹಿತ್ಯ||

1. ರೇ ರಾಜು ನೀ ಚಿಂತನಲುಂಚಗ
2. ಕಾರಣಮುಲು ಚಲುಪತಗದುರಾ ಪದರಿಯುನ್ನಾಡದಿಗೊ
3. ನೀ ದಯಗಲಗಿನ ಸತುಲಲೋ ನನ್ನೊಗತಿಗಾನೆನಚು<br>ಮದಿನೀಪಾಲಿಯಿನ ನಾ ವೆಥದೀರ್ಚುಟಕು ತಾಮಸುಡುರಾ ನರ ನೇತಾಳನುರಾ||
4. ಜುಂಮೆನಚು ಪಲಿಕೆರ ತುಮ್ಮೆದಲ್ ನಾ ಚೆವುಲು ಚುರುಕ್ಕೆನುಚು ಮರಿ<br>ಏಮಿ ಜೇತು ಓರ್ವಲೇನುರಾ ನೀದು ಮೋಮಿನೀಯರಾ ನೇ<br>ನಿಂಪೈತಿನಿರಾ ಸುಖಂ ಬೀಯ ಇಟು ಮೆಚ್ಚಿ ನನು ವಚ್ಚಿ<br>ಕೌಗಲಿಚ್ಚಿ ದಮಿಯೆಚ್ಚ ಸೇಯು||

ಅರ್ಥ : ಸಾಮಿ–ಸ್ವಾಮಿಯೆ; ಚಾಲವೇಡಗ–ಅತಿಶಯವಾಗಿ ಬೇಡಿಕೊಂಡರೂ; ನಾ ಪೈ–ನನ್ನಮೇಲೆ; ದಯರಾದಾ–ದಯೆ ಬರುವುದಿಲ್ಲವೆ? ಸಂತಾನರಾಮ, ಕಾಮಿತಾರ್ಥಮುಲಿಚ್ಚಿ–ಅಪೇಕ್ಷೆಯನ್ನು ಪೂರೈಸಿ; ಕಲಯು–ನನ್ನನ್ನು ಕೂಡು; ಎಂತೋ ದಲಚಿ–ಎಷ್ಟೆಷ್ಟೋ ಚಿಂತಿಸಿ; ಕಾಚಿಯುನ್ನಾನುರಾ-ಕಾದಿದ್ದೇನೆ ಸ್ವಾಮಿ; ನೀದು ಕೌಗಿಟ–ನಿನ್ನ ಆಲಿಂಗನಕ್ಕೆ; ನನ್ನು ಜೇರ್ಚುಟಕು–ನನ್ನನ್ನು ಸೇರಿಸಿಕೊಳ್ಳುವುದರಲ್ಲಿ; ಕಿನುಕ ಸೇಯುಟಕು–ತಕರಾರು ಮಾಡುವುದು; ತಗದುರಾ–ಸರಿಯಲ್ಲವಯ್ಯ; ಇಪುಡು–ಈಗ; ಸಾಕ್ಷಾತ್ಕಾರುಡವೈ–ಪ್ರತ್ಯಕ್ಷನಾಗಿ; ವೆಲಯು–ಕಾಪಾಡು; ಇದಿಗೋ–ಇದೋ; ಮಾರುಡು–ಮನ್ಮಥನು; ವಚ್ಚಿ-ಬಂದನು; ನೀ ಚಿಂತನಲು–ನಿನ್ನ ಆಲೋಚನೆಗಳನ್ನು; ಉಂಚಗ–ಬದಿಗಿರಿಸಲು, ಬಂದನು; ಕಾರಣಮುಲು-ಬರದಿರಲು ಕಾರಣಗಳನ್ನು; ಚಲುಪತಗದುರಾ–ಹೇಳುವುದು ಯುಕ್ತವಲ್ಲವಯ್ಯ; ಅದಿಗೊ ಪದರಿಯುನ್ನಾಡು–ಅವಳು ಹೆದರಿದ್ದಾಳೆ ನೋಡು; ನೀ ದಯಗಲಿಗಿನ–ನಿನ್ನ ದಯೆಗೆ ಪಾತ್ರರಾದ; ಸತುಲಲೋ–ನಾರಿಯರಲ್ಲಿ; ನನ್ನೊಗತಿಗಾನೆನಚು–ನನ್ನನ್ನು ಒಬ್ಬಳೆಂದು ಭಾವಿಸಿ; ಮದಿ–ಮನಸ್ಸು; ನೀ ಪಾಲಯಿನ–ನಿನ್ನ ಪಾಲಾಗಿರುವ; ನಾ ವೆಥ ದೀರ್ಚುಟಕು-ನನ್ನ ವ್ಯಥೆಯನ್ನು ತೀರಿಸಲು; ತಾಮಸುಡುರಾನರಾ-ತಾಮಸವೇಕೆ (?) ನೇ ತಾಳನುರಾ–ನಾನು ತಾಳಲಾರೆನಯ್ಯ; ತುಮ್ಮೆದಲು–ದುಂಬಿಗಳು; ಜುಂಮೆನಚು-ಜುಮ್ಮೆಂದು;

ಪಲಿಕೆರ–ದನಿಮಾಡಿದುವು; ನಾ ಚೆವುಲು–ನನ್ನ ಕಿವಿಗಳು; ಚುರುಕ್ಕೆನುಚು–ಚುರುಕ್ಕೆಂದುವು; ಮರಿ-ಮತ್ತೆ; ಏಮಿ ಜೇತು–ಏನು ಮಾಡಲಿ?; ಓರ್ವಲೇನುರಾ-ಸಹಿಸಲಾರೆನೋ; ಮೋವಿನೀಯರಾ-ನಿನ್ನ ಮುಖವನ್ನು ನೀಡೋ; ನೇ ನಿಂಪ್ಪೈತಿನಿರಾ–ನಾನು ಸಂತೋಷಪಡುತ್ತೇನೆಯೋ; ಸುಖುಂಬು ಈಯು–ನನಗೆ ಸುಖವೀಯ ಲೆಂದು; ಇಟುವಚ್ಚಿ–ಇಲ್ಲಿಗೆ ಬಂದು; ನನು ಮೆಚ್ಚಿ–ನನ್ನನ್ನು ಮೆಚ್ಚಿ ; ಕೌಗಲಿಚ್ಚಿ–ಆಲಂಗಿಸಿಕೊಂಡು [ಮುಂದಿನ ಭಾಗ ಅರ್ಥವಾಗುವುದಿಲ್ಲ]

ಭಾವ : ಸ್ವಾಮಿಯೆ, ನಾನು ಇಷ್ಟು ಬೇಡಿಕೊಂಡರೂ ನಿನಗೆ ದಯೆ ಬರುವುದಿಲ್ಲವೆ? ನನ್ನ ಅಪೇಕ್ಷೆಯನ್ನು ಪೂರೈಸಿ ಕೊಡು ಸಂತಾನರಾಮ! ನಿನ್ನನ್ನೇ ಕಾದು ಹಂಬಲಿಸುತ್ತಿದ್ದೇನೆ, ನಿನ್ನ ಆಲಿಂಗನಕ್ಕೆ ನನ್ನನ್ನು ಸೇರಿಸಿಕೊಳ್ಳಲು ತಕರಾರುಮಾಡುವುದು ನಿನಗೆ ಸಲ್ಲದಯ್ಯ. ಕಾರಣಗಳನ್ನೊಡ್ಡಿ ಬರದಿರಬೇಡ. ಇವಳು ಹೆದರಿದ್ದಾಳೆ. ನಿನ್ನ ದಯೆಗೆ ಪಾತ್ರರಾದ ಸತಿಯರಲ್ಲಿ ಒಬ್ಬಳೆಂದು ಭಾವಿಸಿ, ಮನಸ್ಸನ್ನು ಸಂಪೂರ್ಣವಾಗಿ ನಿನ್ನಪಾಲು ಮಾಡಿರುವ ನನ್ನ ವ್ಯಥೆಯನ್ನು ತೀರಿಸಲು ತಡಮಾಡಬೇಡ. ದುಂಬಿಗಳು ಜುಮ್ಮೆಂದು ದನಿಮಾಡಿದರೆ ನಾನು ತಾಳಲಾರೆ ; ನಿನ್ನ ಮುಖವಿತ್ತು, ಆಲಂಗಿಸಿಕೊಂಡು, ಸಂತೋಷಪಡಿಸಯ್ಯ.

4. ರಾಗ : ಕಮಾಚ್ ಆದಿತಾಳ ಪೊನ್ನಯ್ಯಪಿಳ್ಳೆ

ಪ|| ಸಾಮಿನಿ ರಮ್ಮನವೇ ಸಖಿಯರೋ ಸಾಮಾನ್ಯದೊರಗಾದೆ ಸಖಿಯರೋ

ಅ. ಪ|| ಭೂಮಿಲೋ ಶ್ರೀ ತಂಜಪುರಿ ಬೃಹದೀಶ್ವರುನಿ ಕಾಮಿತಾರ್ಥಮುಲಿಚ್ಚಿ ಕಲಯುಟ ಸಮಯಮು ||

ಮುಕ್ತಾಯ ಸ್ವರ ಸಾಹಿತ್ಯ|| ವಾನಿ ಸೊಗಸು ಜೂಚಿ ನೇ ಕನಿಕರಂಬುನ ಮರುಲ್ಕೈತಿ ವಿನು
ಉಲ್ಲಾಸಮು ಸಲ್ಲಾಪಮು ಮುದ್ದುಲ ಸೊಂಪುಲ್ಪೈನ ಚಾಲಾ ಘನುಡೇ
ರತಿವಿತಾಳ ಸರಸಾಲನು ಅತನಿತೋ ರವಳಿಕ ಚನಗನು
ಕಲಯುಟ ಸಮಯಮೇ ||

ಚರಣ || ರಾವೇ ನಾ ಮಾಟವಿನು

1. ಮಾರುಡು ನಾ ಪೈ ವೆಡಲೆ
2. ವಿರಿಬಾಣಮು ಎದಪೈನ ದುರುಸುಗ ವೇಯಗನು ಚೆಲಿಯರೋ ನೇ ತಾಳ
3. ತುಮ್ಮೆದಲು ಅತಿಮ್ರೋಯಗ ಕೋಕಿಲಲು ಕೂಯಗನು ಸದಾ ಚಿಲುಕುಲುನು
ಕಲಕಲಮನಿ ಪಲುಕಗ ಮನಸು ಬೆದರೆ
4. ಸಾರೆಕುನು ಈ ವಿರಹಮುಲ ಬಾರಿಕಿಯಿಕನೋರ್ವನು ಮಿಗುಲನಾದು
ಕುಂಭಲನು ಪಡುವು ಗನಕನಿಗಮನುಚುನು ಮೆರಯುಚು ಕುಲಿಕಿ ಪಲಿಕಿ
ನಾ ಪ್ರಾಣವಿಭುನಿತೋ ನೇ ಪ್ರೇಮನುದಲಚಿ ನೇ ಜೇರಗಿದಿ ಮಂಚಿವೇಳನೇ
ಲಲಿತಮ್ಮೆನ ಪ್ರಿಯುನಿದಾನಿ ಸೊಲಪುಗ ನಯ ಭಾವಮುಗನುತ್ಯಾಗದೇಯಿಪುಡು ||

ಅರ್ಥ : ಸಖಿಯರೋ-ಸಖಿಯರೇ, ಸಾಮಿನಿ ರಮ್ಮನವೇ–ಸ್ವಾಮಿಯನ್ನು ಕರೆತನ್ನಿರೆ ; ಸಾಮಾನ್ಯದೊರಗಾದೇ–ಅವನು ಸಾಮಾನ್ಯನಾದ ದೊರೆಯಲ್ಲವೇ ; ಭೂಮಿಲೋ-ಭೂಮಿಯಲ್ಲಿ ; ಶ್ರೀ ತಂಜಪುರಿ ಬೃಹದೀಶ್ವ

ರುನಿ–ತಂಜಾವೂರಿನ ಶ್ರೀ ಬೃಹದೀಶ್ವರನು ; ಕಾಮಿತಾರ್ಥಮುಲಿಚ್ಚಿ-ಅಪೇಕ್ಷೆಯನ್ನು ಪೂರೈಸಿ ; ಕಲಯುಟ-ನನ್ನನ್ನು ಸೇರುವ ; ಸಮಯಮು; ವಾನಿ ಸೊಗಸು ಜೂಚಿ–ಅವನ ಸೌಂದರ್ಯವನ್ನು ನೋಡಿ ; ನೇ-ನಾನು ; ಕನಿಕರಮುನ ಮರುಲೈತಿ-ಕನಿಕರದಿಂದ ಮರುಳಾದೆ : ವಿನು-ಕೇಳು ; ಅವನು ಸೊಂಪುಲೈನ–ಸೊಂಪಾದ ; ಉಲ್ಲಾಸ, ಸಲ್ಲಾಪ, ಮುದ್ದುಗಳಿಂದ ಕೂಡಿದ, ಘನುಡೇ-ಶ್ರೇಷ್ಠನಾದವನು ; ರವಳಿಕ ಚನಗನು-ಮೋಹವುಂಟಾಗಲು ; ಅತನಿತೋ–ಅವನೊಂದಿಗೆ, ರತಿವಿತಾಳ ಸರಸಾಲನು–ರತಿಸಲ್ಲಾಪಗಳನ್ನು ; ಕಲಯುಟ ಸಮಯಮೋ-ಕೂಡುವ ಸಮಯವಾಯಿತು ; ರಾವೇ-ಬಾರೇ ; ನಾ ಮಾಟ ವಿನು-ನನ್ನ ಮಾತು ಕೇಳು ; ನಾ ಪೈ-ನನ್ನ ಮೇಲೆ ; ಮಾರುಡು-ಮನ್ಮಥನು ; ವೆಡಲೆ–ಹೊರಟಿದ್ದಾನೆ. ಎದಪೈನ ಎದೆಯಮೇಲೆ ; ವಿರಿಬಾಣಮು-ಪುಷ್ಪಬಾಣಗಳು ; ದುರುಸುಗ-ವೇಗವಾಗಿ ; ವೇಯಗನು-ಬೀಳಲು ; ಚೆಲಿಯರೋ-ಎಲೆ ಸಖಿಯರೇ ; ನೇ ತಾಳ-ನಾನು ತಾಳಲಾರೆ ; ತುಮ್ಮೆದಲು-ದುಂಬಿಗಳು ; ಅತಿ ಮ್ರೋಯಗ-ಝೇಂಕರಿಸುತ್ತಿರಲು ; ಕೋಕಿಲಲು-ಕೋಗಿಲೆಗಳು ; ಕೂಯಗನು–ಧ್ವನಿಮಾಡಲು ; ಸದಾ ಚಿಲುಕುಲುನು–ಗಿಣಿಗಳು ಸದಾ ; ಕಲಕಲಮುನಿ ಪಲುಕಗ–ಕಲಕಲನೆ ಮಾತಾಡಲು ; ಮನಸು ಜೆದರೆ–ನನ್ನ ಮನಸ್ಸು ಹೆದರುತ್ತಿದೆ ; ... ನಾ ಪ್ರಾಣವಿಭುನಿತೋ–ನನ್ನ ಪ್ರಾಣನಾಥನನ್ನು; ನೇ ಪ್ರೇಮನು ದಲಚಿ–ಪ್ರೇಮಿಸಿ ; ನೇಜೇರಕು–ನನ್ನನ್ನು ಸೇರಲು ; ಇದಿ ಮಂಚಿವೇಳನೇ–ಇದು ಉತ್ತಮವಾದ ಸಮಯ [ಕೊನೆಯ ಚರಣದಲ್ಲಿ ಕೆಲವು ವಾಕ್ಯಗಳು ಅರ್ಥವಾಗುವುದಿಲ್ಲ.]

ಭಾವ : ತಂಜಾವೂರಿನ ಶ್ರೀ ಬೃಹದೀಶ್ವರನು ಸಾಮಾನ್ಯ ದೊರೆಯಲ್ಲ. ಅವನನ್ನು ಕರೆತನ್ನಿರೇ. ಪುಷ್ಪ ಬಾಣಗಳು ನನ್ನ ಎದೆಗೆ ವೇಗವಾಗಿ ನಾಟುತ್ತಿವೆ ; ಸಖಿಯರೇ, ನಾನು ಈ ವ್ಯಥೆಯನ್ನು ತಾಳಲಾರೆ ; ದುಂಬಿಗಳು ಮೊರೆದು, ಕೋಗಿಲೆಗಳು ಕೂಜನಗೈದು, ಗಿಣಿಗಳು ಕಲಕಲನೆ ಮಾತಾಡುತ್ತಿರಲು ನಾನು ಸಹಿಸಲಾರೆನು.

5. ರಾಗ : ಕಲ್ಯಾಣಿ ಆದಿತಾಳ ವಡಿವೇಲು

ಪ|| ಸಾಮಿ ನೀವೇಯನಿ ಚಾಲನಮ್ಮಿತಿ ಜಾಲಮುಜೇಯರಾದುರ ಈ ವೇಳ ||

ಅ. ಪ|| ಕಾಮುನಿಗನ್ನ ಶ್ರೀ ಪದ್ಮನಾಭದಾಸುಕು ಘನಮೈನ ಶ್ರೀ ಕುಲಶೇಖರೇಂದ್ರ ||

ಮುಕ್ತಾಯ ಸ್ವರ ಸಾಹಿತ್ಯ|| ಶ್ರೀಕರಾ ಸುಗುಣಾಕರ ನೀವು ದಯಾಕರುಡನಿ ನೇ ನಿನುಕೊಂಟಿಮಿ
ವೇಗರಾ ರಾಜಶಿಖಾಮಣಿ ನೀವಲನೇ ಜಗಾನುಗಾನ ನಿಜಂಬುಗಾ
ವಲಚಿನಾನು ಸೊಗಸುಮೀರ ಅದನುಮೀರ ಕಲಯರಾರ ನೇ ನೀದಾನನುರಾ
ಸದಯ ಮನಸುಕಲಿಗಿಯಿಪುಡು ದುರುಸುಗ ವಿರಿಸೇಯಕುರಾ ವಲೆರಾ ಮದಿನಿ

ಚರಣ|| ನೀವೇ ನಾ ಪ್ರಾಣನಾಥುಡು ||

ಎತ್ತುಗಡೆ ಸ್ವರಗಳ ಸಾಹಿತ್ಯ||

1. ನೀ ದಮಿತಾಂಚಲೆನುಗದಡಾ ದಯಾಸಾಗರ ಇಪುಡು
2. ಸಾರೆಕುಲು ನೀವೇ ಸಾರಗ ಮನಸಾರ ಪಿಲುವುಮು ಸಾರಸವದನ
3. ಪದ್ಮಲೋಚನುನಿ ಪಾದಸೇವನು ಬಾಯರಾದನು ನೀ ಪಾಲು ಜೇಸುಕೊನಿ
   ಬಾಗುಗಾಪೆಲಯು ಪಾವನಾ ಭುವನ ಪಾಲನಾ ವಿನು ನೀಪಾಲನೈತಿನಿರಾ||
4. ನೀಹೊಯಲು ಮರಿ ನೀ ನೆರತನಮು ನೀ ವಿತರಣಮು ನೀ ಸೊಗಸುಮರಿ
   ನೀವಲೆನು ಭುವಿನೀ ದೊರಗದನಿ ನೀ ಕೃಪಗನುಕೊನಿ ವಲಚಿತಿರಾ

5. ಶ್ರೀ ಮೆರೆಯು ಮಾ ಕುಲಶೇಖರ ಸುಧಾಕರ ವಶೀಕರ ದಯಾಕರ ಗುಣಾಕರುಡನಿ
ಚಾಲನೇ ನಮ್ಮಿ ನಾನುರಾ ಪಾಲನ ಜೇಯ ವೇಳರಾ ಕಾಮಿತಾರ್ಥಮುಲೊಸಗಿ ಗಾರವಿಂಚರಾ
ಪರಾಕು ಸಲುಪರಾದು ನಿರಪರಾಧಿನಿ ಪರಾಮರಿಗಲು ಚಾಯುವಲದುರಾ
ಧರಾಧಿಪತಲುಲೋ ನೀವು ಕಿರೀಟಿಯನ ತಗುದುವುರಾ ಬಿರಾನ ಕಲಯುರಾ||

ಅರ್ಥ : ಸ್ವಾಮಿ, ನೀವೇಗತಿ ಅನಿ-ಎಂದು; ಚಾಲನಮ್ಮಿತಿ-ತುಂಬಾ ನಂಬಿದ್ದೇನೆ; ಈ ವೇಳ-ಈ ಸಮಯದಲ್ಲಿ; ಜಾಲಮು ಸೇಯರಾದು-ವಂಚನೆ ಮಾಡಬೇಡ; ಕಾಮುನಿಕಿಅನ್ನ-ಮದನನ ತಂದೆಯಾದ ಪದ್ಮನಾಭನ ದಾಸನಿಗೆ ಘನನಾದ ಶ್ರೀ ಕುಲಶೇಖರೇಂದ್ರ ; ಶ್ರೀಕರ, ಸುಗುಣಾಕರ, ನೀವು-ನೀನು ; ದಯಾಕರುಡು ಅನಿ-ದಯಾಕರನೆಂದು ; ನೇ-ನಾನು ; ನಿನುಕೊಂಟಿಮಿ-ತಿಳಿದುಕೊಂಡೆ ; ವೇಗರಾ-ಬೇಗನೆ ಬಾ ; ರಾಜ ಶಿಖಾಮಣಿ-ರಾಜ ಶ್ರೇಷ್ಠನೇ ; ನೀವಲನೇ ಜಗಾನು-ಈ ಜಗತ್ತು ಇರುವುದು ನಿನ್ನಿಂದಲೇ ; ಆದ್ದರಿಂದ ನಿಜಂಬುಗಾ-ನಾನು ಪ್ರಾಮಾಣಿಕವಾಗಿ ; ವಲಚಿನಾನು-ನಿನ್ನನ್ನು ಪ್ರೀತಿಸಿದ್ದೇನೆ ; ಸೊಗಸುಮೀರ-ಅತಿಶಯವಾದ ಸೊಗಸಿನಿಂದ ; ಅದನು ಮೀರ-ಪರವಶಳಾಗಿದ್ದೇನೆ ; ಕಲಯ-ಸೇರಲು ; ರಾರ-ಬಾರಯ್ಯ ; ನೇ-ನಾನು ; ನೀದಾನನುರಾ-ನಿನ್ನವಳೇ ಆಗಿದ್ದೇನಯ್ಯ ; ಸದಯ-ದಯಾಮಯನೆ ; ಮನಸುಕಲಗಿ-ಮನಸ್ಸುಂಟಾಗಿ ; ಯಿಪ್ಪುಡು-ಈಗ ; ದುರುಸುಗ-ವೇಗವಾಗಿ ; ವಿರಿಸೇಯಕು -ಪುಷ್ಪಬಾಣಗಳನ್ನು ಹೊಡೆಯದೆ ; ರಾವಲೆರಾ-ಬೇಗ ಬಾರಯ್ಯ ; ನೀವೇ-ನೀನೇ : ನಾ ಪ್ರಾಣನಾಥುಡು-ನನ್ನ ಪ್ರಾಣನಾಥನು ; ಸಾರೆಕುಲು-ಸಮೀಪಕ್ಕೆ ; ನೀವೇ ಸಾರಗ-ನೀನೇ ; ಬರಬೇಕೆಂದು ಮನಸಾರ, ಪಿಲುವುಮು-ಮನಸಾರ ಕರೆಯುತ್ತೇನೆ ; ಸಾರಸವದನ, ಪದ್ಮಲೋಚನುನಿ-ತಾವರೆಯಂತೆ ಕಣ್ಣುಳ್ಳವನೆ ; ಪಾದಸೇವನು-ಪಾದಸೇವೆಯನ್ನು ; ಪಾ(ಬಾ)ಯರಾದು-ಬಿಡಬಾರದು ; ಅನು-ಎಂದು ; ನೀಪಾಲುಜೇಸುಕೊನಿ-ನನ್ನನ್ನು ನಿನ್ನ ವಶವಾಗಿಸಿಕೊಂಡು ; ಬಾಗುಗಾ ವೆಲಯ-ಚೆನ್ನಾಗಿ ಶೋಭಿಸುವ ; ಪಾವನಾ, ಭುವನ ಪಾಲನಾ ; ವಿನು-ಕೇಳು ; ನೀಪಾಲನೈತಿನಿರಾ-ನಿನ್ನವಳಾದೆನಯ್ಯ ; ನಿನ್ನ ನೆರತನ-ಪೂರ್ಣತ್ವ ; ನಿನ್ನ ವಿತರಣ ; ನಿನ್ನ ಸೊಗಸು ಅಧಿಕ ; ನೀಕೃಪಗನುಕೊನಿ-ನಿನ್ನ ಕೃಪೆಯನ್ನು ಕಂಡುಕೊಂಡೆನಯ್ಯ ; ಪರಾಕುಸಲುಪರಾದು-ಅಲಕ್ಷ್ಯ ಮಾಡದಿರು ; ನನ್ನ ಕುಲಶೇಖರನೆ, ಸುಧಾಕರನೆ, ದಯಾಕರನೆ, ವಶೀಕರನೆ, ನೀನೇ ಗುಣಾಕರುಡು ಅನಿ-ಗುಣಗಳಿಗೆ ಆಕರನೆಂದು ; ಚಾಲ ನೇ ನಮ್ಮಿನಾನುರಾ-ಚೆನ್ನಾಗಿ ನಂಬಿಕೊಂಡೆನಯ್ಯ ; ಪಾಲನ ಜೇಯ ವೇಳರಾ-ಕಾಪಾಡುವ ಸಮಯವಯ್ಯ ; ಕಾಮಿತಾರ್ಥಮುಲೊಸಗಿ-ನನ್ನ ಅಪೇಕ್ಷೆಗಳನ್ನು ಈಡೇರಿಸಿ, ಗಾರವಿಂಚರಾ-ಕಾಪಾಡು ; ನಿರಪರಾಧಿನಿ-ನಿರಪರಾಧಿಯ ಮೇಲೆ ; ಪರಾಮರಿಗಲು ಚಾಯುವಲದುರಾ-ಟೀಕೆ ಮಾಡುವುದು ಯುಕ್ತವಲ್ಲ ; ಧರಾಧಿಪತುಲುಲೋ-ರಾಜರಲ್ಲಿ ; ನೀವು ಕಿರೀಟಿಯನತಗದುವುರಾ-ನೀನೇ ಶ್ರೇಷ್ಠನೆನಿಸಲು ತಕ್ಕವನಯ್ಯ ; ಬಿರಾನ-ಬೇಗನೆ ; ಕಲಯುರಾ-ನನ್ನನ್ನು ಸೇರಯ್ಯ.

## ೪. ಕೃತಿಗಳು

1. ರಾಗ.: ಆರಭಿ ಆದಿತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶಿವಕಾಮೇಶ್ವರ ಚಿಂತಯಾಮ್ಯಹಂ
ಚಿದಾನಂದ ಪೂಜಿತಾಂಭೋರುಹಂ ||

ಅನುಪಲ್ಲವಿ : ಶಿವಕಾಮೇಶ್ವರೀ ಮನೋಹರಂ
ಶ್ರೀ ಗುರುಗುಹ ಭಕ್ತವಶಂಕರಂ ||

ಚರಣ : ನಾದಬಿಂದು ಕಲಾರೂಪಮನಿಶಂ
ನಟೇಶ್ವರಂ ಭಾನುಕೋಟಿ ಸದೃಶಂ

ಮಧ್ಯಮಕಾಲ ಸಾಹಿತ್ಯ : ನಂದಿತುರಗರೋಹಿತಂ ಗುರುಗುಹಮಹಿತಂ
ಚಿದಂಬರ ಪುರಿವಿಲಾಸಿತಂ ||ಶಿವ||

ಅರ್ಥ : ಚಿದಾನಂದ–ಬ್ರಹ್ಮ(ನಿಂದ) ; ಪೂಜಿತ–ಪೂಜೆಗೊಂಡ ; ಅಂಭೋರುಹಂ–ತಾವರೆಯುಳ್ಳವನೂ ; ಶಿವಕಾಮೇಶ್ವರೀ ಮನೋಹರಂ–ಶಿವಕಾಮೇಶ್ವರಿಯ (ಪಾರ್ವತಿಯ) ವಲ್ಲಭನೂ ; ಶ್ರೀ ಗುರುಗುಹನ ಭಕ್ತರನ್ನು, ವಶಂಕರಂ–ವಶಪಡಿಸಿಕೊಳ್ಳುವವನೂ ; ನಾದಬಿಂದು ಕಲಾರೂಪನೂ, ನಟೇಶ್ವರಂ–ನಾಟ್ಯದಲ್ಲಿ ಅಗ್ರನೂ ; ಭಾನುಕೋಟಿಸದೃಶಂ-ಕೋಟಿ ಸೂರ್ಯರಿಗೆ ಸಮಾನನೂ, ನಂದಿತುರಗ ರೋಹಿತಂ–ನಂದಿಯನ್ನೇ ವಾಹನವಾಗಿ ಉಳ್ಳವನೂ ; ಗುರುಗುಹನಿಗೆ ಮಹಿಮೆಯುಂಟುಮಾಡುವವನೂ, ಚಿದಂಬರಪುರಿಯಲ್ಲಿ ಶೋಭಿಸುವವನೂ ಆದ ಪರಮೇಶ್ವರನನ್ನು ಅನಿಶಂ–ಯಾವಾಗಲೂ ; ಅಹಂ ಚಿಂತಯಾಮಿ–ನಾನು ಧ್ಯಾನಿಸುತ್ತೇನೆ.

ಸಾರಾಂಶ : ಚಿದಂಬರದ ನಟರಾಜನ ಸ್ತುತಿ. ಬ್ರಹ್ಮನಿಂದ ಪೂಜೆಗೊಂಡವನೂ, ಶಿವಕಾಮೇಶ್ವರೀ ವಲ್ಲಭನೂ ಗುರುಗುಹನ ಭಕ್ತರಿಗೆ ಒಳ್ಳೆಯದು ಮಾಡುವವನೂ, ನಾದ ಬಿಂದು ಸ್ವರೂಪನೂ, ಸದಾ ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳವನೂ, ನಂದಿಯನ್ನೇರಿದವನೂ, ಚಿದಂಬರಪುರಿಯಲ್ಲಿ ಶೋಭಿಸುವವನೂ ಆದ ನಟರಾಜ ಪರಮೇಶ್ವರನನು ಯಾವಾಗಲೂ ಧ್ಯಾನಿಸುತ್ತೇನೆ.

2. ರಾಗ : ಆರಭಿ ರೂಪಕತಾಳ ತ್ಯಾಗರಾಜರು

ಪಲ್ಲವಿ : ನಾದಸುಧಾರಸಂಬಿಲನು–ನರಾಕೃತ್ಯಾಯೆರಾ ಮನಸಾ ||

ಅನುಪಲ್ಲವಿ : ವೇದ ಪುರಾಣಗಮಶಾಸ್ತ್ರಾದುಲಕಾಧಾರಮ್ಮೈನ ||

ಚರಣ : ಸ್ವರಮುಲು ಯಾರೊಕಟಿಗಂಟಲು ವರರಾಗಮು ಕೋದಂಡಮು
ದುರನಯ ದೇಶ್ಯಮು ತ್ರಿಗುಣಮು ನಿರತಗತಿ ಶರಮುರಾ
ಸರಸ ಸಂಗತಿ ಸಂದರ್ಭಮು ಗಲಗಿರಮುಲುರಾ
ಧರ ಭಜನ ಭಾಗ್ಯಮುರಾ ತ್ಯಾಗರಾಜು ಸೇವಿಂಚು || ನಾದ ||

ಅರ್ಥ : ಮನಸಾ–ಎಲೆ ಮನಸ್ಸೇ ; ವೇದ ಪುರಾಣ ಆಗಮ ಶಾಸ್ತ್ರಾದುಲಕು–ವೇದ ಪುರಾಣ ಆಗಮ ಶಾಸ್ತ್ರ ಮೊದಲಾದುವುಗಳಿಗೆ ; ಆಧಾರ ಮೈನ–ಆಧಾರವಾದ ; ನಾದಸುಧಾರಸಂಬಿಲನು–ನಾದವೆಂಬ ಅಮೃತವು ; ನರಾಕೃತಾಯೆರಾ–ಮನುಷ್ಯಾ ಕೃತಿಯಲ್ಲಿ ಬಂದಿದೆ ; ಆರೊಕಟಿ ಸ್ವರಮುಲು–ಏಳು ಸ್ವರಗಳೇ ; ಗಂಟಲು–ಬಿಲ್ಲಿಗೆ ಕಟ್ಟಿರುವ ಗಂಟೆಗಳಾಗಿವೆ ; ಪದರಾಗಮು–ಶ್ರೇಷ್ಠವಾದ ರಾಗವೇ ; ಕೋದಂಡಮು–ಬಿಲ್ಲಾಗಿದೆ ; ದುರನಯದೇಶ್ಯಮು–ದುರ ನಯ ದೇಶ್ಯ ಎಂಬ ಶೈಲಿಗಳು ; ತ್ರಿಗುಣಮು–ಮೂರು ದಾರಗಳನ್ನು ಸೇರಿಸಿ ಹೆಣೆದ ಹಗ್ಗವಾಗಿದೆ. [ಗಾಯನದ ಮೂರು ಗುಣಗಳೆಂಬ ಪರ್ಯಾಯಾರ್ಥವೂ ಸ್ಫುರಿಸುತ್ತದೆ] ; ನಿರತಗತಿ–ಸ್ಥಿರವಾದ ಗತಿಯೇ ; ಶರಮುರಾ–ಬಾಣವಾಗಿದೆ ; ಸರಸ ಸಂಗತಿ ಸಂದರ್ಭಮುಗಲ–ಸಂದರ್ಭಕ್ಕೆ ತಕ್ಕ ಸರಸ ಸಲ್ಲಾಪವೇ; ಗಿರಮುಲುರಾ–ವೀರಾಲಾಪಗಳಾಗಿವೆ ; ತ್ಯಾಗರಾಜು ಸೇವಿಂಚು–ತ್ಯಾಗರಾಜನು ಸೇವಿಸುವ ಶ್ರೀರಾಮಚಂದ್ರಮೂರ್ತಿಯ ಭಜನ, ಸ್ತುತಿಯೇ ; ಧರ–ಈ ಭೂಮಿಯಲ್ಲಿ ; ಭಾಗ್ಯಮುರಾ–ಆತನು ಪಡೆದ ಭಾಗ್ಯವಾಗಿದೆ.

ಸಾರಾಂಶ : ಸಕಲ ವೇದ ಶಾಸ್ತ್ರ ಪುರಾಣ ಆಗಮುಗಳಿಗೆ ಆಧಾರವಾಗಿರುವ ನಾದವೆಂಬ ಅಮೃತ ರಸವೇ ಈ ಲೋಕದಲ್ಲಿ ಶ್ರೀರಾಮಚಂದ್ರನ ರೂಪದಲ್ಲಿ ಮೈದಾಳಿದೆ ಎಂದು ತ್ಯಾಗರಾಜರು ವರ್ಣಿಸುತ್ತಾರೆ. ಸರಿಗಮ ಪದನಿ ಎಂಬ ಏಳು ಸ್ವರಗಳೇ ಬಿಲ್ಲ ಗಂಟೆಗಳಾಗಿವೆ ; ರಾಗವೇ ಬಿಲ್ಲಾಗಿದೆ. ದುರನಯದೇಶ್ಯ ಶೈಲಿಗಳೇ ಹೆಣೆದುಕೊಂಡು ಬಿಲ್ಲ ಹಗ್ಗವಾಗಿದೆ. ಸ್ಥಿರವಾದ ಗತಿಯೇ ಬಾಣವಾಗಿದೆ.

3. ರಾಗ : ಆರಭಿ ಆದಿತಾಳ ವಿ. ರಾಮರತ್ನಂ

ಪಲ್ಲವಿ : ಸರಸ್ವತಿ ಸಕಲ ಕಲಾ ನಿಪುಣೆ
ಸುರಪೂಜಿತೆ ಸ್ವರಾತ್ಮಿಕೇ ಅಂಬ ||

ಅನುಪಲ್ಲವಿ : ಸುರುಚಿರ ನವರತ್ನ ಪೀಠಸ್ಥಿತೇ
ವರ ತ್ರಿಪುರಸುಂದರಿ ಸರ್ವವಿದ್ಯಾತ್ಮಿಕೆ ||

ಚರಣ : ಆದಿಶಕ್ತಿ ಸಕಲಾಗಮ ನಿಗಮ
ಅಧ್ಯಾತ್ಮ ರೂಪಿಣಿ ಶ್ಯಾಮಲೆ
ಪದ್ಮಲೋಚನಿ ಶುಭಪ್ರದಾಯಿನಿ
ಪದ್ಮಸಂಭವ ಪ್ರಿಯೆ ರಾಮನುತೆ ||

ಅರ್ಥ : ಸಕಲಕಲಾ ನಿಪುಣೆಯಾದ ಸರಸ್ವತಿಯೇ, ಸುರಪೂಜಿತೆ–ದೇವತೆಗಳಿಂದ ಪೂಜೆಗೊಂಡವಳೂ, ಸ್ವರಾತ್ಮಿಕೆ–ಸ್ವರಗಳನ್ನು ಆತ್ಮವಾಗುಳ್ಳವಳೂ, ಅಂಬ–ತಾಯಿಯೂ, ಆಗಿದ್ದಾಳೆ ; ಸುರಚಿತ–ಕಾಂತಿಯುಕ್ತವಾದ ನವರತ್ನ ಪೀಠದಲ್ಲಿ ಕುಳಿತವಳು, ತ್ರಿಪುರಸುಂದರಿ, ಸರ್ವವಿದ್ಯೆಗಳ ಆತ್ಮವಾಗಿರುವವಳು ; ಅವಳೇ ಆದಿಶಕ್ತಿ, ಸಕಲ ಆಗಮ ನಿಗಮ ಅಧ್ಯಾತ್ಮರೂಪಿಣಿ. ತಾವರೆಯಂತೆ ಕಣ್ಣುಳ್ಳವಳು, ಶುಭವುಂಟು ಮಾಡುವವಳು, ಪದ್ಮಸಂಭವ–ಬ್ರಹ್ಮನ ; ಪ್ರಿಯೆ–ಪ್ರಿಯಳು ; ರಾಮನುತೆ–ರಾಮನಿಂದ ನುತಳಾದವಳು. ['ರಾಮ' ಎಂಬುದು ಅಂಕಿತ].

ಸಾರಾಂಶ : ದೇವತೆಗಳಿಂದ ಪೂಜೆಗೊಂಡವಳೂ, ಸ್ವರಗಳನ್ನೇ ಆತ್ಮವಾಗುಳ್ಳವಳೂ, ನವರತ್ನಪೀಠದಲ್ಲಿ ಕುಳಿತ ತ್ರಿಪುರ ಸುಂದರಿಯೂ, ಸಕಲ ವಿದ್ಯೆಗಳ ಆತ್ಮವಾದವಳೂ ಅಧ್ಯಾತ್ಮರೂಪಿಣಿಯೂ ಆದ ಸರಸ್ವತಿಯನ್ನು ವಂದಿಸುತ್ತೇನೆ.

ವಿ. ರಾಮರತ್ನಂ

4. ರಾಗ : ಭೈರವಿ ಆದಿತಾಳ

ಪಲ್ಲವಿ : ಶಂಭೋಶಂಕರ ಶಶಾಂಕ ಶೇಖರ
ಶರಣಂ ತವ ಚರಣಂ ||

ಅನುಪಲ್ಲವಿ : ಪ್ರಣತಾರ್ಥಿಹರ ದೇವಗಣಾರ್ಚಿತ
ಪ್ರಣವಾಕಾರ ಜಟಾ ಜೂಟಧರ

ಚರಣ : ಚಿದಾನಂದರೂಪ ತಾಂಡವಪ್ರಿಯ
ಸದಾನೋದಕರ ಬಿಲ್ವಾರ್ಚಿತ ವರ
ಕಾಶೀಪುರಾಧೀಶ ಜಗನ್ನಿವಾಸ
ಪಾಶನೋಚನ ರಾಮನುತ

ಅರ್ಥ : ಶಶಾಂಕಶೇಖರ–ಚಂದ್ರನನ್ನು ಮುಡಿಯಲ್ಲಿ ಧರಿಸಿದ; ಶಂಭೋ, ಶಂಕರ, ತವಚರಣಂ–ನಿನ್ನ ಪಾದಗಳಿಗೆ ; ಶರಣಂ–ನಮಸ್ಕರಿಸುತ್ತೇನೆ. ಪ್ರಣತ–ಭಕ್ತರ ; ಅರ್ಥಿಹರ–ವೇದನೆಗಳನ್ನು ಪರಿಹರಿಸುವವನೆ ; ದೇವಗಣಗಳಿಂದ ಪೂಜಿತನಾದವನೆ ; ಪ್ರಣವಾಕಾರ–ಓಂಕಾರ ಸ್ವರೂಪನೆ ; ಜಟಾಜೂಟವನ್ನು ಧರಿಸಿದವನೆ ; ಚಿದಾನಂದರೂಪ–ಜ್ಞಾನವೆಂಬ ಆನಂದ ರೂಪಿಯಾದವನೆ, ತಾಂಡವದಲ್ಲಿ ಪ್ರೀತಿಯುಳ್ಳವನೆ, ನೋದಕರ–ಸಂತೋಷವುಂಟುಮಾಡುವವನೆ ; ಬಿಲ್ವಾರ್ಚಿತ–ಬಿಲ್ವಗಳಿಂದ ಪೂಜಿತನಾದವನೆ ; ವರ–ಶ್ರೇಷ್ಠವಾದ ; ಕಾಶೀಪುರಕ್ಕೆ ಒಡೆಯನಾದವನೆ ; ಜಗನ್ನಿವಾಸ–ಜಗತ್ತೇ ನೆಲೆಯಾಗಿರುವ ಸ್ವಾಮಿಯೆ ; ಪಾಶನೋಚನ–ಭಕ್ತರ ಬಂಧನಗಳನ್ನು ಬಿಡಿಸುವವನೆ ; ರಾಮನುತ–ರಾಮನಿಂದ ಸ್ತುತನಾದವನೆ, ನಿನ್ನ ಪಾದಗಳಿಗೆ ವಂದಿಸುತ್ತೇನೆ.

ಸಾರಾಂಶ : ಚಂದ್ರನನ್ನು ಧರಿಸಿದ, ದೇವಗಣಗಳಿಂದ ಪೂಜಿತನಾದ, ಓಂಕಾರ ಸ್ವರೂಪನಾದ, ಜ್ಞಾನಾನಂದರೂಪನಾದ, ತಾಂಡವ ನೃತ್ಯದಲ್ಲಿ ಆಸಕ್ತನಾದ, ಕಾಶೀಪುರಾಧಿಪತಿಯಾದ, ಭಕ್ತರ ಪಾಪಬಂಧನಗಳನ್ನು ಬಿಡುಗಡೆ ಮಾಡುವ ಶಂಭೋಶಂಕರ, ನಿನ್ನ ಪಾದಕಮಲಗಳಿಗೆ ವಂದಿಸುತ್ತೇನೆ.

ತ್ಯಾಗರಾಜರು

5. ಭೈರವಿ ಆದಿತಾಳ

ಪಲ್ಲವಿ : ಲಲಿತೇ ಶ್ರೀಪ್ರವೃದ್ಧೇ ಶ್ರೀಮತಿ ಲಾವಣ್ಯನಿಧಿ ಮತಿ

ಅನುಪಲ್ಲವಿ : ತೆಲಿವಿನಿ ವರ್ಧಿಲ್ಲು ಶ್ರೀ ತಪಸ್ತೀರ್ಥನಗರ ನಿಲಯೇ ||

ಚರಣ : 1. ತೆಲಿಯನಿ ಬಾಲುಡುಗಾದಾ ಅಂಬ
ತೆಲಿವಿ ನೀ ಸೊಮ್ಮು ಗಾದಾ
ಚಲಮು ಸೇಯ ಮರಿಯಾದಾ
ಚಲ್ಲನಿ ಮಾಟಲು ಬಲ್ಕರಾದಾ ||

2. ಬ್ರೋಚುವಾರಿಲನು ಲೇಕ
ಜೂಚಿ ಚೂಡಕ ಪರಾಕಾ
ಯೀ ಸುಜನುಲ ವೇಡಗ ಲೇಕ
ನೇ ದಾಸುಡ ನೀವೇ ಗತಿಗಾಕ ||

3. ಕನ್ನತಲ್ಲಿ ಶುಭವದನೇ ಮೀ
ಯನ್ನ ದಯಕು ಪಾತ್ರುಡನೇ
ತಿನ್ನಗ ಶರಣು ಜೊಚ್ಚಿತಿನೇ
ತ್ಯಾಗರಾಜ ಮಾನಸ ಸದನೇ ||

ಅರ್ಥ : ಲಲಿತೇ, ಶ್ರೀ ಪ್ರವೃದ್ಧೇ–ಸಂಪತ್ತನ್ನು ವರ್ಧಿಸುವವಳೇ ; ಶ್ರೀಮತಿ, ಲಾವಣ್ಯನಿಧಿ ಮತಿ, ಶ್ರೀತಪ ಸ್ತೀರ್ಥ ನಗರದಲ್ಲಿ ನೆಲಸಿದವಳೇ ; ತೆಲಿವಿನಿ–ನನ್ನ ಅರಿವನ್ನು ; ವರ್ಧಿಲ್ಲು–ಬೆಳಿಸು ; ತೆಲಿಯನಿ–ಏನೂ ತಿಳಿಯದ ; ಬಾಲುಡುಗಾದಾ–ಬಾಲಕನಲ್ಲವೇ ನಾನು ? ಅಂಬ–ಅಮ್ಮ ; ತೆಲಿವಿ–ಜ್ಞಾನವು ; ನೀ ಸೊಮ್ಮುಗಾದಾ–ನಿನ್ನ ಸೊತ್ತಲ್ಲವೆ ? ; ಚಲಮುಸೇಯು–ಹೀಗೆ ಹಟ ಮಾಡುವುದು ; ಮರಿಯಾದಾ ನಿನಗೆ ವಿಹಿತವೆ ? ; ಚಲ್ಲನಿ ಮಾಟಲು–ಹಿತವಾದ ಮಾತುಗಳನ್ನು ; ಬಲ್ಕರಾದಾ–ಹೇಳಬಾರದೆ ? ; ಇಲನು–ಈ ಪ್ರಪಂಚದಲ್ಲಿ ; ಬ್ರೋಚುವಾರು–ಕಾಪಾಡುವವರು ; ಲೇಕ–ಯಾರೂ ಇಲ್ಲದಿರಲು ; ಜೂಚಿ–ನೋಡಿಯೂ ; ಚೂಡಕಪರಾಕಾ–ನೋಡದಂತೆ ಅಲಕ್ಷಿಸುವುದು ಸರಿಯೇ ? ; ಈ ಸುಜನುಲ–ಈ ಜನರನ್ನು ; ವೇಡಗಲೇಕ–ಬೇಡಲಾರದ ಸ್ಥಿತಿಯಲ್ಲಿರುವ; ನೇ ದಾಸುಡ–ಈ ನಿನ್ನ ದಾಸನಿಗೆ ; ನೀನೇ ಗತಿ ಗಾಕ-ನೀನೇ ಗತಿಯಲ್ಲದೆ ಬೇರೆ ಯಾರು ? ; ಕನ್ನತಲ್ಲಿ–ಅಮ್ಮ ; ಶುಭವದನೇ, ಮೀಯನ್ನ–ನಿನ್ನ ಅಣ್ಣನ* ದಯಕು ಪಾತ್ರುಡನೇ–ದಯೆಗೆ ಪಾತ್ರನಾಗಿದ್ದೇನಲ್ಲವೆ ? ; ತಿನ್ನಗ–ನೇರವಾಗಿ ; ಶರಣು ಜೊಚ್ಚಿತಿನೇ–ನಿನಗೆ ಶರಣುಬಂದಿದ್ದೇನಲ್ಲವೆ ? ; ತ್ಯಾಗರಾಜ ಮಾನಸಸದನೇ–ತ್ಯಾಗರಾಜನ ಮನಸ್ಸಿನಲ್ಲಿ ನೆಲಸಿದವಳೇ, ಲಲಿತೇ ನನ್ನ ತಿಳಿವನ್ನು ವರ್ಧಿಸು.

ಸಾರಾಂಶ : ಈ ಜಗತ್ತಿನ ಜನರನ್ನು ಯಾಚಿಸಲಾರದೆ ನಿಂತಿರುವ ನನ್ನ ಮೇಲೆ ದಯೆತೋರಿಸು. ನೋಡಿಯೂ ನೋಡದಂತೆ ಅಲಕ್ಷಿಸುವುದು ತರವಲ್ಲ, ನನಗೆ ನೀನಲ್ಲದೆ ಬೇರೆ ಯಾರಿದ್ದಾರೆ ಎಂದು ತಾಯಿ ಲಲಿತೆಯನ್ನು ತ್ಯಾಗರಾಜರು ಬೇಡಿದ್ದಾರೆ.

**6. ರಾಗ : ಭೈರವಿ ಆದಿತಾಳ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್**

ಪಲ್ಲವಿ : ನೀ ಪಾದಮುಲೇ ಗತಿಯನಿ ನಮ್ಮಿತಿ ನೀರಜಾಕ್ಷಿ ಪರಾಶಕ್ತಿ ||

ಅನುಪಲ್ಲವಿ : ಶ್ರೀ ಪಂಚನದೀಶ್ವರುನಿ ರಾಣಿ ಶ್ರಿತಜನ ಪಾಲಿನಿ ಧರ್ಮ ಸಂವರ್ಧನಿ ||

ಚರಣ : ಕಾಮಿತ ಫಲದಾಯಕಿ ಕೌಮಾರಿ ಕಾಮದಹನುನಿ ಮನೋಹರಿ ಶಂಕರಿ
ಓಂ ಮಹಾಕಾಳಿ ಸನಾತನಿ ಓಂಕಾರ ಸದನಿ ಭವಾನಿ
ಸಾಮಜವರಗಮನಿ ಶುಕಭಾಷಿಣಿ ಸಕಲಲೋಕಜನನಿ ಪಾಪದಹನಿ
ಪಾಮರಸುರಮದ ವಿಭಂಜಿನಿ ಪರಾತ್ಪರಿ ಪಾವನಿ ಶಂಕರಿ ||

ಅರ್ಥ : ನೀರಜಾಕ್ಷಿ–ತಾವರೆಯಂತೆ ಕಣ್ಣುಳ್ಳವಳೇ, ಪರಾಶಕ್ತಿ, ಶ್ರೀ ಪಂಚನದೀಶ್ವರನ ರಾಣಿ ; ಶ್ರಿತಜನ–ಆಶ್ರಯ ಬೇಡಿದ ಜನರನ್ನು ; ಪಾಲಿನಿ–ಪಾಲಿಸುವವಳೇ ; ಧರ್ಮವನ್ನು ವರ್ಧಿಸುವವಳೇ ; ನೀ ಪಾದಮುಲೇ–ನಿನ್ನ ಪಾದಗಳೇ ; ಗತಿಯನಿ–ಗತಿಯೆಂದು ; ನಮ್ಮಿತಿ–ನಂಬಿದ್ದೇನೆ ; ಕಾಮಿತ ಫಲದಾಯಕಿ–

* ಪಾರ್ವತಿಗೆ 'ಶ್ರೀವಿಷ್ಣುಸಹೋದರಿ' ಎಂಬುದೊಂದು ಹೆಸರು.

3. ಕನ್ನತಲ್ಲಿ ಶುಭವದನೇ ಮೀ
ಯನ್ನ ದಯಕು ಪಾತ್ರುಡನೇ
ತಿನ್ನಗ ಶರಣು ಜೊಚ್ಚಿತಿನೇ
ತ್ಯಾಗರಾಜ ಮಾನಸ ಸದನೇ ||

ಅರ್ಥ : ಲಲಿತೇ, ಶ್ರೀ ಪ್ರವೃದ್ಧೇ–ಸಂಪತ್ತನ್ನು ವರ್ಧಿಸುವವಳೇ ; ಶ್ರೀಮತಿ, ಲಾವಣ್ಯನಿಧಿ ಮತಿ, ಶ್ರೀತಪ ಸ್ತೀರ್ಥ ನಗರದಲ್ಲಿ ನೆಲಸಿದವಳೇ ; ತೆಲಿವಿನಿ–ನನ್ನ ಅರಿವನ್ನು ; ವರ್ಧಿಲ್ಲು–ಬೆಳೆಸು ; ತೆಲಿಯನಿ–ಏನೂ ತಿಳಿಯದ ; ಬಾಲುಡುಗಾದಾ–ಬಾಲಕನಲ್ಲವೇ ನಾನು ? ಅಂಬ–ಅಮ್ಮ ; ತೆಲಿವಿ–ಜ್ಞಾನವು ; ನೀ ಸೊಮ್ಮುಗಾದಾ–ನಿನ್ನ ಸೊತ್ತಲ್ಲವೆ ? ; ಚಲಮುಸೇಯು–ಹೀಗೆ ಹಟ ಮಾಡುವುದು ; ಮರಿಯಾದಾ ನಿನಗೆ ವಿಹಿತವೆ ? ; ಚಲ್ಲನಿ ಮಾಟಲು–ಹಿತವಾದ ಮಾತುಗಳನ್ನು ; ಬಲ್ಕರಾದಾ–ಹೇಳಬಾರದೆ ? ; ಇಲಸು–ಈ ಪ್ರಪಂಚದಲ್ಲಿ ; ಬ್ರೋಚುವಾರು–ಕಾಪಾಡುವವರು ; ಲೇಕ–ಯಾರೂ ಇಲ್ಲದಿರಲು ; ಜೂಚಿ–ನೋಡಿಯೂ ; ಚೂಡಕಪರಾಕಾ–ನೋಡದಂತೆ ಅಲಕ್ಷಿಸುವುದು ಸರಿಯೇ ? ; ಈ ಸುಜನುಲ–ಈ ಜನರನ್ನು; ವೇಡಗಲೇಕ–ಬೇಡಲಾರದ ಸ್ಥಿತಿಯಲ್ಲಿರುವ; ನೇ ದಾಸುಡ–ಈ ನಿನ್ನ ದಾಸನಿಗೆ ; ನೀನೇ ಗತಿ ಗಾಕ-ನೀನೇ ಗತಿಯಲ್ಲದೆ ಬೇರೆ ಯಾರು ? ; ಕನ್ನತಲ್ಲಿ–ಅಮ್ಮ ; ಶುಭವದನೇ, ಮೀಯನ್ನ–ನಿನ್ನ ಅಣ್ಣನ* ದಯಕು ಪಾತ್ರುಡನೇ–ದಯೆಗೆ ಪಾತ್ರನಾಗಿದ್ದೇನಲ್ಲವೆ ? ; ತಿನ್ನಗ–ನೇರವಾಗಿ ; ಶರಣು ಜೊಚ್ಚಿತಿನೇ–ನಿನಗೆ ಶರಣುಬಂದಿದ್ದೇನಲ್ಲವೆ ? ; ತ್ಯಾಗರಾಜ ಮಾನಸಸದನೇ–ತ್ಯಾಗರಾಜನ ಮನಸ್ಸಿನಲ್ಲಿ ನೆಲಸಿದವಳೇ, ಲಲಿತೇ ನನ್ನ ತಿಳಿವನ್ನು ವರ್ಧಿಸು.

ಸಾರಾಂಶ : ಈ ಜಗತ್ತಿನ ಜನರನ್ನು ಯಾಚಿಸಲಾರದೆ ನಿಂತಿರುವ ನನ್ನ ಮೇಲೆ ದಯೆತೋರಿಸು. ನೋಡಿಯೂ ನೋಡದಂತೆ ಅಲಕ್ಷಿಸುವುದು ತರವಲ್ಲ, ನನಗೆ ನೀನಲ್ಲದೆ ಬೇರೆ ಯಾರಿದ್ದಾರೆ ಎಂದು ತಾಯಿ ಲಲಿತೆಯನ್ನು ತ್ಯಾಗರಾಜರು ಬೇಡಿದ್ದಾರೆ.

6. ರಾಗ : ಭೈರವಿ ಆದಿತಾಳ

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ನೀ ಪಾದಮುಲೇ ಗತಿಯನಿ ನಮ್ಮಿತಿ ನೀರಜಾಕ್ಷಿ ಪರಾಶಕ್ತಿ ||

ಅನುಪಲ್ಲವಿ : ಶ್ರೀ ಪಂಚನದೀಶ್ವರುನಿ ರಾಣಿ ಶ್ರಿತಜನ ಪಾಲಿನಿ ಧರ್ಮ ಸಂವರ್ಧನಿ ||

ಚರಣ : ಕಾಮಿತ ಫಲದಾಯಕಿ ಕೌಮಾರಿ ಕಾಮದಹನುನಿ ಮನೋಹರಿ ಶಂಕರಿ
ಓಂ ಮಹಾಕಾಳಿ ಸನಾತನಿ ಓಂಕಾರ ಸದನಿ ಭವಾನಿ
ಸಾಮಜವರಗಮನಿ ಶುಕಭಾಷಿಣಿ ಸಕಲಲೋಕಜನನಿ ಪಾಪದಹನಿ
ಪಾಮರಸುರಮದ ವಿಭಂಜಿನಿ ಪರಾತ್ಪರಿ ಪಾವನಿ ಶಂಕರಿ ||

ಅರ್ಥ : ನೀರಜಾಕ್ಷಿ–ತಾವರೆಯಂತೆ ಕಣ್ಣುಳ್ಳವಳೇ, ಪರಾಶಕ್ತಿ, ಶ್ರೀ ಪಂಚನದೀಶ್ವರನ ರಾಣಿ ; ಶ್ರಿತಜನ–ಆಶ್ರಯ ಬೇಡಿದ ಜನರನ್ನು ; ಪಾಲಿನಿ–ಪಾಲಿಸುವವಳೇ ; ಧರ್ಮವನ್ನು ವರ್ಧಿಸುವವಳೇ ; ನೀ ಪಾದ ಮುಲೇ–ನಿನ್ನ ಪಾದಗಳೇ ; ಗತಿಯನಿ–ಗತಿಯೆಂದು ; ನಮ್ಮಿತಿ–ನಂಬಿದ್ದೇನೆ ; ಕಾಮಿತ ಫಲದಾಯಕಿ–

---

* ಪಾರ್ವತಿಗೆ 'ಶ್ರೀವಿಷ್ಣುಸಹೋದರಿ' ಎಂಬುದೊಂದು ಹೆಸರು.

ಅಪೇಕ್ಷಿಸಿದ ಫಲಗಳನ್ನು ನೀಡುವವಳು ; ಕೌಮಾರಿ, ಕಾಮದಹನುನಿ–ಕಾಮನನ್ನು ದಹಿಸಿದ ಪರಮೇಶ್ವರನ ಮನೋಹರಿ, ಶಂಕರಿ–ಶುಭವನ್ನುಂಟುಮಾಡುವವಳು ; ಮಹಾಕಾಳಿ, ಸನಾತನಿ ; ಓಂಕಾರಕ್ಕೆ, ಸದನಿ–ನೆಲೆಯಾದವಳು ; ಭವಾನಿ, ಸಾಮಜವರಗಮನಿ–ಶ್ರೇಷ್ಠವಾದ ಆನೆಯಂತೆ ನಡಗೆಯುಳ್ಳವಳು ; ಶುಕಭಾಷಿಣಿ–ಗಿಣಿಯಂತೆ ಮಧುರವಾಗಿ ಮಾತಾಡುವವಳು ; ಸಕಲ ಲೋಕಜನನಿ–ಲೋಕಗಳೆಲ್ಲಕ್ಕೂ ತಾಯಿಯಾದವಳು ; ಪಾಪದಹನಿ–ಪಾಪಗಳನ್ನು ಸುಡುವವಳು ; ಪಾಮರಸುರಮದ–ಪಾಮರರಾದ ಅಸುರರ ಮದವನ್ನು ; ವಿಭಂಜಿನಿ–ನಾಶ ಮಾಡಿದವಳು ; ಪರಾತ್ಪರಿ, ಪಾವನಿ, ಶಂಕರಿ ; ಇಂತಹ ಪರಾಶಕ್ತಿಯನ್ನು ನೀನೇ ಗತಿಯೆಂದು ನಂಬಿದ್ದೇನೆ.

ಸಾರಾಂಶ : ಪಂಚನದೀಶ್ವರನ ರಾಣಿಯೇ, ನೀರಜಾಕ್ಷಿ, ನಿನ್ನ ಪಾದಗಳೇ ಗತಿ ಎಂದು ನಾನು ನಂಬಿಕೊಂಡಿದ್ದೇನೆ. ನೀನು ಭಕ್ತರು ಅಪೇಕ್ಷಿಸಿದ ಫಲಗಳನ್ನು ನೀಡುವವಳು ಮನೋಹರಿ, ಶಂಕರಿ, ಮಹಾಕಾಳಿ, ಸನಾತನಿ, ಓಂಕಾರವೇ ನೆಲೆಯಾದವಳು.

**7.** ರಾಗ : ಲತಾಂಗಿ ಆದಿತಾಳ ಮೈಸೂರು ವಾಸುದೇವಾಚಾರ್ಯರು

ಪಲ್ಲವಿ : ಎಂತ ನಿರ್ದಯ ನಾಮೀದ ನೀಕು
ದಂತಿವರದ ಶ್ರೀ ರುಕ್ಮಿಣೀರಮಣ ||

ಅನುಪಲ್ಲವಿ : ಚಿಂತಿತಾರ್ಥ ದಾಯಕುಡನುಚು ದೆಲಿಸಿ
ಸಂತತಂಬು ನಿನ್ನೇ ನಮ್ಮಿತಿನಯ್ಯ ||

ಚರಣ : ವಾರಿಜಾಸನಾದಿ ವಿನುತಪಾದ ನಾದು
ಘೋರಪಾಪಜಾಲ ಮೆಲ್ಲದೀರ್ಚುಟಕು
ವಾರಿಜಾಕ್ಷ ವಾಸುದೇವ ನೀವುಗಾಕ
ವೇರೆವರುನ್ನಾರಯ್ಯ ಬ್ರೋವವಯ್ಯ ||

ಅರ್ಥ : ದಂತಿವರದ–ಗಜೇಂದ್ರನಿಗೆ ಅನುಗ್ರಹ ಮಾಡಿದ ; ಶ್ರೀ ರುಕ್ಮಿಣೀರಮಣ–ರುಕ್ಮಿಣೀಪತಿಯೇ ; ನಾಮೀದ–ನನ್ನ ಮೇಲೆ ; ನೀಕು–ನಿನಗೆ ; ಎಂತ ನಿರ್ದಯ–ಎಷ್ಟೊಂದು ನಿರ್ದಯೆ ! ಚಿಂತಿತಾರ್ಥ ದಾಯಕುಡು–ನೀನು ಅಪೇಕ್ಷಿಸಿದ ಫಲವನ್ನು ನೀಡುವವನು ; ಅನುಚು–ಎಂದು ; ದೆಲಿಸಿ–ಭಾವಿಸಿ ; ಸಂತತಂಬು–ಸದಾ ; ನಿನ್ನೇ ನಮ್ಮಿತಿನಯ್ಯ–ನಿನ್ನನ್ನೇ ನಂಬಿದೆನಯ್ಯ ; ವಾರಿಜಾಸನಾದಿ–ಬ್ರಹ್ಮನೇ ಮೊದಲಾದವರಿಂದ ; ವಿನುತಪಾದ–ನುತಿಸಲ್ಪಟ್ಟ ಪಾದಗಳುಳ್ಳವನೇ ; ನಾದು–ನನ್ನ ; ಘೋರ ಪಾಪಜಾಲಮೆಲ್ಲದೀರ್ಚುಟಕು–ಭಯಂಕರವಾದ ಪಾಪಗಳೆಲ್ಲವನ್ನೂ ನಾಶಮಾಡಲು, ವಾರಿಜಾಕ್ಷ, ವಾಸುದೇವ, ನೀವುಗಾಕ–ನೀನಲ್ಲದೆ ; ವೇರೆವರುನ್ನಾರಯ್ಯ–ಬೇರೆ ಯಾರಿದ್ದಾರಯ್ಯ ; ಬ್ರೋವವಯ್ಯ–ಕಾಪಾಡಯ್ಯ.

ಸಾರಾಂಶ : ಆನೆಗೆ ಅನುಗ್ರಹ ತೋರಿಸಿದ ದೇವ, ನನ್ನ ಮೇಲೇಕೆ ದಯೆಯಿಲ್ಲ ? ಅಪೇಕ್ಷಿಸಿದ ಫಲ ನೀಡುವವನು ನೀನೆಂದು ಸದಾ ನಿನ್ನನ್ನೇ ನಂಬಿದ್ದೇನೆ. ನನ್ನ ಪಾಪಗಳನ್ನು ನಾಶಮಾಡಲು ಬೇರೆ ಯಾರಿದ್ದಾರಯ್ಯ, ನೀನೇ ಕಾಪಾಡಬೇಕು.

8. ರಾಗ : ಲತಾಂಗಿ ಖಂಡಛಾಪುತಾಳ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಮರಿವೇರೆ ದಿಕ್ಕೆವರು ರಾಮಯ್ಯ

ಅನುಪಲ್ಲವಿ : ದರಲೋನ ನೀ ಸಾಟಿ ದೈವಮು ನೇಗಾನ ||

ಚರಣ : ಮನಸಾರ ನಿನು ಸಾರಮುಗು ಸಂಕೀರ್ತನ
ಲೊನರಿಂಚ ವಿನವೇಮಿ ವರದ ವೆಂಕಟೇಶ ||

ಅರ್ಥ : ರಾಮಯ್ಯ–ಶ್ರೀರಾಮಚಂದ್ರ : ಮರಿವೇರೆ ದಿಕ್ಕೆವರು–ಬೇರೆ ದಿಕ್ಕುಯಾರಿದ್ದಾರಯ್ಯ ? ದರಲೋನ–ಈ ಭೂಮಿಯಲ್ಲಿ ; ನೀ ಸಾಟಿ ದೈವಮು–ನಿನ್ನ ಸಮನಾದ ದೈವವನ್ನು ; ನೇ ಗಾನ–ನಾನು ಕಾಣೆ ವರದ ವೆಂಕಟೇಶ, ನಿನು–ನಿನ್ನನ್ನು, ಸಾರಮುಗು–ಗಾಢವಾಗಿ ; ಮನಸಾರ, ಸಂಕೀರ್ತನಲು ಒನರಿಂಚ–ಪ್ರಾರ್ಥಿಸುತ್ತಿದ್ದೇನೆ, ಕೀರ್ತಿಸುತ್ತಿದ್ದೇನೆ ; ವಿನವೇಮಿ–ನೀನು ಕೇಳುತ್ತಿಲ್ಲವೆ ?

ಸಾರಾಂಶ : ನಿನ್ನ ಸಮನಾದ ದೈವ ಬೇರೆ ಯಾವುದು ? ಶ್ರೀರಾಮಚಂದ್ರ, ನಿನ್ನನ್ನೆ ನಾನು ಸಾರವತ್ತಾಗಿ ಮನಸಾರೆ ಬೇಡುತ್ತಿದ್ದೇನೆ, ನನಗೆ ಬೇರೆ ಯಾರು ದಿಕ್ಕು ?

9. ರಾಗ : ಲತಾಂಗಿ ಆದಿತಾಳ ವಿ. ರಾಮರತ್ನಂ

ಪಲ್ಲವಿ : ಶ್ರಿತಫಲದಾಯಕಿ ದುರಿತಾಪಹಾರಿಣಿ
ಜಾಗುಸೇಯು ತರಮಾ ನೀ ಪ್ರಾಪುಕೋರಿತಿ ಅಂಬ ||

ಅನುಪಲ್ಲವಿ : ಪತಿತ ಪಾವನಿ ನೀಲೋತ್ಪಲಾಂಬಿಕೆ
ಕಾತ್ಯಾಯಿನಿ ತ್ರಿಪುರೇಶ್ವರಿ ಅಂಬಾ ||

ಚರಣ : ಮಾಧವ ಸೋದರಿ ಮಂಜುಭಾಷಿಣಿ
ಮಂದಗಮನೆ ಲೋಕರಕ್ಷಕಿ ಅಂಬ
ಪರಾತ್ಪರಿ ರಾಜಧರಿ ಶಂಕರಿ ಉದಾರಿ
ಪರಮೇಶ್ವರಿ ರಾಮ ಕರಾರ್ಚಿತೆ ||

ಅರ್ಥ : ದುರಿತಾಪಹಾರಿಣಿ–ಪಾಪಗಳನ್ನು ಪರಿಹರಿಸುವವಳೇ ; ಶ್ರಿತ ಫಲದಾಯಕಿ–ಆಶ್ರಿತರು ಬೇಡಿದ ಫಲಗಳನ್ನು ನೀಡುವವಳೇ ; ನೀ ಪ್ರಾಪು ಕೋರಿತಿ–ನಿನ್ನನ್ನೇ ಬೇಡುತ್ತಿದ್ದೇನೆ ; ಜಾಗುಸೇಯು–ವಿಳಂಬಮಾಡುವುದು ; ತರಮಾ–ಸರಿಯೆ ; ಪತಿತಪಾವನಿ–ಪತಿತರನ್ನು ಉದ್ಧರಿಸುವವಳು ; ನೀಲೋತ್ಪಲಾಂಬಿಕೆ, ಕಾತ್ಯಾಯಿನಿ, ತ್ರಿಪುರೇಶ್ವರಿ ಎಂದು ಹೆಸರಾದ ತಾಯಿ ನೀನು, ಮಾಧವ ಸೋದರಿ–ವಿಷ್ಣುವಿಗೆ ಸಹೋದರಿ ; ಮಂಜುಭಾಷಿಣಿ–ಮಧುರವಾಗಿ ಮಾತನಾಡುವವಳು ; ಮಂದಗಮನೆ ; ಲೋಕರಕ್ಷಕಿ–ಲೋಕವನ್ನು ಕಾಪಾಡುವವಳು ; ಪರಾತ್ಪರಿ, ರಾಜಧರಿ–ಚಂದ್ರನನ್ನು ತಲೆಯಲ್ಲಿ ಧರಿಸಿದವಳು, ಶಂಕರಿ–ಶುಭವನ್ನುಂಟುಮಾಡುವವಳು, ಉದಾರಿ, ಪರಮೇಶ್ವರಿ, ರಾಮನಿಂದ ಅರ್ಚಿತಳಾದವಳು.

10. ರಾಗ : ಶ್ರೀರಂಜಿನಿ ದೇಶಾದಿ ತಾಳ ತ್ಯಾಗರಾಜರು

ಪಲ್ಲವಿ : ಭುವಿನಿ ದಾಸುಡನೇ ಪೇರಾಸಚೇ
ಬೊಂಕುಲಾಡಿತಿನಾ ? ಬುಧ ಮನೋಹರಾ

ಅನುಪಲ್ಲವಿ : ಅವಿವೇಕ ಮಾನವುಲ ಕೋರಿ ಕೋರಿ
ಅಡ್ಡತ್ರೋವದ್ರೊಕ್ಕಿತಿನಾ ? ಬ್ರೋವವೇ ||

ಚರಣ : ಚಾಲಸೌಖ್ಯಮೋ ಕಷ್ಟಮೋ ನೇನು
ಚಾಲಿಚೆಂದಿತಿನಾ ? ಸರಿವಾರಿಲೋ
ಪಾಲಮುಂಚಿನ ನೀಡ ಮುಂಚಿನ
ಪದಮುಲೇ ಗತಿ ತ್ಯಾಗರಾಜನುತ ||

ಅರ್ಥ : ಬುಧಮನೋಹರಾ–ಪ್ರಾಜ್ಞರಲ್ಲಿ ಅತಿ ಮನೋಹರವಾದ ದೇವನೇ ; ಭುವಿನಿ–ಈ ಭೂಮಿಯ ಮೇಲೆ ಪೇರಾಸಚೇ–ಅತ್ಯಾಸೆಯಿಂದ, ಲೋಭದಿಂದ ; ದಾಸುಡನಿ–ನಿನ್ನ ದಾಸನು ಎಂದು ; ಬೊಂಕುಲಾಡಿತಿನಾ–ನಾನು ಸುಳ್ಳು ಹೇಳಿದೆನೆ ? ಅವಿವೇಕಿಗಳಾದ ಮಾನವರನ್ನು ; ಕೋರಿ ಕೋರಿ–ಬೇಡಿ ; ಅಡ್ಡತ್ರೋವ ದೊಕ್ಕಿತಿನಾ–ಅಡ್ಡದಾರಿ ಹಿಡಿದೆನೆ ? ಬ್ರೋವವೇ–ಕಾಪಾಡಯ್ಯ ; ಚಾಲ ಸೌಖ್ಯಮೋ ಕಷ್ಟಮೋ–ಹೆಚ್ಚಿನ ಸುಖವೋ ಕಷ್ಟವೋ ಏನೇ ಇರಲಿ ; ನೇನು–ನಾನು ; ಚಾಲಿಚೆಂದಿತಿನಾ–ಸಾಕು ಎಂದೆನೆ ? ತ್ಯಾಗರಾಜನುತನೇ, ಸರಿವಾರಿಲೋ–ನನ್ನ ಸರೀಕರಲ್ಲಿ ; ಪಾಲಮುಂಚಿನ–ಹಾಲಿನಲ್ಲಿ ಮುಳುಗಲಿ, ನೀಡಮುಂಚಿನ–ನೀರಲ್ಲಿ ಮುಳುಗಲಿ, ಪಾದಮುಲೇ–ನಿನ್ನ ಪಾದಗಳೇ ; ಗತಿ–ನನಗೆ ದಿಕ್ಕು.

ಸಾರಾಂಶ : ಯಾವುದೇ ಲೋಭದಿಂದ ನಾನು ನಿನ್ನ ದಾಸ ಎಂದು ಹೇಳಿಕೊಂಡು ತಿರುಗಲಿಲ್ಲ ಸ್ವಾಮಿ, ಈ ಅವಿವೇಕಿ ಮಾನವರನ್ನು ಯಾಚಿಸುವ ಅಡ್ಡದಾರಿಯನ್ನು ಹಿಡಿಯಲಿಲ್ಲ. ಕಷ್ಟವಾಗಲಿ ಸುಖವಾಗಲಿ ನೀನು ನೀಡಿದ್ದನ್ನು ಸಾಕೆನ್ನದೆ ತೆಗೆದುಕೊಂಡಿದ್ದೇನೆ. ನನ್ನ ಸರಿಸಮರೆದುರಿಗೆ ನಾನು ಉದ್ಧಾರವಾದರೂ ಮುಳುಗಿಹೋದರೂ ನನಗೆ ಯೋಚನೆಯಿಲ್ಲ. ನಿನ್ನ ಪಾದಗಳು ದಿಕ್ಕಾಗಿದ್ದರೆ ಅದಷ್ಟೆ ನನಗೆ ಸಾಕು–ಎನ್ನುತ್ತಾರೆ ತ್ಯಾಗರಾಜರು.

11. ರಾಗ : ಶ್ರೀರಂಜಿನಿ ಆದಿತಾಳ ತ್ಯಾಗರಾಜರು

ಪಲ್ಲವಿ : ಬ್ರೋಚುವಾರೆವರೇ ರಘುಪತಿ

ಚರಣ : 1. ನಿನ್ನುವಿನಾ ಬ್ರೋಚೇವಾ ||
2. ಶ್ರೀರಾಮಾನೆನರುನ || ಬ್ರೋಚೇವಾ
3. ಸಕಲಲೋಕನಾಯಕ || ಬ್ರೋಚೇವಾ
4. ನರವರ ! ನೀ ಸರಿ || ಬ್ರೋಚೇವಾ
5. ದೇವೇಂದ್ರಾದುಲು ಮೆಚ್ಚುಟಕು ಲಂಕ
ದಯ ತೋ ದಾನ ಮೊಸಂಗಿ ಸದಾ || ಬ್ರೋಚೇವಾ
6. ವಾಲಿನೊಕ್ಕ ಕೋಲನೇಸಿ ರವಿ
ಬಾಲುನಿ ರಾಜುಗಗಾವಿಂಚಿ ಚೂಚಿ || ಬ್ರೋಚೇವಾ
7. ಮುನಿಸವನಮು ಜೂಡ ವೆಂಟೆ ಜನಿ ಖಲ
ನಾರೀಚಾದುಲ ಹತಂಬುಜೇಸಿ || ಬ್ರೋಚೇವಾ
8. ಭವಾಬ್ಧಿ ತರಣೋಪಾಯಮು ನೇರನಿ
ತ್ಯಾಗರಾಜುನಿ ಕರಂಬಿಡಿ || ಬ್ರೋಚೇವಾ

ಅರ್ಥ : ರಘುಪತಿಯೆ, ನಿನ್ನುವಿನಾ–ನೀನಲ್ಲದೆ ; ಬ್ರೋಚುವಾರು–ಕಾಪಾಡುವವರು ; ಎವರೇ–ಬೇರೆ ಯಾರಯ್ಯ ? ಶ್ರೀರಾಮಚಂದ್ರ, ನೆನರುನ–ಪ್ರೀತಿಯಿಂದ ; ಸಕಲಲೋಕ ನಾಯಕ, ನರವರ, ನೀ ಸರಿ–ನಿನಗೆ ಸಮರು ; ಎವರೇ–ಯಾರಿದ್ದಾರೆ ? ದೇವೇಂದ್ರಾದುಲು–ದೇವೇಂದ್ರನೇ ಮೊದಲಾದವರು ; ಮೆಚ್ಚುಟಕು–ಮೆಚ್ಚುವಂತೆ ; ಲಂಕ–ಲಂಕೆಯನ್ನು ; ದಯತೋ–ದಯೆಯಿಂದ ; ದಾನಮೊಸಂಗಿಸದಾ–ವಿಭೀಷಣನಿಗೆ ಉಡುಗೊರೆಯಾಗಿ ಕೊಟ್ಟುಬಿಟ್ಟೆ ; ವಾಲಿನು–ವಾಲಿಯನ್ನು ; ಒಕ್ಕ ಕೋಲನೇಸಿ–ಒಂದು ಬಾಣದಿಂದ ಹೊಡೆದು ; ರವಿಬಾಲುನಿ–ಸೂರ್ಯಪುತ್ರನಾದ ಸುಗ್ರೀವನನ್ನು ; ರಾಜುಗಾ ಕಾವಿಂಚಿ ಜೂಚಿ–ರಾಜನನ್ನಾಗಿ ಮಾಡಿದ ; ಮುನಿಸವನಮು ಜೂಡ–ವಿಶ್ವಾಮಿತ್ರ ಮುನಿಯ ಯಜ್ಞವನ್ನು ನೋಡಲು ; ವೆಂಟಜನಿ–ಜೊತೆಯಲ್ಲಿ ಹೋಗಿ ; ಖಲಮಾರೀಚಾದುಲ–ರಾಕ್ಷಸನಾದ ಮಾರೀಚ ಮೊದಲಾದವರನ್ನು ; ಹತಂಬು ಜೇಸಿ–ನಾಶಮಾಡಿದ ಶ್ರೀರಾಮಚಂದ್ರ, ಭವಾಬ್ಧಿ–ಈ ಜನ್ಮಾಂತರವೆಂಬ ಸಾಗರವನ್ನು ; ತರಣೋಪಾಯಮು ನೇರ–ದಾಟಿಸಲು ತಕ್ಕ ಸಮಯ ; ಅನಿ–ಎಂದು ತ್ಯಾಗರಾಜುನಿ ಕರಂಬಿಡಿ–ತ್ಯಾಗರಾಜನ ಕೈಹಿಡಿದು ಕಾಪಾಡಲು ನೀನಲ್ಲದೆ ಬೇರೆ ಯಾರಿದ್ದಾರೆ?

ಸಾರಾಂಶ : ವಾಲಿಯನ್ನು ಕೊಂದು ಸುಗ್ರೀವನಿಗೆ ರಾಜ್ಯಕೊಟ್ಟು ರಕ್ಷಿಸಿದೆ, ಲಂಕೆಯನ್ನು ಗೆದ್ದು ವಿಭೀಷಣನಿಗೆ ದಾನ ಮಾಡಿದೆ, ವಿಶ್ವಾಮಿತ್ರನ ಯಜ್ಞವನ್ನು ನೋಡಲು ಹೋಗಿ ಖಲ ಮಾರೀಚಾದಿಗಳನ್ನು ವಧಿಸಿ ಮುನಿಗಳನ್ನು ರಕ್ಷಿಸಿದೆ. ಇಂತಹ ನೀನಲ್ಲದೆ ನನ್ನನ್ನು ರಕ್ಷಿಸಬಲ್ಲವರು ಬೇರೆಯಾರಿದ್ದಾರೆ ಶ್ರೀರಾಮಚಂದ್ರ ?

12\. ರಾಗ : ಶ್ರೀರಂಜನಿ ಆದಿತಾಳ ವಾಲಾಜಪೇಟೆ ವೆಂಕಟರಮಣ ಭಾಗವತರು

ಪಲ್ಲವಿ : ಶ್ರೀರಘುರಾಮಂ ಸೀತಾನಾಥಂ
ಶ್ರಿತಜನರಕ್ಷಣಂ ಭಜಾಮಿ ||

ಅನುಪಲ್ಲವಿ : ಸಾರಸೋದ್ಭವಾದಿ ಬುಧೈಸ್ಸಂಸೇವ್ಯಂ
ಸಕಲ ಸುರಕ್ಷಣಂ ದನುಜ ವಿಶಿಕ್ಷಣಂ ||

ಚರಣ : ನಿರುಪಮಚರಿತ ಅಖಿಲಶ್ರುತಿವೇದ್ಯಂ
ನಿರವಧಿ ಸೌಖ್ಯಾನಂದ ಸ್ವರೂಪಂ
ಪರಮಪುರುಷಂ ಶುಭದಂ ರಾಮಚಂದ್ರ
ಪುರನಿಲಯಂ ಶ್ರೀಧರಂ ಸುಜನಮನೋಹರಂ ||

ಅರ್ಥ : ಸೀತಾನಾಥಂ–ಸೀತಾರಮಣನೂ : ಶ್ರಿತಜನರಕ್ಷಣಂ–ಆಶ್ರಿತರಾದ ಜನರನ್ನು ರಕ್ಷಿಸುವವನೂ ಆದ ಶ್ರೀ ರಘುರಾಮನನ್ನು ; ಭಜಾಮಿ–ಸ್ತುತಿಸುತ್ತೇನೆ ; ಸಾರಸೋದ್ಭವಾದಿ–ಬ್ರಹ್ಮನೇ ಮೊದಲಾದ ; ಬುಧೈಃ–ದೇವತೆಗಳಿಂದ ; ಸಂಸೇವ್ಯಂ–ಸೇವಿಸಲ್ಪಟ್ಟವನೂ ; ಸಕಲ ಸುರಕ್ಷಣಂ–ಸರ್ವರನ್ನೂ ರಕ್ಷಿಸುವವನೂ ; ದನುಜ–ರಾಕ್ಷಸರನ್ನು ; ವಿಶಿಕ್ಷಣಂ–ಶಿಕ್ಷಿಸುವವನೂ ಆದ, ರಘುರಾಮನನ್ನು ಭಜಿಸುತ್ತೇನೆ. ನಿರುಪಮಚರಿತ–ಹೋಲಿಕೆಯೇ ಇಲ್ಲದ ಶುದ್ಧ ಚಾರಿತ್ರವುಳ್ಳವನೂ ; ಅಖಿಲ ಶ್ರುತಿ ವೇದ್ಯಂ–ಸಮಸ್ತ ವೇದಗಳಿಗೆ ಗೋಚರನಾದವನೂ ; ನಿರವಧಿ–ಮಿತಿಯೇ ಇಲ್ಲದ ; ಸೌಖ್ಯಾನಂದ ಸ್ವರೂಪಂ–ಸುಖ ಆನಂದಗಳ ಸ್ವರೂಪನೂ ; ಪರಮ ಪುರುಷನೂ ; ಶುಭದಂ–ಶುಭವನ್ನು ನೀಡುವವನೂ ; ರಾಮಚಂದ್ರಪುರದಲ್ಲಿ ನೆಲಸಿದವನೂ, ಶ್ರೀ–ಲಕ್ಷ್ಮಿಯನ್ನು ; ಧರಂ–ಧರಿಸಿದವನೂ : ಸುಜನ–ಸಜ್ಜನರಿಗೆ ಮನೋಹರನಾಗಿರುವವನೂ ಆದ ಶ್ರೀ ರಘುರಾಮನನ್ನು ಭಜಿಸುತ್ತೇನೆ.

ಸಾರಾಂಶ ; ಬ್ರಹ್ಮನೇ ಮೊದಲಾದ ದೇವತೆಗಳಿಂದ ಸೇವಿತನಾದವನೂ, ಸಜ್ಜನರನ್ನು ರಕ್ಷಿಸಿ ದುರ್ಜನರನ್ನು ಶಿಕ್ಷಿಸುವವನೂ, ಹೋಲಿಕೆಯೇ ಇಲ್ಲದ ಶುದ್ಧ ಚಾರಿತ್ರ್ಯವುಳ್ಳವನೂ, ವೇದಾದಿ ಶ್ರುತಿಗಳಿಗೆ ಗೋಚರನೂ, ಮಿತಿಯೇ ಇಲ್ಲದ ಸೌಖ್ಯ ಆನಂದಗಳ ಸ್ವರೂಪನೂ, ಶುಭಕರನೂ ಆದ ಶ್ರೀ ರಘು ರಾಮನನ್ನು ಭಜಿಸುತ್ತೇನೆ.

13. ರಾಗ : ಅಠಾಣ ತ್ರಿಶ್ರತ್ರಿಪುಟ ತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಬೃಹಸ್ಪತೇ ತಾರಾಪತೇ ಬ್ರಹ್ಮಜ ತೇ ನಮೋಸ್ತುತೇ

ಅನುಪಲ್ಲವಿ : ಮಹಾಬಲವಿಭೋ ಗೀಷ್ಪತೇ ಮಂಜು ಧನುರ್ಮೀನಾಧಿಪತೇ
ಮಹೇಂದ್ರಾದ್ಯುಪಾಸಿತಾಕೃತೇ ಮಾಧವಾದಿವಿನುತೇ ಧೀಮತೇ ||

ಚರಣ : ಸುರಾಚಾರ್ಯವರ್ಯ ವಜ್ರಧರ ಶುಭಲಕ್ಷಣ ಜಗತ್ರಯಗುರೋ
ಜರಾದಿವರ್ಜಿತ ಕ್ರೋಧ ಕಚ ಜನಕಾಶ್ರಿತಜನ ಕಲ್ಪತರೋ
ಪುರಾರಿ ಗುರುಗುಹಸಂಮೋದಿತ ಪುತ್ರಕಾರಕ ದೀನಬಂಧೋ
ಪರಾದಿ ಚತ್ವಾರಿ ವಾಕ್‌ಸ್ವರೂಪ ಪ್ರಕಾಶಕ ದಯಾಸಿಂಧೋ
ನಿರಾಮಯ ನೀತಿ ಕರ್ತ್ರೇ ನಿರಂಕುಶಾಯ ವಿಶ್ವಭರ್ತ್ರೇ
ನಿರಂಜನಾಯ ಭುವನಭೋಕ್ತ್ರೇ ನಿರಂಶಾಯ ಮಖಪ್ರದಾತ್ರೇ ||

ಅರ್ಥ : ಬೃಹಸ್ಪತೇ–ಬೃಹಸ್ಪತಿಯೇ ; ತಾರಾಪತೇ–ತಾರೆಯ ವಲ್ಲಭನೇ; ಬ್ರಹ್ಮಜ–ಬ್ರಹ್ಮಪುತ್ರನೆ ; ತೇ ನಮೋಸ್ತುತೇ–ನಿನಗೆ ನಮಸ್ಕಾರ ; ಮಹಾಬಲವಿಭೋ–ಮಹಾ ಬಲಶಾಲಿಯಾದ ಪ್ರಭುವೇ ; ಗೀಷ್ಪತೇ–ವಿದ್ಯೆಗೆ ಒಡೆಯನೇ ; ಮಂಜು–ಮನೋಹರವಾದ ; ಧನುರ್ಮೀನಾಧಿಪತೇ–ಧನುಸ್ಸು ಮತ್ತು ಮೀನ ರಾಶಿಗಳಿಗೆ ಅಧಿಪತಿಯಾದವನೆ ; ಮಹೇಂದ್ರಾದಿ–ಮಹೇಂದ್ರನೇ ಮೊದಲಾದವರಿಂದ ; ಉಪಾಸಿತಾಕೃತೇ–ಪೂಜಿತನಾದವನೇ ; ಮಾಧವಾದಿವಿನುತೇ–ವಿಷ್ಣುವಿನಿಂದಲೂ ಸ್ತುತನಾದವನೇ ; ಧೀಮತೇ–ಮೇಧಾವಿಯೇ, ನಿನಗೆ ನಮಸ್ಕಾರ. ಸುರಾಚಾರ್ಯವರ್ಯ–ದೇವತೆಗಳಿಗೆ ಶ್ರೇಷ್ಠನಾದ ಗುರುವಾದವನೇ ; ವಜ್ರಧರ–ವಜ್ರಾಯುಧವನ್ನು ಹಿಡಿದವನೇ ; ಶುಭಲಕ್ಷಣ–ಮಂಗಳಕರವಾದ ಲಕ್ಷಣಗಳುಳ್ಳವನೇ ; ಜಗತ್ರಯಗುರೋ–ಮೂರುಲೋಕಕ್ಕೂ ಗುರುವಾದವನೇ ; ಜರಾದಿ–ಮುಪ್ಪು ಮೊದಲಾದ ಸಂಕಟಗಳನ್ನೂ, ಕ್ರೋಧ–ಕೋಪವನ್ನೂ ; ವರ್ಜಿತ– ಕಳೆದು ಕೊಂಡವನೇ ; ಕಚಜನಕ–ಕಚನ ಗುರುವಾದವನೆ ; ಆಶ್ರಿತಜನ ಕಲ್ಪತರೋ–ಆಶ್ರಯಬೇಡಿದ ಜನರಿಗೆ ಕಲ್ಪವೃಕ್ಷದಂತಿರುವವನೇ ; ಪುರಾರಿ–ಪರಮೇಶ್ವರ, ಗುರುಗುಹ–ಷಣ್ಮುಖ ಇವರನ್ನು, ಸಂಮೋದಿತ–ಸಂತೋಷ ಪಡಿಸಿದವನೇ ; ಪುತ್ರಕಾರಕ–ಪುತ್ರರನ್ನು ಕರುಣಿಸುವವನೇ, ದೀನಬಂಧು ; ಪರಾದಿ ಚತ್ವಾರಿ ವಾಕ್ಸ್ವರೂಪ ಪ್ರಕಾಶಕ–ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ವಾಕ್ಕಿನ ನಾಲ್ಕು ಸ್ವರೂಪಗಳನ್ನು ಪ್ರಕಟಿಸಿದವನೇ ; ನಿರಾಮಯಾಯ–ಕ್ಷೇಮಕಾರಕನಿಗೆ ; ನೀತಿಕರ್ತ್ರೇ–ನೀತಿ ಧರ್ಮಗಳನ್ನು ರೂಪಿಸಿದವನಿಗೆ ; ನಿರಂಕುಶನಾದವನಿಗೆ ; ವಿಶ್ವಭರ್ತ್ರೇ–ವಿಶ್ವಕ್ಕೇ ಒಡೆಯನಾದವನಿಗೆ ; ನಿರಂಜನಾಯ–ನಿರ್ಲಿಪ್ತನಾದವನಿಗೆ ; ಭುವನಭೋಕ್ತ್ರೇ–ಭುವನಕ್ಕೆಲ್ಲಾ ಪ್ರಭುವಾದವನಿಗೆ ; ನಿರಂಶಾಯ–ಪೂರ್ಣನಾದವನಿಗೆ ; ಮಖಪ್ರದಾತ್ರೇ–ಯಜ್ಞಗಳನ್ನು ನಡೆಸಿಕೊಡುವವನಿಗೆ, ನಮಸ್ಕಾರ.

ಸಾರಾಂಶ : ಇದು ದೀಕ್ಷಿತರ ನವಗ್ರಹ ಕೃತಿಗಳಲ್ಲಿ ಒಂದು, ಬೃಹಸ್ಪತಿಯ ಸ್ತುತಿ. ಮಹಾಬಲಶಾಲಿಯೂ, ಧನುರ್ಮೀನರಾಶಿಗಳಿಗೆ ಅಧಿಪತಿಯೂ, ಸಕಲ ವಿದ್ಯೆಗಳಿಗೆ ಗುರುವೂ, ದೇವತೆಗಳ ಆಚಾರ್ಯನೂ, ನೀತಿ

ನಿಯಮಗಳನ್ನು ರೂಪಿಸಿದವನೂ, ಕ್ಷೇಮಕಾರಕನೂ ಬಹುಪುತ್ರನೂ ಆದ ಬೃಹಸ್ಪತಿಗೆ ನಮಸ್ಕಾರ.

14. ರಾಗ : ಅಠಾಣ ರೂಪಕತಾಳ ತ್ಯಾಗರಾಜರು

ಪಲ್ಲವಿ : ನಾರದ ಗಾನಲೋಲ ನತಜನ ಪರಿಪಾಲ ||

ಅನುಗಲ್ಲವಿ : ನೀರದ ಸಮನೀಲ ನಿರುಪಮ ಗುಣಶೀಲ ||

ಚರಣ : ನೀವು ಲೇಕಯೇ ತನುವುಲು ನಿರತಮುಗಾ ನಡುಚುನು
ನೀವು ಲೇಕಯೇ ತರವುಲು ನಿಕ್ಕಮುಗಾ ಮೋಲುಚುನು
ನೀವು ಲೇಕಯೇ ವಾನಲುನಿತ್ಯಮುಗಾ ಗುರುಚುನು
ನೀವು ಲೇಕ ತ್ಯಾಗರಾಜು ನೀ ಗುಣಮುಲ ನೆಟುಬಾಡುನು||

ಅರ್ಥ : ನಾರದಗಾನಲೋಲ–ನಾರದನ ಗಾನದಿಂದ ಸಂತೋಷಪಡುವವನೆ ; ನತಜನ ಪರಿಪಾಲ-ಭಕ್ತಜನರನ್ನು ಪಾಲಿಸುವವನೆ ; ನೀರದಸಮ–ಮೋಡಗಳಿಗೆ ಸಮನಾದ ; ನೀಲ–ಶ್ಯಾಮಲವರ್ಣವುಳ್ಳವನೆ ; ನಿರುಪಮವಾದ ಗುಣಶೀಲಗಳುಳ್ಳವನೆ ; ನೀವು ಲೇಕ–ನೀನಿಲ್ಲದೆ ; ಯೇತನುವುಲು–ಯಾವದೇಹವು ತಾನೆ ; ನಿರತಮುಗಾ–ಶಾಶ್ವತವಾಗಿ ; ನಡುಚುನು–ನಡೆಯುತ್ತದೆ ? ; ಯೇತರುವುಲು–ಯಾವ ಮರವು ತಾನೆ ; ನಿಕ್ಕಮುಗಾ–ನಿಜವಾಗಿ ; ಮೋಲುಚುನು-ಚಿಗುರುತ್ತದೆ ; ಯೇವಾನಲು–ಯಾವ ಮಳೆತಾನೆ ; ನಿತ್ಯಮುಗಾ–ಸತತವಾಗಿ ; ಗುರುಚುನು–ಸುರಿಯುತ್ತದೆ ? ನೀವು ಲೇಕ–ನೀನಿಲ್ಲದೆ ; ತ್ಯಾಗರಾಜು–ತ್ಯಾಗರಾಜನು ; ನೀ ಗುಣಮುಲನು–ನಿನ್ನ ಗುಣಗಳನ್ನು ; ಎಟುಬಾಡನು–ಹೇಗೆ ಹಾಡಲು ಶಕ್ತನಾಗುತ್ತಾನೆ !

ಸಾರಾಂಶ : ಮೇಘದಂತೆ ಶ್ಯಾಮಲವರ್ಣನಾದ, ನಾರದನ ಗಾನದಿಂದ ಸಂತೋಷಪಡುವ ಸ್ವಾಮಿಯೆ, ಶ್ರೀರಾಮಚಂದ್ರ, ನೀನಿಲ್ಲದೆ ಯಾವ ಜೀವಿಯೂ ಬದುಕಲಾರದು, ಯಾವ ಮರವೂ ಚಿಗುರದು, ಯಾವ ಮೋಡವೂ ಮಳೆಸುರಿಸದು. ನೀನಿಲ್ಲದೆ ತ್ಯಾಗರಾಜನು ತಾನೆ ಹೇಗೆ ನಿನ್ನ ಗುಣಗಳನ್ನು ಹಾಡಿಯಾನು? 'ತೇನವಿನಾ ತೃಣಮಪಿ ನ ಚಲತಿ' [ನಿನ್ನಿಂದಲ್ಲದೆ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು] ಎಂಬ ವಾಕ್ಯದ ಸಾರವನ್ನು ತ್ಯಾಗರಾಜರು ಈ ಮಾತುಗಳಲ್ಲಿ ನಿರೂಪಿಸಿದ್ದಾರೆ.

15. ರಾಗ : ಅಠಾಣ ಆದಿತಾಳ ತ್ಯಾಗರಾಜರು

ಪಲ್ಲವಿ : ಮುಮ್ಮೂರ್ತುಲು ಗುಮಿಗೂಡಿ ಪೊಗಡೆಡಿ
ಮುಚ್ಚಟ ವಿನುಕೊನರೇ ||

ಅನುಪಲ್ಲವಿ : ಸಮ್ಮತಿಗಾ ರಾಜುಕೊಡುಕನಗಾ ವಿನಿ
ಸಂಶಯಮು ತೀರಗಾ ಶ್ರೀರಾಮುನಿ

ಚರಣ : ರೋಷಮುತೋ ರಘುರಾಮುನಿ ಗುಣಮುಲ
ರೂಢಿಗ ದಮ ಗುಣಮುಲ ನಟುವ್ರಾಸಿ
ತ್ರಾಸುನ ನಿಡ ಸರಿನಿಲ್ವಗ ಲೇದನಿ
ತ್ಯಾಗರಾಜನುತುಡೆವ್ವಡೋ ಯನುಚುನು ||

ಅರ್ಥ : ಮುಮ್ಮೂರ್ತುಲು–ತ್ರಿಮೂರ್ತಿಗಳೂ ; ಗುಮಿಗೂಡಿ–ಒಂದಾಗಿ ; ಪೊಗಡೆಡಿ–ಹೊಗಳುವ ; ಮುಚ್ಚಟ–ವಿನೋದವನ್ನು ; ವಿನುಕೊನರೇ–ಕೇಳಿರೇ ; ಸಮ್ಮತಿಗಾ–ಒಮ್ಮತದಿಂದ ; ರಾಜು

ಕೊಡುಕು-ರಾಜಕುಮಾರ ; ಅನಗಾ ವಿನಿ-ಎಂದು ಕೇಳಿ ; ಸಂಶಯಮುದೀರಗಾ-ಸಂದೇಹ ಹರಿಯದೆ ; ಶ್ರೀರಾಮುನಿ-ಶ್ರೀರಾಮನನ್ನು ಹೊಗಳುವ, ವಿನೋದವನ್ನು ಕೇಳಿರೇ ; ರೋಷಮುತೋ-ರೋಷದಿಂದ ; ರಘುರಾಮುನಿ-ರಾಮಚಂದ್ರನ ; ಗುಣಮುಲ-ಗುಣಗಳನ್ನೂ ; ರೂಢಿಗ-ರೂಢಿಯಾಗಿ ; ದಮುಗುಣಮುಲ-ತಮ್ಮ ಗುಣವನ್ನೂ ; ಅಟುವ್ರಾಸಿ-ಹಾಗೆ ಬರೆದು ; ತ್ರಾಸುನ ನಿಡ-ತಕ್ಕಡಿಯಲ್ಲಿಟ್ಟು ; ಸರಿನಿಲ್ವಗಲೇದನಿ-ಸರಿಯಾಗಲಿಲ್ಲ ಎಂದು ; ತ್ಯಾಗರಾಜ ನತಡು-ತ್ಯಾಗರಾಜನಿಂದ ನತನಾದವನು ; ಎವ್ವಡೋಯನುಚುನು-ಯಾರೋ ಎಂದು, ಹೊಗಳುತ್ತಿರುವ ವಿನೋದವನ್ನು ಕೇಳಿರೇ.

ಸಾರಾಂಶ : ತಮ್ಮ ಗುಣಗಳನ್ನೂ ಶ್ರೀರಾಮಚಂದ್ರನ ಗುಣಗಳನ್ನೂ ತಕ್ಕಡಿಯಲ್ಲಿಟ್ಟು ನೋಡಿದರೆ ತಮ್ಮದಕ್ಕಿಂತ ಅದೇ ಭಾರವಾಗಿರಲು, ಕೇವಲ ರಾಜಕುಮಾರನೆನಿಸಿದವನಿಗೆ ಇಂತಹ ಗುಣಗಳು ಹೇಗೆ ಬಂದುವೋ ಎಂದು ಆಶ್ಚರ್ಯದಿಂದ ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳೂ ಒಟ್ಟಾಗಿ ಅವನನ್ನು ಹೊಗಳುತ್ತಿದ್ದಾರೆ. ಈ ವಿನೋದವನ್ನು ಕೇಳಿರೇ.

16. ರಾಗ : ಗೌರೀಮನೋಹರಿ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಸಾರಸ ಸಮ ಮೃದುಪದ ನೀತಿ ನಿಲಯ
ಜಯ ಜಯ ಜಲಜನಾಭ ಹರೇ ವಸ ಮಮ ಹೃದಿ ||

ಅನುಪಲ್ಲವಿ : ಮಾರಜನಕ ಸುರಮುನಿ ಸೇವ್ಯ ಕ್ಷೀರಾಂಬುಧಿ ಕಲಿತಶಯನ ||

ಚರಣ : ಸಾಮಜ ಪರಿವೃಢ ಭಯಹರಣಾತೀತ
ಜಾಲವಿನಾಶನ ಚಾರು ಗುಣ ಸದನಾ
ಕಾಮಿತದಾಪರಾಯಣ ನಾರದ ಶೌನಕ ಸನ್ನುತ ||
ಭೂರಿ ಕೃಪಾರಸವಾಸ ವಿಭೋ ಪರಿ
ಪಾಹಿ ರಮಾಧವ ಭಾಸುರ ತನು ಸುಷಮ
ಶಾರದ ಶಶಿಮುಖ ಕೌಸ್ತುಭ ಹಾರ ರವಿ ವಿಧು ಲೋಚನ ||
ಪಾರಯ ಪಾಪ ಸಮೂಹಂ ದನುಜಾಳಿ ವಿಭಂಜನ
ಪಾವನ ಚರಿತ ದಾರಿತ ಮಧುಮುಖ ರಾಕ್ಷಸ ಸಂಚಯ
ವಿರಚಯ ಶುಭಮಯಿ ವಸ ಹೃದಿ ಮಮ ||

ಅರ್ಥ : ಸಾರಸ ಸಮ-ತಾವರೆಯಂತಹ ; ಮೃದು ಪದ-ಮೃದುವಾದ ಪಾದಗಳುಳ್ಳವನೇ ; ನೀತಿ ನಿಲಯ ನೀತಿಗೆ ನೆಲೆಯಾಗಿರುವವನೇ ; ಜಲಜನಾಭ-ಹೊಕ್ಕುಳಲ್ಲಿ ತಾವರೆಯುಳ್ಳ ವಿಷ್ಣುವೇ, ಹರೇ, ಜಯಜಯ, ಮಮಹೃದಿ-ನನ್ನ ಹೃದಯದಲ್ಲಿ ; ವಸ-ವಾಸಮಾಡು ; ಮಾರಜನಕ-ಮನ್ಮಥನ ತಂದೆಯೇ ; ಸುರಮುನಿ ಸೇವ್ಯ-ದೇವತೆಗಳಿಂದಲೂ ಮುನಿಗಳಿಂದಲೂ ಸೇವಿತನಾದವನೇ ; ಕ್ಷೀರಾಂಬುಧಿ ಕಲಿತ ಶಯನ-ಹಾಲುಗಡಲಲ್ಲಿ ಮಲಗಿದವನೇ; ಸಾಮಜ-ಆನೆಯ (ಗಜೇಂದ್ರನ) ಪರಿವೃಢ-ದೊಡ್ಡದಾದ ; ಭಯಹರಣ-ಭಯವನ್ನು ಪರಿಹರಿಸಿದವನೇ ; ಜಾಲವಿನಾಶನ-ಗರ್ವವನ್ನು ನಾಶಮಾಡುವವನೇ ; ಚಾರುಗುಣ ಸದನಾ-ಮನೋಹರವಾದ ಗುಣಗಳಿಗೆ ನೆಲೆಯಾದವನೇ ; ಕಾಮಿತದಾನ ಪರಾಯಣ-ಬೇಡಿದುದನ್ನು ನೀಡುವುದರಲ್ಲಿ ನಿರತನಾದವನೇ ; ನಾರದ ಶೌನಕರಿಂದ ಸ್ತುತನಾದವನೇ ; ಭೂರಿ-ಹಿರಿದಾದ ; ಕೃಪಾರಸವಾಸ-ಕರುಣೆಗೆ ನೆಲೆ

ಯಾದವನೇ ; ವಿಭುವೇ ; ಪರಿಪಾಹಿ–ಕಾಪಾಡು ; ರಮಾಧವ–ಲಕ್ಷ್ಮೀವಲ್ಲಭನೆ ; ಭಾಸುರ ತನು–ಹೊಳೆಯುವ ದೇಹಕಾಂತಿಯುಳ್ಳವನೇ ; ಸುಷಮ–ಮನೋಹರವಾದ ; ಶಾರದ ಶಶಿ ಮುಖ–ಶರತ್ಕಾಲದ ಚಂದ್ರನಂತೆ ಸುಂದರವಾದ ಮುಖವುಳ್ಳವನೇ ; ಕೌಸ್ತುಭಹಾರ–ಕೌಸ್ತುಭ ರತ್ನವನ್ನು ಹಾರದಲ್ಲಿ ಧರಿಸಿದವನೇ ; ರವಿ ವಿಧು ಲೋಚನ–ಸೂರ್ಯ ಚಂದ್ರರನ್ನೇ ಕಣ್ಣುಗಳಾಗಿ ಉಳ್ಳವನೇ ; ಪಾಪಸಮೂಹಂ ಪಾರಯ–ನನ್ನ ಪಾಪಗಳನ್ನು ಪರಿಹರಿಸು ; ದನುಜಾಳಿ–ರಾಕ್ಷಸ ಸಮೂಹವನ್ನು ; ವಿಭಂಜನ–ನಾಶಮಾಡಿದವನೇ ; ಪಾವನ ಚರಿತ–ಪವಿತ್ರವಾದ ಚಾರಿತ್ರ್ಯ ವುಳ್ಳವನೇ ; ಮಧುಮುಖ–ಮಧುಮುಖನೇ ಮೊದಲಾದ ; ರಾಕ್ಷಸ ಸಂಚಯ–ರಾಕ್ಷಸರ ಸಮೂಹವನ್ನು ; ದಾರಿತ–ನಾಶಮಾಡಿದವನೇ ; ವಿರಚಯ ಶುಭಮಯಿ–ನನಗೆ ಶುಭವನ್ನು ಉಂಟುಮಾಡು ; ಮಮ ಹೃದಿ ವಸ–ನನ್ನ ಹೃದಯದಲ್ಲಿ ನೆಲೆಸು.

ಸಾರಾಂಶ : ತಾವರೆಯಂತೆ ಮೃದುವಾದ ಪಾದಗಳುಳ್ಳ ಶ್ರೀವಿಷ್ಣುವನ್ನು ಸ್ವಾತಿ ತಿರುನಾಳ್ ಮಹಾರಾಜರು ಈ ಕೃತಿಯಲ್ಲಿ ಸ್ತುತಿಸಿದ್ದಾರೆ. ನನ್ನ ಹೃದಯದಲ್ಲಿ ಬಂದು ನೆಲೆಸು ಎಂದು ಬೇಡಿಕೊಳ್ಳುತ್ತಾರೆ. ಅವನು ಹೊಳೆಯುವ ದೇಹಕಾಂತಿಯುಳ್ಳವನು ಮಾತ್ರವಲ್ಲ, ಶರತ್ಕಾಲದ ಚಂದ್ರನಂತೆ ಸುಂದರ ವಾದ ಮುಖವುಳ್ಳವನು, ಸೂರ್ಯಚಂದ್ರರೆಂಬ ಕಣ್ಣುಗಳುಳ್ಳವನು, ಪಾವನ ಚರಿತನು ಎಂದು ವರ್ಣಿಸುತ್ತಾರೆ.

**17.** ರಾಗ : ಗೌರೀಮನೋಹರಿ ಆದಿತಾಳ ಕರೂರು ದಕ್ಷಿಣಾಮೂರ್ತಿ

ಪಲ್ಲವಿ : ಬ್ರೋವ ಸಮಯಮಿದೇ ರಾಮಯ್ಯ

ಅನುಪಲ್ಲವಿ : ಕಾವುಮನಿನೇ ಕೋರಿಯುಂಡಗಾ ನಾ
ಭಾವಮೆರಗಿ ನನ್ನಾದರಿಂಪವೇಗ ||

ಚರಣ : ನೆರ ನಮ್ಮಿನವಾರಿಕಿ ನಿರತಮು
ವರಮುಲೊಸಗೆ ಬಿರುದುಗಲ
ಕರುಣಾಕರುಡು ನೀವುಗದಾ
ವರ ಗರ್ಭಪುರಿವಾಸ ನಾ ತೋ ವಾದ ||

ಅರ್ಥ : ರಾಮಯ್ಯ–ಶ್ರೀರಾಮಚಂದ್ರನೇ ; ಇದೇ ಬ್ರೋವಸಮಯಮು–ನನ್ನನ್ನು ಕಾಪಾಡುವ ಸಮಯ ವಾಗಿದೆ ; ಕಾವುಮು–ಕಾಪಾಡು ; ಅನಿ–ಎಂದು ; ನೀ ಕೋರಿಯುಂಡಗ–ನಾನು ಪ್ರಾರ್ಥಿಸು ತ್ತಿದ್ದರೆ ; ನಾ ಭಾವಮೆರಗಿ–ನನ್ನ ಮನಸ್ಸನ್ನು ಅರಿತುಕೊಂಡು ; ನನ್ನು–ನನ್ನನ್ನು ; ಆದರಿಂಪ ವೇಗ–ಬೇಗನೆ ಆದರಿಸು ; ನೆರನಮ್ಮಿನವಾರಿಕಿ–ನಿನ್ನನ್ನು ಚೆನ್ನಾಗಿ ನಂಬಿದವರಿಗೆ ; ನಿರತಮು– ಸದಾ ; ವರಮುಲು–ವರಗಳನ್ನು ; ಒಸಗೆ–ಕೊಡುವ ; ಬಿರುದುಗಲ–ಬಿರುದುಹೊಂದಿರುವ ; ಕರುಣಾಕರುಡು–ಕರುಣಾಕರನು ; ನೀವುಗದಾ–ನೀನಲ್ಲವೆ ? ವರಗರ್ಭಪುರಿವಾಸ–ಶ್ರೇಷ್ಠವಾದ ಗರ್ಭಪುರಿ [ಕರೂರು] ಯಲ್ಲಿ ವಾಸಿಸುವವನೇ ; ನಾ ತೋ–ನನ್ನಮೇಲೆ ; ವಾದ–ಹಟವೇಕೆ ?

**18.** ರಾಗ : ಗೌರೀಮನೋಹರಿ ರೂಪಕತಾಳ ಮೈಸೂರು ವಾಸುದೇವಾಚಾರ್ಯರು

ಪಲ್ಲವಿ : ವರಲಕ್ಷ್ಮಿ ನಮೋಸ್ತು ತೇ ವರದೇ ನರಹರಿ ಸುಖದೇ ||

ಅನುಪಲ್ಲವಿ : ಅರವಿಂದ ಲೋಚನೆ ಅಘ ಬೃಂದ ಮೋಚನೆ
ಅರುಣಾಂಬುಜ ವರ ಸದನೇ ಅಮರೇಂದ್ರನುತ ಚರಣೆ ||

ಚರಣ : ವಾಸುದೇವ ವಿನುತಿರತೇ ವಾಸವಾದಿ ವಂದಿತೇ
ಭೂಸುರಾದಿ ಸೇವಿತೇ ಭಾಸುರ ಮಣಿಭೂಷಿತೇ
ದಾಸಜನ ಕಲ್ಪಲತೇ ದರಹಸಿತೇ ಸುವೃತ್ತೇ ||

ಅರ್ಥ : ವರದೇ–ವರಗಳನ್ನು ಕೊಡುವವಳೇ ; ನರಹರಿಸುಖದೇ–ನರಹರಿಗೆ (ವಿಷ್ಣುವಿಗೆ) ; ಸುಖದೇ–ಸುಖವನ್ನು ನೀಡುವವಳೇ ; ವರಲಕ್ಷ್ಮಿ, ನಮೋಸ್ತು ತೇ–ನಿನಗೆ ನಮಸ್ಕಾರ ; ಅರವಿಂದ ಲೋಚನೆ–ತಾವರೆಯಂತೆ ಕಣ್ಣುಗಳುಳ್ಳವಳೇ ; ಅಘಬೃಂದ–ಪಾಪಸಮೂಹವನ್ನು ; ಮೋಚನೆ–ಪರಿಹರಿಸುವವಳೆ ; ಅರುಣಾಂಬುಜ–ಕೆಂಪುತಾವರೆಯಲ್ಲಿ ; ವರಸದನೇ–ನೆಲಸಿರುವವಳೇ ; ಅಮರೇಂದ್ರನುತ ಚರಣೆ–ದೇವೇಂದ್ರನಿಂದ ಸ್ತುತಿಸಲ್ಪಟ್ಟ ಪಾದಗಳುಳ್ಳವಳೇ ; ವಾಸುದೇವ–ವಾಸುದೇವನ ; ವಿನುತಿರತೇ–ಸ್ತುತಿಯಿಂದ ಸಂತೋಷಪಡುವವಳೇ ; ವಾಸವಾದಿ ವಂದಿತೇ–ದೇವೇಂದ್ರನಿಂದ ನಮಸ್ಕೃತಳಾದವಳೇ; ಭೂಸುರಾದಿ ಸೇವಿತೇ–ಬ್ರಾಹ್ಮಣರಾದಿಯಾಗಿ ಎಲ್ಲರೂ ಸೇವಿಸುವಂಥವಳೇ; ಭಾಸುರ–ಪ್ರಕಾಶಮಾನವಾದ; ಮಣಿಭೂಷಿತೇ–ರತ್ನಗಳಿಂದ ಅಲಂಕೃತಳಾದವಳೇ; ದಾಸಜನ ಕಲ್ಪಲತೇ–ಭಕ್ತರಿಗೆ ಇಷ್ಟಾರ್ಥಗಳನ್ನು ಪೂರೈಸುವ ಕಲ್ಪಲತೆಯಂತಿರುವವಳೇ ; ದರಹಸಿತೇ–ಮುಗುಳ್ನಗೆಯಿಂದ ಕೂಡಿದವಳೇ ; ಸುವೃತ್ತೇ–ಶ್ರೇಷ್ಠವಾದ ಚಾರಿತ್ರವುಳ್ಳವಳೇ, ನಿನಗೆ ನಮಸ್ಕಾರ.

ಸಾರಾಂಶ : ತಾವರೆಯಂತೆ ಕಣ್ಣುಳ್ಳ ವರಲಕ್ಷ್ಮಿಯೇ, ನಿನಗೆ ನಮಸ್ಕಾರ. ಕೆಂದಾವರೆಯಲ್ಲಿ ನೆಲಸಿದ, ದೇವೇಂದ್ರಾದಿ ದೇವತೆಗಳಿಂದ ಪೂಜಿತಳಾದ, ದಿವ್ಯರತ್ನಗಳಿಂದ ಅಲಂಕೃತಳಾದ, ಕಲ್ಪಲತೆಯಂತಿರುವ ವರಲಕ್ಷ್ಮಿಯೇ ನಿನಗೆ ನಮಸ್ಕಾರ.

**19.** ರಾಗ : ಕಾಂಭೋಜಿ ರೂಪಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶ್ರೀ ಸುಬ್ರಹ್ಮಣ್ಯಾಯ ನಮಸ್ತೇ ನಮಸ್ತೇ
ಮನಸಿಜ ಕೋಟಿ ಕೋಟಿ ಲಾವಣ್ಯ ದೀನ ಶರಣ್ಯಾಯ ||

ಅನುಪಲ್ಲವಿ : ಭೂಸುರಾದಿ ಸಮಸ್ತಜನ ಪೂಜಿತಾಬ್ಜ ಚರಣಾಯ
ವಾಸುಕೀ ತಕ್ಷಕಾದಿ ಸರ್ಪಸ್ವರೂಪಧರಣಾಯ ವಾಸವಾದಿ
ದಾಸಜನಾಭೀಷ್ಟಪ್ರದ ದಕ್ಷತರಾಗ್ರಗಣ್ಯಾಯ ||

ಚರಣ : ತಾರಕ ಸಿಂಹ ಮುಖಶೂರ ಪದ್ಮಾಸುರ ಸಂಹರ್ತ್ರೇ
ತಾಪತ್ರಯ ಹರಣ ನಿಪುಣ ತತ್ತ್ವೋಪದೇಶ ಕರ್ತ್ರೇ
ವೀರನುತ ಗುರುಗುಹಾಯ ಅಜ್ಞಾನ ಧ್ವಾಂತ ಸವಿತ್ರೇ
ವಿಜಯವಲ್ಲೀ ಭರ್ತ್ರೇ ಶಕ್ತ್ಯಾಯುಧ ಧರ್ತ್ರೇ
ಧೀರಾಯ ನತ ವಿಧಾತ್ರೇ ದೇವರಾಜ ಜಾಮಾತ್ರೇ
ಭೂರಾದಿಭುವನ ಭೋಕ್ತ್ರೇ ಭೋಗಮೋಕ್ಷಪ್ರದಾತ್ರೇ ||

ಅರ್ಥ : ಮನಸಿಜ ಕೋಟಿ ಕೋಟಿ ಲಾವಣ್ಯ–ಕೋಟಿ ಕೋಟಿ ಮನ್ಮಥರಂತೆ ಸುಂದರನಾದ ; ದೀನ ಶರಣ್ಯಾಯ–ಆರ್ತರಿಗೆ ಆಶ್ರಯನಾದ ; ಶ್ರೀ ಸುಬ್ರಹ್ಮಣ್ಯಾಯ–ಸುಬ್ರಹ್ಮಣ್ಯ ಸ್ವಾಮಿಗೆ ; ನಮಸ್ತೇ ನಮಸ್ತೇ–ನಮಸ್ಕಾರ ; ಭೂಸುರಾದಿ–ಬ್ರಾಹ್ಮಣರೇ ಮೊದಲಾದ ; ಸಮಸ್ತ ಜನ–ಸಮಸ್ತ ಜನರಿಂದಲೂ ; ಪೂಜಿತಾಬ್ಜ ಚರಣಾಯ–ಪೂಜಿಸಲ್ಪಟ್ಟ ಪಾದಗಳುಳ್ಳವನೂ ; ವಾಸುಕೀ ತಕ್ಷಕಾದಿ–ವಾಸುಕಿ, ತಕ್ಷಕ ಮೊದಲಾದ ; ಸರ್ಪಸ್ವರೂಪಧರಣಾಯ–ಸರ್ಪಗಳ ಸ್ವರೂಪ ವನ್ನು ಧರಿಸಿದವನೂ; ವಾಸವಾದಿ–ದೇವೇಂದ್ರನೇ ಮೊದಲಾದ; ಸಕಲ ದೇವವಂದಿತಾಯ–ಸಕಲ ದೇವತೆಗಳಿಂದ ವಂದಿಸಲ್ಪಟ್ಟ ; ವರೇಣ್ಯಾಯ–ಶ್ರೇಷ್ಠನೂ ; ದಾಸಜನ ಅಭೀಷ್ಟಪ್ರದ–ಭಕ್ತಜನರ ಅಪೇಕ್ಷೆಗಳನ್ನು ಪೂರೈಸಿಕೊಡುವುದರಲ್ಲಿ ; ದಕ್ಷತರ ಅಗ್ರಗಣ್ಯಾಯ–ಅತ್ಯಂತ ದಕ್ಷನೂ ಅಗ್ರ ಗಣ್ಯನೂ, ಆದ ಸುಬ್ರಹ್ಮಣ್ಯ ಸ್ವಾಮಿಗೆ ನಮಸ್ಕರಿಸುತ್ತೇನೆ. ತಾರಕಾಸುರ, ಸಿಂಹಮುಖ, ಶೂರ, ಪದ್ಮಾಸುರ ಮೊದಲಾದವರನ್ನು, ಸಂಹರ್ತ್ರೇ–ಸಂಹರಿಸಿದವನೇ ; ತಾಪತ್ರಯಹರಣ–ತಾಪತ್ರಯ ಗಳನ್ನು ಪರಿಹರಿಸುವುದರಲ್ಲಿ ; ನಿಪುಣ–ಕುಶಲತೆಯುಳ್ಳ ; ತತ್ತ್ವೋಪದೇಶ ಕರ್ತ್ರೇ–ತತ್ತ್ವೋಪ ದೇಶವನ್ನು ಮಾಡುವವನೇ ; ವೀರನುತ ಗುರುಗುಹಾಯ–ವೀರರಿಂದ ಸ್ತುತಿಸಲ್ಪಟ್ಟ, ಗುರು ಗುಹನೇ ; ಅಜ್ಞಾನ ಧ್ವಾಂತ ಸವಿತ್ರೇ–ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿರುವವನೇ ; ವಿಜಯವಲ್ಲೀ ಭರ್ತ್ರೇ–ಶ್ರೀವಲ್ಲಿಯ ಪತಿಯೇ ; ಶಕ್ತ್ಯಾಯುಧ ಧರ್ತ್ರೇ–ಶಕ್ತಿ ಆಯುಧವನ್ನು ಹಿಡಿದವನೇ ; ಧೀರಾಯ ನತ ವಿಧಾತ್ರೇ–ಧೀರನೇ, ಬ್ರಹ್ಮನಿಂದ ನಮಸ್ಕರಿಸಲ್ಪಟ್ಟವನೇ ; ದೇವರಾಜ ಜಾಮಾತ್ರೇ–ದೇವೇಂದ್ರನಿಗೆ ಅಳಿಯನಾದವನೇ ; ಭೂರಾದಿ–ಭೂ ಭುವಃ ಸುವಃ ಮುಂತಾದ; ಭುವನ–ಬ್ರಹ್ಮಾಂಡಗಳಿಗೆ; ಭೋಕ್ತ್ರೇ–ಒಡೆಯನೇ; ಭೋಗ ಮೋಕ್ಷ ಪ್ರದಾತ್ರೇ–ಭೋಗ ಮೋಕ್ಷಗಳನ್ನು ನೀಡುವವನೇ, ಶ್ರೀ ಸುಬ್ರಹ್ಮಣ್ಯಸ್ವಾಮಿಯೇ, ನಿನಗೆ ನಮಸ್ಕಾರ.

ತಾತ್ಪರ್ಯ : ಕೋಟಿಮನ್ಮಥರಂತೆ ಸುಂದರನಾದ, ದೀನರಿಗೆ ಆಶ್ರಯನಾದ ಶ್ರೀ ಸುಬ್ರಹ್ಮಣ್ಯ ಸ್ವಾಮಿಯನ್ನು ನಮಸ್ಕರಿಸುತ್ತೇನೆ. ಸಕಲರಿಂದಲೂ ವಂದಿಸಲ್ಪಟ್ಟ ಪಾದಗಳುಳ್ಳ, ವಾಸುಕಿ ತಕ್ಷಕ ಮೊದಲಾದ ಸರ್ಪರೂಪಗಳನ್ನು ಧರಿಸಿದ, ದೇವೇಂದ್ರಾದಿಗಳಿಂದ ಪೂಜಿತನಾದ, ಭಕ್ತರ ಅಪೇಕ್ಷೆಗಳನ್ನು ಪೂರೈಸುವುದರಲ್ಲಿ ನಿಸ್ಸೀಮನಾದ, ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿರುವ, ವಲ್ಲೀದೇವಿಯ ವಲ್ಲಭನಾದ, ಶಕ್ತ್ಯಾಯುಧ ಧರಿಸಿದ, ಬ್ರಹ್ಮನಿಂದ ನಮಸ್ಕೃತನಾದ, ಮೂರು ಲೋಕಗಳಿಗೂ ಒಡೆಯನಾದ ಶ್ರೀ ಸುಬ್ರಹ್ಮಣ್ಯ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

**20.** ರಾಗ : ಕಾಂಭೋಜಿ ಆದಿತಾಳ ತ್ಯಾಗರಾಜರು

ಪಲ್ಲವಿ : ಓ ರಂಗಶಾಯಿ ಪಿಲಚಿತೇ ಓಯನುಚು ರಾರಾದಾ

ಅನುಪಲ್ಲವಿ : ಸಾರಂಗಧರುಡುಜೂಚಿ ಕೈಲಾಸಾಧಿಪುಡುಗಾಲೇದ ||

ಚರಣ : ಭೂಲೋಕ ವೈಕುಂಠಮಿದಿಯನಿ ನೀಲೋನ ನೀವೇಯುಪ್ಪೊಂಗಿ
ಶ್ರೀಲೋಲುಡೈಯುಂಡೇ ಮಾ–ಚಿಂತದೀರೇದೆನ್ನಡೋ ?
ಮೇಲೋರ್ವಲೇನಿ ಜನುಲಲೋನೇ ಮಿಗುಲನೊಗಿಲಿ ದಿವ್ಯರೂಪಮುನು ಮು–
ತ್ಯಾಲ ಸರುಲಯುರಮುನುಗಾನ ವಚ್ಚಿತಿ
ತ್ಯಾಗರಾಜ ಹೃದ್ಭೂಷಣ ||

ಅರ್ಥ : ಓ ರಂಗಶಾಯಿ–ಶ್ರೀರಂಗದಲ್ಲಿ ಮಲಗಿರುವ ರಂಗನಾಥನೇ, ಪಿಲಚಿತೇ–ಕರೆದರೆ ; ಓಯನಚು ರಾ ರಾದ–ಓ ಎಂದು ಬರಬಾರದೇ ? ಸಾರಂಗಧರುಡು–ಪರಮೇಶ್ವರನು, ಜೂಚಿ–ನಿನ್ನನ್ನು ನೋಡಿ,

ಅಂದರೆ ನಿನ್ನ ಅನುಗ್ರಹದಿಂದ, ಕೈಲಾಸಾಧಿಪುಡುಗಾಲೇದಾ-ಕೈಲಾಸಾಧಿಪತಿಯಾಗಲಿಲ್ಲವೆ ? ಭೂಲೋಕ ವೈಕುಂಠಮಿದಿಯನಿ–ಇದೇ ಭೂಲೋಕದಲ್ಲಿನ ವೈಕುಂಠ ಎಂಬುದಾಗಿ ; ನೀಲೋನ-ನಿನ್ನಲ್ಲಿ ನೀನೇ ; ಉಪ್ಪೊಂಗಿ–ಸಂತೋಷಪಟ್ಟು ; ಶ್ರೀಲೋಲುಡೈಯುಂಡೇ–ಲಕ್ಷ್ಮಿಯೊಂದಿಗೆ ಸಲ್ಲಾಪದಲ್ಲಿಯೇ ಇದ್ದುಬಿಟ್ಟರೆ ; ಮಾ ಚಿಂತ–ನಮ್ಮ ಚಿಂತೆಗಳು ; ದೀರೇದೆನ್ನಡೊ–ಪರಿಹಾರವಾಗುವುದು ಯಾವಾಗ ? ಜನುಲಲೋ–ಜನರಲ್ಲಿ ; ಮೇಲೋರ್ವಲೇನಿ–ನನಗೆ ಒಳಿತಾಗುವುದನ್ನು ಸಹಿಸದವರಿರುವಾಗ ; ನೇ–ನಾನು ; ಮಿಗುಲನೊಗಿಲಿ–ಬಹಳವಾಗಿ ನೊಂದಿದ್ದೇನೆ; ನೀ ದಿವ್ಯರೂಪಮುನು–ನಿನ್ನ ದಿವ್ಯವಾದ ರೂಪವನ್ನು ; ಮುತ್ಯಾಲಸರುಲಯುರಮುನು–ಮುತ್ತಿನ ಹಾರಗಳಿಂದಲಂಕೃತವಾದ ನಿನ್ನ ವಕ್ಷಸ್ಥಳವನ್ನು; ಗಾನ ವಚ್ಚಿತಿ-ನೋಡಲು ಬಂದೆನು; ತ್ಯಾಗರಾಜ ಹೃದ್ಭೂಷಣ–ತ್ಯಾಗರಾಜನ ಹೃದಯಕ್ಕೆ ಅಲಂಕಾರವಾಗಿರುವವನೇ.

ತಾತ್ಪರ್ಯ : ರಂಗಶಾಯಿ ! ಕರೆದರೆ ಓ ಎನ್ನಬಾರದೆ ? ನಿನ್ನನ್ನು ಪ್ರಾರ್ಥಿಸಿಯೇ ಹರನು ಕೈಲಾಸಾಧಿಪತಿಯಾದನಲ್ಲ ! ಶ್ರೀರಂಗವನ್ನೇ ನೀನು ಸಾಕ್ಷಾತ್ ವೈಕುಂಠವೆಂದು ಭಾವಿಸಿ, ಲಕ್ಷ್ಮೀದೇವಿಯೊಂದಿಗೆ ಸಂತೋಷವಾಗಿ ಇದ್ದುಬಿಟ್ಟರೆ, ನಮ್ಮ ಚಿಂತೆಗಳು ಬಗೆಹರಿಯುವುದು ಯಾವಾಗಲಯ್ಯ ? ನನಗೆ ಒಳಿತಾಗುವುದನ್ನು ಸಹಿಸದ ಜನರು ಹಲವರಿರುವಾಗ ಅವರ ನಡುವೆ ನಾನು ಬಲು ನೊಂದಿದ್ದೇನಯ್ಯ ! ಮುತ್ತು ರತ್ನದ ಸರಗಳಿಂದಲಂಕೃತವಾದ ನಿನ್ನ ದಿವ್ಯ ರೂಪವನ್ನು ನೋಡಲು ಬಂದೆನು.

**21.** ರಾಗ : ಕಾಂಭೋಜಿ ಆದಿತಾಳ ವೀಣಾ ಕುಪ್ಪಯ್ಯರ್

ಕಾಳಹಸ್ತೀಶ ಪಂಚರತ್ನ ಕೃತಿ

ಪಲ್ಲವಿ : ಕೊನಿಯಾಡಿನ ನಾಪೈ–ಕೋಪಮು ಸೇಯ ಮೇರ

ಅನುಪಲ್ಲವಿ : ನಿನ್ನು ಮಿಂಚಿನ ದೈವಮುಲೇದನಿ ನಿರಂತರಮು ನೀ ಕೀರ್ತಿನೆಂತೋ ||

ಚರಣ : ಬಾಲುಡೌ ಮಾರ್ಕಂಡೇಯುನಿ ಭಕ್ತಿಕಿ ಸಂತಸಿಲ್ಲಿ ವೇ ವೇಗಮೇ
ಕಾಲುನಿ ನೊಕಪಾದಮುನ ದುನಿಮಿ–ಕರುಣಿಂಚಿತಿವದಿಗಾಕ
ಕಾಲಕೂಟ ಬಾಧ ಸೈರಿಂಪಗ_ಕ್ರತುಭುಜುಲೆಲ್ಲಗೂಡಿ
ಚಾಲನೇತೋ ಮೊರಲಿಡಿ ವೇಡುಕೊನಗ–ಲೀಲಗಾನು ಗರಳಮುನುಮ್ರಿಂಗಿನ
ನೀಲಕಂಠ ! ಶ್ರೀ ಕಾಳಹಸ್ತೀಶ! ನಿಖಿಲಲೋಕ ಬುಧಜನ ಪಾಲನ ಗೋ
ಪಾಲದಾಸ ದುರಿತವನ ಕುಠಾರ ! ಪರಾತ್ಪರ ದಯಾಕರಯನಿ ನಿನು ||

ಅರ್ಥ : ಕೊನಿಯಾಡಿನ–ಸ್ತುತಿಸುತ್ತಿರುವ ; ನಾಪೈ–ನನ್ನಮೇಲೆ ; ನೀ ಕೋಪಮುಸೇಯ ಮೇರ–ನೀನು ಕೋಪಮಾಡಿಕೊಳ್ಳುವುದು ತರವೆ ? ; ನಿನ್ನು ಮಿಂಚಿನ–ನಿನ್ನನ್ನು ಮೀರಿಸಿದ ; ದೈವಮುಲೇದನಿ–ದೈವವು ಇಲ್ಲವೆಂದು ; ನಿರಂತರಮು–ಸದಾ ; ನೀ ಕೀರ್ತಿನಿ–ನಿನ್ನ ಕೀರ್ತಿಯನ್ನೇ ; ಎಂತೋ–ಬಹಳವಾಗಿ ಸ್ತುತಿಸುತ್ತಿರುವ, ನನ್ನ ಮೇಲೆ ಕೋಪಿಸಿಕೊಳ್ಳಬಹುದೆ ; ಬಾಲುಡೌ ಮಾರ್ಕಂಡೇಯುನಿ–ಬಾಲಕನಾದ ಮಾರ್ಕಂಡೇಯನ; ಭಕ್ತಿಕಿ–ಭಕ್ತಿಗೆ; ಸಂತಸಿಲ್ಲಿ–ಸಂತೋಷಪಟ್ಟು ; ವೇಗಮೇ–ಬಹು ಶೀಘ್ರವಾಗಿ ; ಕಾಲುನಿ–ಕಾಲನನ್ನು, ಯಮುನನ್ನು ; ಒಕಪಾದಮುನ–ಒಂದು ಕಾಲಿನಿಂದ ; ದುನಿಮಿ–ತುಳಿದು ; ಕರುಣಿಂಚಿತಿವಿ–ಕರುಣಿಸಿದೆ ; ಅದಿಗಾಕ–ಅಲ್ಲದೆ ; ಕಾಲಕೂಟ ಬಾಧ–ಕಾಲಕೂಟ ವಿಷದ ಬಾಧೆಯನ್ನು ; ಸೈರಿಂಪಗ–ಸಹಿಸ

ಲಾರದೆ ; ಕ್ರತುಭುಜುಲೆಲ್ಲಗೂಡಿ–ದೇವತೆಗಳೆಲ್ಲರೂ ಸೇರಿ ; ಚಾಲನೇತೋ–ಬಹಳವಾಗಿ ನಿನ್ನಲ್ಲಿ ; ಮೊರಲಿಡಿ–ಮೊರೆಯಿಡಲು ; ವೇಡುಕೊನಗ–ಬೇಡಿಕೊಳ್ಳಲು ; ಲೀಲಗಾನು–ಅನಾಯಾಸವಾಗಿ ; ಗರಳಮುನು–ವಿಷವನ್ನು ; ಮ್ರಿಂಗಿನ–ಕುಡಿದ ; ನೀಲಕಂಠ, ಶ್ರೀಕಾಳ ಹಸ್ತೀಶ ; ನಿಖಿಲಲೋಕ ಬುಧಜನ ಪಾಲನ–ಸಕಲ ಲೋಕಗಳ ಸಜ್ಜನರನ್ನು ಪಾಲಿಸುವವನೆ ; ಗೋಪಾಲದಾಸ–ಗೋಪಾಲದಾಸನ ; ದುರಿತವನ–ಪಾಪಗಳೆಂಬ ಅರಣ್ಯಕ್ಕೆ ; ಕುಠಾರ–ಕೊಡಲಿಯಂತಿರುವವನೆ ; ಪರಾತ್ಪರ, ದಯಾಕರ ; ಅನಿ–ಎಂದು ; ನಿನು–ನಿನ್ನನ್ನು, ಸ್ತುತಿಸುತ್ತಿರುವ ನನ್ನ ಮೇಲೆ ಕುಪಿತನಾಗಬಹುದೆ ?

ತಾತ್ಪರ್ಯ : ಸ್ತುತಿಸುತ್ತಿರುವ ನನ್ನಮೇಲೆ ನೀನು ಕೋಪಿಸಿಕೊಳ್ಳುವುದು ತರವೆ ? ನಿನ್ನನ್ನು ಮೀರಿಸುವ ದೈವವಿಲ್ಲವೆಂದು ನಿನ್ನ ಕೀರ್ತಿಯನ್ನೇ ನಾನು ಹಾಡುತ್ತಿದ್ದೇನೆ. ಬಾಲಕ ಮಾರ್ಕಂಡೇಯನ ಭಕ್ತಿಗೆ ಮೆಚ್ಚಿ ಯಮನನ್ನು ಒಂದೇ ಕಾಲಿನಿಂದ ಅದುಮಿಟ್ಟೆ ನೀನು. ಕಾಲಕೂಟ ವಿಷದ ಬಾಧೆ ಸಹಿಸಲಾರದೆ ದೇವತೆಗಳೆಲ್ಲ ಒಂದಾಗಿ ಮೊರೆಯಿಡಲು ಅನಾಯಾಸವಾಗಿ ವಿಷವನ್ನು ನುಂಗಿದೆ. ನೀಲಕಂಠ, ಕಾಳಹಸ್ತೀಶ, ಸಕಲ ಲೋಕಗಳನ್ನು ಕಾಪಾಡುವವನೆ, ಗೋಪಾಲದಾಸನ ಪಾಪಗಳೆಂಬ ಅರಣ್ಯಕ್ಕೆ ಕೊಡಲಿಯಾಗಿರುವವನೆ, ನೀನೇ ಪರಾತ್ಪರ, ದಯಾಕರ ಎಂದು ಸ್ತುತಿಸುತ್ತಿರುವ ನನ್ನ ಮೇಲೆ ಕುಪಿತನಾಗಬಹುದೆ ?

**22.** ರಾಗ : ಕಾನಡ. ರೂಪಕತಾಳ.

ತ್ಯಾಗರಾಜರು

ಪಲ್ಲವಿ : ಶ್ರೀ ನಾರದ ನಾದ ಸರಸೀರುಹ ಭೃಂಗ ಶುಭಾಂಗ

ಅನುಪಲ್ಲವಿ : ದೀನಮಾನ ರಕ್ಷಕ ಜಗದೀಶ ಭೇಶ ಸಂಕಾಶ ||

ಚರಣ : ವೇದ ಜನಿತ ವರ ವೀಣಾವಾದನ ತತ್ವಜ್ಞ |
ಖೇದಕರ ತ್ರಿತಾಪ ರಹಿತ ಖೇಚರ ವಿನುತ
ಯಾದವಕುಲಜಾಪ್ತ ಸದಾ ಮೋದಹೃದಯ ಮುನಿವರ್ಯ
ಶ್ರೀದ ತ್ಯಾಗರಾಜವಿನುತ ಶ್ರೀಕರ ಮಾಂ ಪಾಲಯ ||

ಅರ್ಥ : ಶ್ರೀ ನಾರದ ನಾದ ಸರಸೀರುಹ ಭೃಂಗ–ನಾರದನ ಗಾನವೆಂಬ ತಾವರೆಯಲ್ಲಿ ದುಂಬಿಯಂತೆ ಆಸಕ್ತನಾದವನೇ ; ಶುಭಾಂಗ–ಮಂಗಳಕರವಾದ ದೇಹವುಳ್ಳವನೇ ; ದೀನ ಮಾನರಕ್ಷಕ–ದೀನರಾದವರ ಗೌರವವನ್ನು ಕಾಪಾಡುವವನೇ ; ಜಗದೀಶ ; ಭೇಶ ಸಂಕಾಶ–ಚಂದ್ರನಿಗೆ ಸಮಾನವಾದ ಕಾಂತಿಯುಳ್ಳವನೆ ; ವೇದ ಜನಿತ–ವೇದಗಳಲ್ಲಿ ಹುಟ್ಟಿದ ; ವರ ವೀಣಾವಾದನ–ಶ್ರೇಷ್ಠವಾದ ವೀಣೆಯನ್ನು ನುಡಿಸುವುದರಲ್ಲಿ ; ತತ್ವಜ್ಞ–ಪರಿಣತನಾದವನೆ ; ಖೇದಕರ–ದುಃಖವುಂಟುಮಾಡುವ ; ತ್ರಿತಾಪರಹಿತ–ತಾಪತ್ರಯಗಳಿಲ್ಲದವನೆ ; ಖೇಚರ ವಿನುತ–ದೇವತೆಗಳಿಂದ ಸ್ತುತನಾದವನೆ; ಯಾದವಕುಲಜಾಪ್ತ–ಯಾದವಕುಲದ ಕೃಷ್ಣನ ಮಿತ್ರನೇ ; ಸದಾ ಮೋದಹೃದಯ–ಯಾವಾಗಲೂ ಸಂತೋಷವಾಗಿರುವವನೆ ; ಮುನಿವರ್ಯ–ಮುನಿಗಳಲ್ಲಿ ಶ್ರೇಷ್ಠನೆ ; ಶ್ರೀದ–ಸಂಪತ್ತನ್ನು ಕೊಡುವವನೇ ; ಶ್ರೀಕರ– ಶುಭಕರನೇ ; ಮಾಂ ಪಾಲಯ–ನನ್ನನ್ನು ಕಾಪಾಡು.

ತಾತ್ಪರ್ಯ : ನಾರದರ ಗಾನವೆಂಬ ತಾವರೆಗೆ ದುಂಬಿಯಂತೆ ಆಕರ್ಷಿತನಾದ ಸ್ವಾಮಿಯೆ, ದೀನರಕ್ಷಕ, ಜಗದೀಶ್ವರ, ವೀಣಾವಾದನ ಪ್ರವೀಣನೆ, ಸಂಪತ್ತುಗಳನ್ನು ಕರುಣಿಸುವವನೇ ನನ್ನನ್ನು ಕಾಪಾಡು.

23. ರಾಗ : ಕಾನಡ ಆದಿತಾಳ ತ್ಯಾಗರಾಜರು

ಪಲ್ಲವಿ : ಸುಖಿಯೆವರೋ ರಾಮನಾಮ ಸುಖಿಯೆವರೋ

ಅನುಪಲ್ಲವಿ : ಸುಖಿಯೆವರೋ ಸುಮುಖಿಯೆವರೋ ಅಖಿಲಸಾರಮಗು ತಾರಕ ನಾಮ ||

ಚರಣ : ಸತ್ಯಮುದಪ್ಪಕ ಸಕಲಲೋಕುಲಕು ಭೃತ್ಯುಡೈ ದೈವಭೇದಮುಲೇಕ |
ನಿತ್ಯಮೈನ ಸುಸ್ವರಗಾನಮುತೋ ನಿರಂತರಮು ತ್ಯಾಗರಾಜನುತ ||

ಅರ್ಥ : ಸುಖಿಯೆವರೋ-ಸುಖಿ ಯಾರು ? ; ಅಖಿಲಸಾರಮಗು-ಸರ್ವಸಾರಭೂತವಾದ ; ತಾರಕ-ಜನರ ಬಂಧನಗಳನ್ನು ಪರಿಹರಿಸುವ ; ನಾಮ ರಾಮನಾಮ-ನಾಮವುಳ್ಳ ರಾಮನಾಮವನ್ನು ಸವಿಯುವ ಸುಖಿ ಯಾರು ? ಸತ್ಯಮುದಪ್ಪಕ-ಸತ್ಯವನ್ನು ತ್ಯಜಿಸದೆ ; ಸಕಲ ಲೋಕುಲಕು ಭೃತ್ಯುಡೈ-ಸಕಲ ಜೀವಿಗಳಿಗೂ ಭೃತ್ಯನಂತೆ ಸೇವೆ ಮಾಡುತ್ತಾ ; ದೈವ ಭೇದಮುಲೇಕ-ದೇವರಲ್ಲಿ ಭೇದವೆಣಿಸದೆ ; ನಿತ್ಯಮೈನ-ಸದಾ ; ಸುಸ್ವರಗಾನಮುತೋ–ಮಧುರವಾದ ಸ್ವರದಿಂದ ಕೂಡಿದ ಗಾನದಿಂದ ; ನಿರಂತರಮು-ಸದಾ ; ತ್ಯಾಗರಾಜನುತ-ತ್ಯಾಗರಾಜನಿಂದ ಸ್ತುತಿಸಲ್ಪಟ್ಟ ರಾಮಚಂದ್ರ, ನಿನ್ನ ನಾಮವನ್ನು ಸವಿದ ಸುಖಿ ಯಾರಯ್ಯ ?

ತಾತ್ಪರ್ಯ : ಸಕಲಬಂಧನಗಳನ್ನೂ ಪರಿಹರಿಸುವ ರಾಮನಾಮವನ್ನು ಸವಿಯುವ ಸುಖಿ ಯಾರು ? ಸತ್ಯವನ್ನು ತಪ್ಪದೆ, ಸಕಲಜೀವಿಗಳಿಗೂ ಭೃತ್ಯನಂತೆ ಸೇವೆ ಸಲ್ಲಿಸುತ್ತಾ, ದೇವರಲ್ಲಿ ತಾರತಮ್ಯವೆಣಿಸದೆ, ಮಧುರವಾದ ಗಾನದಿಂದ, ಎಲೈ ರಾಮಚಂದ್ರನೆ, ಸದಾ ನಿನ್ನನ್ನು ಸ್ತುತಿಸುವ ಸುಖಿ ಯಾರಿದ್ದಾರಯ್ಯ ?

24. ರಾಗ : ಕಾನಡ ಆದಿತಾಳ ಕರೂರು ದಕ್ಷಿಣಮೂರ್ತಿ

ಪಲ್ಲವಿ : ಕಮಲಾಂಬ ನಾ ಚಿಂತದೀರ್ಚವಮ್ಮ
ಕಾಮಕೋಟಿ ಪೀಠಾಧಿವಾಸಿನಿ ||

ಅನುಪಲ್ಲವಿ : ಏಮಿ ನೇರಮುಮ್ಮ ನನ್ನು ಬ್ರೋಚುಟಕು
ಈಶ್ವರಿ ಜಗದೀಶ್ವರಿ ಶಂಕರಿ

ಚರಣ : ನೀರಜಾಕ್ಷಿ ನೀ ನಾಮರೂಪಮುಲು
ನಿರತಮುಗಾ ನಮ್ಮಿಯುಂಡಗ
ವರ ಗರ್ಭಪುರೀಶ ರಾಣಿ ತಲ್ಲಿ
ವರದಾಯಕಿ ಸೌಂದರ್ಯ ನಾಯಕಿ ||

ಅರ್ಥ : ಕಮಲಾಂಬ–ಕಮಲಾಂಬಿಕೆ ; ನಾ ಚಿಂತ–ನನ್ನ ಚಿಂತೆಯನ್ನು ; ದೀರ್ಚವಮ್ಮ–ಪರಿಹರಿಸಮ್ಮ ; ಕಾಮಕೋಟಿ ಪೀಠಾಧಿವಾಸಿನಿಯೆ, ನನ್ನು ಬ್ರೋಚುಟಕು–ನನ್ನನ್ನು ಕಾಪಾಡಲು ; ಏಮಿ ನೇರಮುಮ್ಮ–ಏಕೆ ತಡ ಮಾಡುತ್ತಿದ್ದೀಯೆ ತಾಯಿ ; ಈಶ್ವರಿ, ಜಗದೀಶ್ವರಿ, ಶಂಕರಿ, ನೀರಜಾಕ್ಷಿ–ತಾವರೆಯಂತೆ ಕಣ್ಣುಳ್ಳವಳೆ ; ನೀ ನಾಮರೂಪಮುಲು–ನಿನ್ನ ನಾಮರೂಪಗಳನ್ನೇ ; ನಿರತಮುಗಾ–ಯಾವಾಗಲೂ ; ನಮ್ಮಿಯುಂಡಗ–ನಂಬಿದ್ದೇನೆ ; ವರ–ಶ್ರೇಷ್ಠನಾದ ; ಗರ್ಭಪುರೀಶ ರಾಣಿ, ತಲ್ಲಿ–ತಾಯಿ ; ವರದಾಯಕಿ–ವರಗಳನ್ನು ಕೊಡುವವಳೆ ; ಸೌಂದರ್ಯ

ನಾಯಕಿಯೆ ನನ್ನನ್ನು ಕಾಪಾಡು.

ತಾತ್ಪರ್ಯ : ಕಮಲಾಂಬಿಕೆ, ನನ್ನ ಚಿಂತೆಗಳನ್ನು ಪರಿಹರಿಸು, ಕಾಮಕೋಟಿಪೀಠವಾಸಿನಿಯೆ, ಏಕೆ ತಡ ಮಾಡುತ್ತಿರುವೆ ? ಈಶ್ವರಿ, ಶಂಕರಿ, ನೀರಜಾಕ್ಷಿ, ನಿನ್ನ ನಾಮರೂಪಗಳನ್ನೇ ನಾನು ನಿರತ ವಾಗಿ ನಂಬಿದ್ದೇನೆ.

25. ರಾಗ : ಕೀರವಾಣಿ ಆದಿತಾಳ ರಾಮ್‌ನಾಡ್ ಶ್ರೀನಿವಾಸಯ್ಯಂಗಾರ್

ಪಲ್ಲವಿ : ನಿಜಮುಗ ರಾಮ ನೀಪಾದಮುಲ
ನಿತ್ಯಮು ನಮ್ಮಿನ ನನ್ನು ಬ್ರೋವುಮು ||

ಅನುಪಲ್ಲವಿ : ಅಜರುದ್ರನುತ ಆನಂದಕರ ಆದ್ಯಂತರಹಿತ ಅಭಯಕರ ||

ಚರಣ : ಅಸುರೇಶುನಿಕರಿಷ್ಟಮುಜೇಸಿ ಅಮರಾದುಲನು ಆದರಿಂಚಲೇದಾ
ವಸುಧಲೋ ನೀದು ವರಭಕ್ತುಲನು ವರಮಿಚ್ಚು ಶ್ರೀನಿವಾಸ ನಾತೋ ವಾದಾ ||

ಅರ್ಥ : ರಾಮಚಂದ್ರನೇ, ನಿಜಮುಗ-ನಿಜವಾಗಿ ; ನೀಪಾದಮುಲ-ನಿನ್ನ ಪಾದಗಳನ್ನೇ ; ನಿತ್ಯಮು-ಸದಾ ; ನಮ್ಮಿನ-ನಂಬಿದಂತಹ ; ನನ್ನು-ನನ್ನನ್ನು ; ಬ್ರೋವುಮು-ಕಾಪಾಡು ; ಅಜರುದ್ರ ನುತ-ಬ್ರಹ್ಮ ಈಶ್ವರರಿಂದ ಸ್ತುತಿಸಲ್ಪಟ್ಟವನೆ ; ಆನಂದಕರ-ಸಂತೋಷವುಂಟುಮಾಡುವವನೆ ; ಆದ್ಯಂತರಹಿತ-ಆದಿಯಾಗಲಿ ಅಂತ್ಯವಾಗಲಿ ಇಲ್ಲದವನೆ ; ಅಭಯಕರ-ಭಯವನ್ನು ಹೋಗ ಲಾಡಿಸುವವನೆ ; ಅಸುರೇಶುನಿಕಿ-ರಾವಣನಿಗೆ ; ಅರಿಷ್ಟಮುಜೇಸಿ-ವಿನಾಶವನ್ನುಂಟುಮಾಡಿ, ಅವನನ್ನು ಕೊಂದು ; ಅಮರಾದುಲನು-ದೇವತೆಗಳನ್ನು ; ಆದರಿಂಚಲೇದಾ-ಆದರಿಸಲಿ ಲ್ಲವೆ ? ; ವಸುಧಲೋ–ಈ ಭೂಮಿಯಲ್ಲಿ; ನೀದು ವರಭಕ್ತಲನು–ನಿನ್ನ ಶ್ರೇಷ್ಠರಾದ ಭಕ್ತರಿಗೆ; ವರಮಿಚ್ಚು-ವರವೀಯುವ ; ಶ್ರೀನಿವಾಸನೆ, ನಾ ತೋ ವಾದ–ನನ್ನ ಮೇಲೇಕೆ ಹಟ ?

ತಾತ್ಪರ್ಯ : ರಾಮಚಂದ್ರ, ನಿಜವಾಗಿಯೂ ನಿನ್ನ ಪಾದಗಳನ್ನೇ ಸದಾ ನಂಬಿಕೊಂಡಿರುವ ನನ್ನನ್ನು ಕಾಪಾಡು. ಬ್ರಹ್ಮರುದ್ರ ಮುಂತಾದವರಿಗೆ ಸಂತೋಷವನ್ನುಂಟುಮಾಡುವ, ಆದ್ಯಂತ ರಹಿತನೂ ಅಭಯಕರನೂ ಆದವನು ನೀನು. ರಾವಣನನ್ನು ಸಂಹರಿಸಿ ದೇವತೆಗಳನ್ನು ಆದರಿಸ ಲಿಲ್ಲವೆ ? ನನ್ನ ಮೇಲೇಕೆ ಅಸಮಾಧಾನ ?

26. ರಾಗ : ಕೀರವಾಣಿ ಆದಿತಾಳ ವೀಣಾ ಕುಪ್ಪಯ್ಯರ್

ಪಲ್ಲವಿ : ಏಲರಾ ನಾತೋ ಚಲನು ಕೃಷ್ಣಾ

ಅನುಪಲ್ಲವಿ : ಏಲರಾ ಈ ಬಾಧ ತಾಳ ಜಾಲರಾ ದಯಜೂಡ ನೀ ||

ಚರಣ : ಶ್ರೀ ರಮಾಲೋಲ ನನ್ನು ಬ್ರೋವ ಭಾರಮಾ ನಿನ್ನು ನಮ್ಮಿನ ನಾಪೈ
ನೇರಮಾ ನನ್ನೇಚೇದಿಯಪದೂರುಮಾ ನೀಕು ಗಭೀರಮಾ ||
ಶ್ರೀಶ ಮಾಯಿಂಟನುಂಡ ಪ್ರಯಾಸಮಾ ನನು ಪಾಲಿಂಚಿತೇ
ದೋಸಮಾ ಪಲುಮಾರು ವೇಡಗ ರೋ ಸಮಾ ನೀಕಾಯಾಸಮಾ ||
ದೇವರಾ ಗೋಪಾಲದಾಸುನಿ ಕಾವರ ಚಲ್ಲಗನುಮುಮ್ಮು
ಬ್ರೋವರಾ ನೀ ಪ್ರಾಪುಕೋರಿತಿ ಮಾನರಾ ಮಾಕೇಮಿ ದೋವರಾ ||

ಅರ್ಥ : ಕೃಷ್ಣ, ನಾತೋ–ನನ್ನ ಮೇಲೆ ; ಚಲಮು ಏಲರಾ–ಹಟ ಏಕಯ್ಯ ; ಈ ಬಾಧ–ಈ ಬಾಧೆಯನ್ನು ; ತಾಳ ಜಾಲರಾ–ತಡೆಯಲಾರೆನಯ್ಯ : ನೀ ದಯಜೂಡ–ನೀನು ದಯತೋರಿಸದಿರುವುದು ; ಏಲರಾ–ಏಕಯ್ಯ ? ; ಶ್ರೀ ರಮಾಲೋಲ– ಲಕ್ಷ್ಮೀ ವಲ್ಲಭನೆ ; ನನ್ನು ಬ್ರೋವ–ನನ್ನನ್ನು ಕಾಪಾಡುವುದು ; ಭಾರಮಾ–ನಿನಗೆ ಹೊರೆಯೆ ; ನಿನ್ನು ನಮ್ಮಿನ ನಾಪೈ–ನಿನ್ನನ್ನು ನಂಬಿದ ನನ್ನ ಮೇಲೆ ; ನೇರಮಾ–ಏಕೆ ತಾಮಸ?; ನನ್ನು ಏಚೇದಿ–ನನ್ನನ್ನು ಉದ್ಧರಿಸುವುದು ; ಅಪದೂರುಮಾ–ಬಹಳ ಕಷ್ಟದ ಕೆಲಸವೆ ; ನೀಕು ಗಭೀರಮಾ–ನಿನಗೇನು ಅದು ಬಹಳ ದೊಡ್ಡ ವಿಷಯವೆ ?; ಶ್ರೀಶ–ಲಕ್ಷ್ಮೀ ರಮಣನೆ; ಮಾಯಿಂಟನುಂಡ ಪ್ರಯಾಸಮಾ–ನನ್ನ ಮನೆಯಲ್ಲಿರುವುದು ನಿನಗೆ ಪ್ರಯಾಸವೆ ? ; ನನು ಪಾಲಿಂಚಿತೇ–ನನ್ನನ್ನು ಕಾಪಾಡಿದರೆ; ದೋಸಮಾ–ಅದು ದೋಷವಾಗುತ್ತದೆಯೆ ? ; ಪಲುಮಾರು–ಅನೇಕ ಸಾರಿ ; ವೇಡಗ–ಬೇಡಿಕೊಳ್ಳುತ್ತಿದ್ದರೂ ; ರೋಸಮಾ–ನಿನಗೇಕೆ ಅಸಮಾಧಾನ ? ; ನೀಕು ಆಯಾಸಮಾ–ಅಥವಾ ನಿನಗೆ ಬಳಲಿಕೆಯಾಗಿದೆಯೊ ? ; ದೇವರಾ–ದೇವರೇ, ಗೋಪಾಲದಾಸುನಿ– ಗೋಪಾಲದಾಸನನ್ನು ; ಕಾವರಾ–ಕಾಪಾಡು ; ಚಲ್ಲಗನುಮಮ್ಮು–ಅವನಿಗೆ ನೆಮ್ಮದಿಯಾಗುವಂತೆ ಸಲಹು; ಬ್ರೋವರಾ–ಕಾಪಾಡಯ್ಯ ; ನೀ ಪ್ರಾಪುಕೋರಿತಿ– ನಿನ್ನನ್ನು ಮರೆಹೊಕ್ಕಿದ್ದೇನೆ ; ಮಾವರಾ–ಲಕ್ಷ್ಮೀ ರಮಣ, ಮಾಕೇಮಿ ದೇವರಾ–ನಮಗಿನ್ನೇನು ದಾರಿ ?

ತಾತ್ಪರ್ಯ : ಕೃಷ್ಣ, ಏಕಯ್ಯ ನನ್ನ ಮೇಲೆ ಹಟ ? ಈ ಬಾಧೆಯನ್ನು ನಾನು ತಾಳಲಾರೆನಯ್ಯ. ಏಕೆ ದಯೆ ತೋರಿಸಲೊಲ್ಲೆ ? ನನ್ನನ್ನು ಆದರಿಸುವುದು ನಿನಗೆ ಹೊರೆಯೆ ? ಕಷ್ಟವೆ ? ನನ್ನನ್ನು ಕಾಪಾಡಿದರೆ ಅದು ನಿನಗೆ ದೋಷವೇನಾಗುವುದಿಲ್ಲವಲ್ಲ ! ನಿನ್ನನ್ನೇ ನಂಬಿದ್ದೇನೆ, ಕಾಪಾಡು ಎಂದು ಅನೇಕ ಸಾರಿ ಬೇಡಿಕೊಂಡರೂ ನೀನೇಕೆ ದೋಷ ತೋರಿಸುತ್ತಿರುವೆ ? ಈ ಗೋಪಾಲದಾಸನನ್ನು ಕಾಪಾಡು. ನಿನ್ನನ್ನೇ ಮರೆಹೊಕ್ಕಿದ್ದೇನೆ, ನನಗೆ ಬೇರೆ ದಾರಿಯಿಲ್ಲ.

**27.** ರಾಗ : ಕೀರವಾಣಿ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಭಾವಯೇ ಸಾರಸನಾಭಂ ಭಾಸುರಮೂರ್ತಿಂ ||

ಅನುಪಲ್ಲವಿ : ಭೂಮಿ ರಮಾಕರಯುಗ ಸೇವ್ಯಮಾನ ಪಾದ ಸರೋಜಂ ||

ಚರಣ : ದುರಿತ ಸಮೂಹ ವಿರಾಮಂ ನಿಜತನುರುಚಿ ನಿಂದಿತಕಾಮಂ
ಪರಿಪೂರಿತ ನತಜನಕಾಮಂ ಭೃಗುನಾರದ ಹೃದಯಾಭಿರಾಮಂ
ಸುರುಚಿರ ಶೋಭಲಲಾಮಂ ಖಲಸಾಹಸಿಕ ಸಮುದಯ ಭೀಮಂ ಹತ
ನಿರುಪಮ ಖಲತರ ಚಾಮಂ ಸುವದನ ರುಚಿನಿಂದಿತ ಶಾರದಸೋಮಂ ||

ಸರಸಘನೋಪಮನೀಲಂ–ಧೃತ ಮನೋಹರಚೇಲಂ ಶಿಶುಹಿಮ
ಕರನುದಹರಪಾಲಂ ಮಹಿಮಾಧವನುಮಲ ಸುಶೀಲಂ
ಚಾರುಕರಂ ಜಿತ ಶೈಲಂ ಖಲಧನುಸುತ ಸಮುದಯ ಕಾಲಂ
ಭತವಿರಚಿತ ತ್ರಿಭುವನ ಹೇಲಂ ಮುನಿನಿಕರ ಹೃದಯ ಸರೋಜನುರಾಲಂ ||

ಭೂರಿಕೃಪಾರಸವಾಸಂ ಫಣಿ ಪರಿವೃಢತಲ್ಪನಿವಾಸಂ
ನವನೀರದ ಮೇಚಕಕೇಶಂ ನಿಜಪದಯುಗ ನತಗತರೋಷಂ
ಸುರಭೀತಿಹರ ಮೃದುಹಾಸಂ ಚಾರು ತಿಲ ಸುಮಸದೃಶ ಸುನಾಸಂ
ದಿವ್ಯ ಮಧುವನ ವಿರಚಿತರಾಸಂ ವಲರಿಪು ಮಕುಟಲಸಿತ ಪಾದಸುದೇಶಂ ||

ಅರ್ಥ : ಭೂಮಿ ರಮಾ ಕರಯುಗ-ಭೂದೇವಿ ಲಕ್ಷ್ಮೀದೇವಿಯರ ಕೈಗಳಿಂದ ; ಸೇವ್ಯಮಾನ-ಸೇವಿಸಲ್ಪಡುವ ; ಪಾದ ಸರೋಜಂ-ಪಾದಕಮಲಗಳುಳ್ಳ ; ಭಾಸುರಮೂರ್ತಿಂ-ಪ್ರಕಾಶಮಾನನಾದ ; ಸಾರಸನಾಭಂ-ಪದ್ಮನಾಭನನ್ನು ; ಭಾವಯೇ-ಧ್ಯಾನಿಸುತ್ತೇನೆ ; ದುರಿತ ಸಮೂಹ ವಿರಾಮಂ-ಪಾಪಗಳ ರಾಶಿಯನ್ನು ತಡೆಯುವವನೂ ; ನಿಜತನುರುಚಿ-ತನ್ನ ದೇಹದ ಕಾಂತಿಯಿಂದ ; ನಿಂದಿತ ಕಾಮಂ-ಮನ್ಮಥನನ್ನು ಮೀರಿಸಿದವನೂ ; ನತಜನ-ಭಕ್ತರ ; ಕಾಮಂ-ಆಸೆಗಳನ್ನು ; ಪರಿಪೂರಿತ-ಪೂರೈಸಿದವನೂ ; ಭೃಗು ನಾರದರ, ಹೃದಯಾಭಿರಾಮಂ-ಹೃದಯಕ್ಕೆ ಪ್ರಿಯನಾದವನೂ ; ಸುರುಚಿರ ಶೋಭಲಲಾಮಂ-ಮನೋಹರವಾದ ಕಾಂತಿಯಿಂದ ಶೋಭಿಸುವವನೂ ; ಸಾಹಸಿಕ ಬಲ ಸಮುದಯ ಭೀಮಂ-ಸಾಹಸಿಗಳಾದ ದುಷ್ಟ ರಾಕ್ಷಸರಿಗೆ ಭಯಂಕರನೂ ; ಹತನಿರುಪಮ ಬಲತರ ಚಾಮಂ-ಅತ್ಯಂತ ದುಷ್ಟನಾಗಿದ್ದ ಚಾಮನನ್ನು ಕೊಂದವನೂ ; ಸುವದನರುಚಿ-ಮುಖದ ಕಾಂತಿಯಿಂದ ; ನಿಂದಿತ ಶಾರದ ಸೋಮಂ-ಶರತ್ಕಾಲದ ಚಂದ್ರನನ್ನು ಮೀರಿಸಿದವನೂ ಆದ, ಸಾರಸನಾಭನನ್ನು ಧ್ಯಾನಿಸುತ್ತೇನೆ ; ಸರಸ ಘನೋಪಮ ನೀಲಂ-ನೀರು ತುಂಬಿದ ಮೋಘದಂತೆ ನೀಲವರ್ಣನೂ ; ಧೃತ ಮನೋಹರ ಚೇಲಂ-ಮನೋಹರವಾದ ವಸ್ತ್ರಗಳನ್ನು ಧರಿಸಿರುವವನೂ ; ಶಿಶು ಹಿಮಕರ ಮದಹರ ಪಾಲಂ-ಬಾಲಚಂದ್ರನ ಮದವನ್ನು ಕೆಡಿಸಿ ಅವನನ್ನು ಪಾಲಿಸಿದವನು ; ಮಹಿಮಾಧಮಂ-ಮಹಾಮಹಿಮನೂ ; ಅಮಲ ಸುಶೀಲಂ-ಪರಿಶುದ್ಧವಾದ ಚಾರಿತ್ರ್ಯವುಳ್ಳವನು ; ಜಿತ ಶೈಲಂ ಚಾರುಕರಂ-ಪರ್ವತವನ್ನು ಎತ್ತಿದ ಮನೋಹರವಾದ ಕೈಯವನೂ [ಗೋವರ್ಧನಗಿರಿ ಪ್ರಸಂಗ ?] ; ಬಲ ಧನುಸುತ ಸಮುದಯ ಕಾಲಂ-ಧನುಸುತನೇ ಮೊದಲಾದ ರಾಕ್ಷಸರ ಸಮುದಾಯಕ್ಕೆ ಯಮನಂತಿರುವವನೂ ; ಭತತ್ರಿಭುವನ ವಿರಚಿತ ಹೇಲಂ-ಲೀಲಾಜಾಲವಾಗಿ ಕ್ರೀಡೆಗೆಂಬತೆ ತ್ರಿಭುವನಗಳನ್ನೂ ಸೃಷ್ಟಿಸಿದವನೂ ; ಮುನಿನಿಕರ-ಮುನಿಸಮೂಹದ ; ಹೃದಯ ಸರೋಜ-ಹೃದಯ ಕಮಲಗಳಲ್ಲಿ ; ಮರಾಲಂ-ಸಂಚರಿಸುವ ಹಂಸನೂ ಆದ ಸಾರಸನಾಭನನ್ನು ಧ್ಯಾನಿಸುತ್ತೇನೆ ; ಭೂರಿಕೃಪಾರಸವಾಸಂ-ಅಪಾರವಾದ ಕರುಣೆಗೆ ನೆಲೆಯಾದವನೂ ; ಫಣಿ ಪರಿವೃಡತಲ್ಪ ನಿವಾಸಂ-ಹಾವಿನ ಹಾಸಿಗೆಯಲ್ಲಿ ಮಲಗಿದವನೂ ! ನವ ನೀರದ ಮೋಚಕ ಕೇಶಂ-ಮೋಘದಂತೆ ನೀಲವರ್ಣದ ಕೂದಲುಳ್ಳವನು ; ನಿರಪದಯುಗ ನತ ಗತ ರೋಷಂ-ಪಾದಗಳಲ್ಲಿ ಶರಣಾದವರ ಬಗೆಗೆ ಕೋಪವನ್ನು ಕಳೆದುಕೊಂಡವನು ; ಸುರಭೀತಿ ಹರ ಮೃದುಹಾಸಂ-ದೇವತೆಗಳ ಭೀತಿಯನ್ನು ಹೋಗಲಾಡಿಸುವಂತಹ ಮಂದಹಾಸವುಳ್ಳವನೂ ; ಚಾರುತಿಲಸುಮ ಸದೃಶ ಸುವಾಸಂ-ಮನೋಹರವಾದ ವೆಟ್ಟು ಹೂವಿಗೆ ಸಮಾನವಾದ ಒಳ್ಳೆಯ ಮುಗೂ ಉಳ್ಳವನೂ ; ದಿವ್ಯಮಧುವನ ವಿರಚಿತ ರಾಸು-ದಿವ್ಯವಾದ ಮಧುವನದಲ್ಲಿ ರಾಸಕ್ರೀಡೆಯಾಡುವವನೂ ; ವಲರಿಪು-ವಲದಕ್ಕಸನಶತ್ರುವೂ ; ಲಸಿತ-ಪ್ರಕಾಶಮಾನವಾದ ; ಪಾದಸುದೇಶಂ-ಪಾದಗಳುಳ್ಳವನೂ ಆದ ಸಾರಸನಾಭನನ್ನು ಧ್ಯಾನಿಸುತ್ತೇನೆ.

ತಾತ್ಪರ್ಯ : ಶ್ರೀದೇವಿ ಭೂದೇವಿಯರಿಂದ ಸೇವಿತನಾದ ಪದ್ಮನಾಭನನ್ನು ಧ್ಯಾನಿಸುತ್ತೇನೆ. ಪಾಪಗಳ ರಾಶಿಯನ್ನು ತಡೆಯುವವನೂ, ಮನ್ಮಥನನ್ನು ಮೀರಿಸಿದ ದೇಹಕಾಂತಿಯುಳ್ಳವನೂ, ಭೃಗು ನಾರದ ಮುಂತಾದವರ ಹೃದಯಕ್ಕೆ ಆನಂದವನ್ನುಂಟುಮಾಡುವವನೂ, ದುಷ್ಟರಕ್ಕಸರನ್ನು ಕೊಂದವನೂ, ಶರತ್ಕಾಲದ ಚಂದ್ರನನ್ನು ಮೀರಿಸುವ ಮುಖಕಾಂತಿಯುಳ್ಳವನೂ, ಮೋಘದಂತೆ ಶ್ಯಾಮಲನೂ, ದಿವ್ಯ ಸುಂದರವಾದ ವಸ್ತ್ರಗಳನ್ನು ಧರಿಸಿದವನೂ, ಪರಿಶುದ್ಧ ಚರಿತ್ರನೂ,

ಗೋವರ್ಧನ ಪರ್ವತವನ್ನು ಎತ್ತಿದವನೂ, ಹೃದಯಕಮಲಗಳಲ್ಲಿ ಸಂಚರಿಸುವ ಹಂಸನೂ, ಧೇನುಕನೇ ಮೊದಲಾದ ರಕ್ಕಸರನ್ನು ಸಂಹರಿಸಿದವನೂ, ಅಪಾರವಾದ ಕರುಣೆಗೆ ನೆಲೆಯಾದವನೂ, ಹಾವುಹಾಸಿಗೆಯಲ್ಲಿ ಮಲಗಿದವನೂ, ಮೋಘದಂತೆ ನೀಲವರ್ಣದ ತಲೆ ಗೂದಲುಳ್ಳವನೂ, ಶರಣಾಗತರ ಮೇಲೆ ಕೋಪವನ್ನು ಕಳೆದುಕೊಂಡವನೂ, ದೇವತೆಗಳ ಭೀತಿ ಯನ್ನು ಹೋಗಲಾಡಿಸುವ ಮೃದು ಮಂದಹಾಸವನ್ನು ಸದಾ ಬೀರುವವನೂ, ಎಳ್ಳುಹೂವಿ ನಂತೆ ಮಾಟವಾದ ಮೂಗುಳ್ಳವನೂ ಆದ ಸಾರಸನಾಭನನ್ನು ಧ್ಯಾನಿಸುತ್ತೇನೆ.

28. ರಾಗ : ಕೇದಾರ ಛಾಪುತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಆನಂದ ನಟನ ಪ್ರಕಾಶಂ ಚಿತ್ಸಭೇಶಂ
ಆಶ್ರಯಾಮಿ ಶಿವಕಾಮವಲ್ಲೀಶಂ ||

ಅನುಪಲ್ಲವಿ : ಭಾನುಕೋಟಿ ಕೋಟಿ ಸಂಕಾಶಂ ಭುಕ್ತಿ ಮುಕ್ತಿ ಪ್ರದದಹರಾಕಾಶಂ
ದೀನ ಜನ ಸಂರಕ್ಷಣ ಚಣಂ ದಿವ್ಯಪಾತಂಜಲಿ ವ್ಯಾಘ್ರಪಾದ ದರ್ಶಿತ ಕುಂಚಿತಾಬ್ಜ ಚರಣಂ ||

ಚರಣ : ಶೀತಾಂಶು ಗಂಗಾಧರಂ ನೀಲಕಂಧರಂ
ಶ್ರೀ ಕೇದಾರಾದಿ ಕ್ಷೇತ್ರದಾರಂ
ಭೂತೇಶಂ ಶಾರ್ದೂಲ ಚರ್ಮಾಂಬರಂ ಚಿದಂಬರಂ
ಭೂಸುರ ತ್ರಿಸಹಸ್ರ ಮುನೀಶ್ವರಂ ವಿಶ್ವೇಶ್ವರಂ
ನವನೀತ ಹೃದಯಂ ಸದಯ ಗುರುಗುಹ ತಾತಮಾದ್ಯಂ ||

ಅರ್ಥ : ಆನಂದನಟನ–ಆನಂದಮಯವಾದ ನೃತ್ಯದಲ್ಲಿ ; ಪ್ರಕಾಶಂ–ಶೋಭಿಸುತ್ತಿರುವ ; ಚಿತ್ಸಭೇಶಂ–ಚಿತ್ಸಭೆಗೆ (ಜ್ಞಾನವೆಂಬ ಸಭೆಗೆ) ಒಡೆಯನಾದ ; ಶಿವಕಾಮವಲ್ಲೀಶಂ–ಶಿವಕಾಮವಲ್ಲಿಯ ಪತಿ ಯಾದ ಪರಮೇಶ್ವರನನ್ನು ; ಆಶ್ರಯಾಮಿ–ನಾನು ಆಶ್ರಯಿಸುತ್ತೇನೆ. ಭಾನುಕೋಟಿ ಕೋಟಿ ಸಂಕಾಶಂ–ಕೋಟಿ ಕೋಟಿ ಸೂರ್ಯರ ಕಾಂತಿಯಿಂದ ಕೂಡಿದವನು ; ಭುಕ್ತಿ ಮುಕ್ತಿ ಪ್ರದ ದಹರಾಕಾಶಂ–ಭುಕ್ತಿ ಮುಕ್ತಿಗಳನ್ನೀಯುವ ಹೃದಯಾಕಾಶವುಳ್ಳವನು ; ದೀನ ಜನರನ್ನು ಸಂರಕ್ಷಿಸುವವನು ; ದಿವ್ಯರಾದ ಪತಂಜಲಿ, ವ್ಯಾಘ್ರಪಾದರು ದರ್ಶಿಸಿದ ಪಾದಕಮಲಗಳುಳ್ಳ ವನು ; ಶೀತಾಂಶು ಗಂಗಾಧರಂ–ಚಂದ್ರ ಹಾಗೂ ಗಂಗೆಯರನ್ನು ಧರಿಸಿದವನು ; ನೀಲಕಂಧರಂ –ಕೊರಳಲ್ಲಿ ನೀಲಿಯ ಕರೆಯುಳ್ಳವನು ; ಶ್ರೀಕೇದಾರವೇ ಮೊದಲಾದ ಕ್ಷೇತ್ರಗಳಿಗೆ, ದಾರಂ–ಅಧಿಪತಿಯಾದವನು ; ಭೂತೇಶನಾದವನು ; ಶಾರ್ದೂಲ–ಹುಲಿಯ ; ಚರ್ಮಾಂಬರಂ–ಚರ್ಮವನ್ನೇ ಉಡುಗೆಯಾಗಿ ಧರಿಸಿದವನು ; ಚಿದಂಬರನು ; ಮೂರುಸಾವಿರ ಮುನಿಗಳಿಗೆ, ಬ್ರಾಹ್ಮಣರಿಗೆ ಈಶ್ವರನಾದವನು ; ವಿಶ್ವೇಶ್ವರನು ; ನವನೀತ ಹೃದಯಂ–ಬೆಣ್ಣೆಯಂತೆ ಮೃದು ವಾದ ಹೃದಯವುಳ್ಳವನು ; ದಯಾಮಯನು ; ಗುರುಗುಹನ ತಂದೆಯೂ, ಆದ್ಯಂ–ಆದಿ ಪುರು ಷನೂ ಆದ ಪರಮೇಶ್ವರನನ್ನು ಆಶ್ರಯಿಸುತ್ತೇನೆ.

ತಾತ್ಪರ್ಯ : ಆನಂದಮಯ ನೃತ್ಯದಲ್ಲಿ ತೊಡಗಿರುವ ಚಿತ್ಸಭಾಪತಿಯಾದ ಶಿವಕಾಮವಲ್ಲೀಶನನ್ನು ನಾನು ಆಶ್ರಯಿಸುತ್ತೇನೆ. ಕೋಟಿ ಸೂರ್ಯರ ಕಾತಿಯಿಂದ ಕೂಡಿದ, ಭಕ್ತಿ ಮುಕ್ತಿಗಳನ್ನೀಯುವ, ದೀನ ಜನರನ್ನು ಸಂರಕ್ಷಿಸುವ, ಪತಂಜಲಿ ವ್ಯಾಘ್ರಪಾದರು ಸಂದರ್ಶಿಸಿ ಸುಖಿಗಳಾದ, ಚಂದ್ರ

ಹಾಗೂ ಗಂಗೆಯರನ್ನು ಧರಿಸಿದ, ಕೇದಾರವೇ ಮೊದಲಾದ ಕ್ಷೇತ್ರಗಳಿಗೆ ಅಧಿಪತಿಯಾದ, ಹುಲಿ ಚರ್ಮವನ್ನು ಉಡುಗೆಯಾಗುಳ್ಳ, ಆದಿ ಪುರುಷನಾದ, ಶ್ರೀ ಗುರುಗುಹನ ತಂದೆಯಾದ ಪರ ಮೇಶ್ವರನನ್ನು ಆಶ್ರಯಿಸುತ್ತೇನೆ.

29. ರಾಗ : ಕೇದಾರ ರೂಪಕತಾಳ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಸಮಯಮಿದೆ ನನ್ನು ಬ್ರೋವ–ಜಾಲಮೇಲ ತಾಳಜಾಲ ||

ಅನುಪಲ್ಲವಿ : ಕಮಲನಾಭ ಶ್ರೀ ರಮಣ–ಕಮಲಾಸನ ನುತ ಚರಣ ||

ಚರಣ : ಕರುಣತೋನು ಗಜರಾಜುನಿಗಾಚಿ ರಕ್ಷಿಂಚಿನದಿನಾಕ
ವರ ಪಾರ್ಥಸಾರಥಿಯನುಚು ವಸುಧಲೋ ಬಿರುದಾಂಕಿತುಡೈ
ಪರಮಭಕ್ತ ಕೋಟ್ಲ ಕೆಲ್ಲ ವರಮುಲಿಚ್ಚಿ ಬ್ರೋಚಿನ ಶ್ರೀ
ವರದ ವೆಂಕಟೇಶ ನಾದು ದುರಿತಮೆಲ್ಲದೀರ್ಚವಯ್ಯ ||

ಅರ್ಥ : ಕಮಲನಾಭ, ಶ್ರೀ ರಮಣ, ಕಮಲಾಸನ–ಬ್ರಹ್ಮನಿಂದ ; ನುತಚರಣ–ಸ್ತುತಿಸಲ್ಪಟ್ಟ ಪಾದ ಗಳುಳ್ಳವನೆ ; ನನ್ನು ಬ್ರೋವ– ನನ್ನನ್ನು ಕಾಪಾಡಲು ; ಸಮಯಮಿದೆ–ಇದೇ ತಕ್ಕ ಸಮಯ ವಾಗಿದೆ ; ತಾಳಜಾಲ–ಸಹಿಸಲಾರೆನು ; ಜಾಲಮೇಲ–ತಡವೇಕೆ ! ಕರುಣತೋನು–ಕರುಣೆ ಯಿಂದ ; ಗಜರಾಜುನಿಗಾಚಿ–ಗಜೇಂದ್ರನನ್ನು ಕಾಯ್ದು ; ರಕ್ಷಿಂಚಿನದಿಗಾಕ–ರಕ್ಷಿಸಿದ್ದಲ್ಲದೆ ; ವರ–ಶ್ರೇಷ್ಠನಾದ ; ಪಾರ್ಥಸಾರಥಿಯನುಚು–ಪಾರ್ಥಸಾರಥಿಯೆಂದು ; ವಸುಧಲೋ–ಭೂಮಿ ಯಲ್ಲಿ ; ಬಿರುದಾಂಕಿತುಡೈ–ಬಿರುದು ಪಡೆದವನು ನೀನು ; ಪರಮಭಕ್ತ ಕೋಟ್ಲ ಕೆಲ್ಲ–ನಿನ್ನ ಭಕ್ತ ಕೋಟಿಗಳಿಗೆಲ್ಲ ; ವರಮುಲಿಚ್ಚಿ–ವರವನ್ನು ಕೊಟ್ಟು ; ಬ್ರೋಚಿನ–ಕಾಪಾಡಿದ ; ಶ್ರೀ ವರದ ವೆಂಕಟೇಶ, ನಾದು ದುರಿತಮೆಲ್ಲ–ನನ್ನ ಪಾಪಗಳೆಲ್ಲವನ್ನೂ ; ದೀರ್ಚವಯ್ಯ–ಪರಿಹರಿ ಸಯ್ಯ.

ತಾತ್ಪರ್ಯ : ಕಮಲನಾಭ, ಲಕ್ಷ್ಮೀರಮಣ, ನನ್ನನ್ನು ಕಾಪಾಡಲು ಇದೇ ತಕ್ಕ ಸಮಯವಾಗಿದೆ. ವ್ಯಥೆಯನ್ನು ತಾಳಲಾರೆ, ತಡಮಾಡಬೇಡ. ಕರುಣೆಯಿಂದ ಗಜೇಂದ್ರನನ್ನು ನೀನು ಕಾಪಾಡಿದೆ. ಪಾರ್ಥ ಸಾರಥಿಯೆಂದು ಹೆಸರು ಪಡೆದೆ. ಪರಮ ಭಕ್ತರಿಗೆಲ್ಲ ಕೋಟಿ ಕೋಟಿ ಅನುಗ್ರಹಗಳನ್ನು ದಯ ಪಾಲಿಸಿದ ಶ್ರೀ ವರದ ವೆಂಕಟೇಶ ನನ್ನನ್ನು ಕಾಪಾಡಲು ಇದು ತಕ್ಕ ಸಮಯವಾಗಿದೆಯಯ್ಯ.

30. ರಾಗ : ಕೇದಾರ ಆದಿತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಚಿದಂಬರ ನಟರಾಜಮಾಶ್ರಯೇಹಂ
ಶಿವಕಾಮಿಪತಿಂ ಚಿತ್ಸಭಾಪತಿಂ ||

ಸಮಷ್ಟಿ ಚರಣ : ಚಿದಂಬರ ವಿಹಾರ ಶಂಕರಂ ಚಿದಾನಂದಕರಂ ಗುರುಗುಹವರಂ
ಕೇದಾರೇಶ್ವರಂ ವಿಶ್ವೇಶ್ವರಂ ಕಮಲಾಪತಿನುತಪದಂ ಶಶಿಧರಂ ||

ಅರ್ಥ : ಶಿವಕಾಮಿಪತಿಂ–ಶಿವಕಾಮಿ (ಪಾರ್ವತಿ)ಯ ಪತಿಯಾದ, ಚಿತ್ಸಭಾಪತಿಂ–ಜ್ಞಾನಸಭೆಗೆ ಒಡೆ ಯನಾದ, ಚಿದಂಬರ ನಟರಾಜಂ–ಚಿದಂಬರದ ನಟರಾಜನನ್ನು ; ಆಶ್ರಯೇಹಂ–ಆಶ್ರಯಿಸು

ತ್ತೇನೆ ; ಚಿದಂಬರ ವಿಹಾರ–ಮನಸ್ಸೆಂಬ ಆಕಾಶದಲ್ಲಿ ವಿಹರಿಸುವವನೂ ; ಶಂಕರನೂ ; ಚಿದಾನಂದಕರನೂ; ಗುರುಗುಹನಿಗೆ ವರವನ್ನು ನೀಡುವವನೂ; ವಿಶ್ವೇಶ್ವರನೂ ಕೇದಾರೇಶ್ವರನೂ ಆದ, ಕಮಲಾಪತಿ–ವಿಷ್ಣುವಿನಿಂದ ; ನುತಪದಂ–ಸ್ತುತಿಸಲ್ಪಟ್ಟ ಪಾದಗಳುಳ್ಳವನೂ ; ಶಶಿಧರಂ–ಚಂದ್ರನನ್ನು ಧರಿಸಿದವನೂ ಆದ ಚಿದಂಬರ ನಟರಾಜನನ್ನು ನಾನು ಆಶ್ರಯಿಸುತ್ತೇನೆ.

ತಾತ್ಪರ್ಯ : ಪಾರ್ವತೀವಲ್ಲಭನೂ, ಚಿತ್ಸಭಾಪತಿಯೂ ಆದ ಚಿದಂಬರ ನಟರಾಜನನ್ನು ಆಶ್ರಯಿಸುತ್ತೇನೆ. ಮನಸ್ಸೆಂಬ ಆಕಾಶದಲ್ಲಿ ವಿಹರಿಸುವ, ಶಂಕರನಾದ, ಜ್ಞಾನವೆಂಬ ಆನಂದವನ್ನು ಉಂಟು ಮಾಡುವ, ಗುಹನಿಗೆ ವರವನ್ನು ಇತ್ತ, ಕೇದಾರೇಶ್ವರನಾದ, ವಿಷ್ಣುವಿನಿಂದ ಸ್ತುತಿಸಲ್ಪಟ್ಟ ಪಾದಗಳುಳ್ಳ, ಚಂದ್ರನನ್ನು ಧರಿಸಿದ ಚಿದಂಬರ ನಟರಾಜನನ್ನು ಆಶ್ರಯಿಸುತ್ತೇನೆ.

**31.** ರಾಗ : ಬಿಲಹರಿ ಛಾಪುತಾಳ ತ್ಯಾಗರಾಜರು

ಪಲ್ಲವಿ : ತೊಲಿ ಜನ್ಮಮುನ ಚೇಯು ದುಡುಕುದೆಲಿಸೆನು ರಾಮು ||

ಅನುಪಲ್ಲವಿ : ಫಲಮೇಮೋಯರಚೇತಿ ಪುಂಟಿಕದ್ದಮುವಲೆನಾ ||

ಚರಣ : ರಾಗಿ ಪಯಿರುಲ ಚೆಂತ ರಮ್ಯಮೌವರಿಮೊಲಕ
ರಾಜಿಲ್ಲ ನೇರ್ಚುನಟರಾ
ನಾಗಶಯನ ! ತ್ಯಾಗರಾಜಪಾಪಮುತೋನು
ನಾಮುಪುಣ್ಯಮು ಚೆಲಗುನಾ ||

ಅರ್ಥ : ತೊಲಿಜನ್ಮಮುನ–ಹಿಂದಿನ ಜನ್ಮಗಳಲ್ಲಿ ; ಚೇಯು–ಮಾಡಿದ ; ದುಡುಕುದೆಲಿಸೆನು ರಾಮು–ಪಾಪಗಳನ್ನು ನಾನು ಅರಿತಿದ್ದೇನೆ ರಾಮಚಂದ್ರ ; ಫಲಮೇಮೋ–ಅವುಗಳ ಫಲವೇನೆಂದು ಕೂಡ ; ಅರಚೇತಿ–ಅಂಗೈಮೇಲಿನ ; ಪುಂಟಿಕಿ–ಹುಣ್ಣಿಗೆ ; ಅದ್ದಮು–ಕನ್ನಡಿ ; ವಲೆನಾ–ಬೇಕೆ ; ರಾಗಿಪಯಿರುಲ ಚೆಂತ-ರಾಗಿ ಪೈರಿನ ಮಧ್ಯೆ ; ವರಿಮೊಲಕ–ಬತ್ತದ ಮೊಳಕೆಯು; ರಮ್ಯಮೌ ರಾಜಿಲ್ಲನೇರ್ಚುನಟರಾ–ರಮ್ಯವಾಗಿರುತ್ತದೆಯೇ ? ಹಾಗೆ, ನಾಗಶಯನಾ–ಹಾವು ಹಾಸಿಗೆಯವನೇ ; ತ್ಯಾಗರಾಜ ಪಾಪಮು ತೋನು-ತ್ಯಾಗರಾಜನು ಮಾಡಿದ ಪಾಪಗಳ ನಡುವೆ ; ನಾಮುಪುಣ್ಯಮುಚೆಲಗುನಾ-ನಿನ್ನ ಪವಿತ್ರನಾಮದ ಪುಣ್ಯವು ಶೋಭಿಸುತ್ತದೆಯೆ ?

ತಾತ್ಪರ್ಯ : ಹಿಂದಿನ ಜನ್ಮಗಳಲ್ಲಿ ನಾನು ಮಾಡಿದ ಪಾಪಗಳನ್ನು ನಾನು ಅರಿತಿದ್ದೇನೆ. ಅವುಗಳ ಫಲವೇನೆಂದೂ ನನಗೆ ಗೊತ್ತು. ಅಂಗೈ ಮೇಲಿನ ಹುಣ್ಣಿಗೆ ಕನ್ನಡಿ ಬೇಕೆ ? ರಾಗಿಪೈರಿನ ಮಧ್ಯೆ ಬತ್ತದ ಮೊಳಕೆಯು ರಮ್ಯವಾಗಿರುವುದಿಲ್ಲ. ಹಾಗೆಯೇ ತ್ಯಾಗರಾಜನು ಮಾಡಿದ ಪಾಪಗಳ ಮಧ್ಯೆ ನಿನ್ನ ನಾಮಸ್ಮರಣೆಯು ಶೋಭಿಸುವುದೆ ?

**32.** ರಾಗ : ಬಿಲಹರಿ ರೂಪಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶ್ರೀಮಧುರಾಪುರಿ ವಿಹಾರಿಣಿ ಶ್ರೀ ರಾಜಮಾತಂಗಿ ಮಾಂಪಾಹಿ ||

ಅನುಪಲ್ಲವಿ : ಪಾಮರಜನಪಾಲಿನಿ ಕಾಮದಹನಮೋಹಿನಿ
ನಾಮರೂಪವಿಮರ್ಶಿನಿ ನಟೇಶ್ವರಿ ಜಗಜ್ಜನನಿ ||

ಚರಣ : ಪಾಂಡ್ಯರಾಜಪೂಜಿತಾಬ್ಜ ಪದಯುಗಳೇ
ಒಡ್ಯಾಣಪೀಠಸ್ಥಿತೇ ಸಕಲಕಲೇ
ಪಾಟಲೀಕುಸುಮಪ್ರಿಯೇ ಪದ್ಮರಾಗಸಮಪ್ರಭೇ
ಸೋಮಸುಂದರೇಶಪ್ರಿಯೇ ಗುರುಗುಹ ಸಮುದ್ಭವೇ ||

ಅರ್ಥ : ಶ್ರೀಮಧುರಾಪುರಿವಿಹಾರಿಣಿ-ಮಧುರಾಪುರದಲ್ಲಿ ವಿಹರಿಸುವವಳೇ, ಶ್ರೀರಾಜಮಾತಂಗಿ, ಮಾಂ ಪಾಹಿ-ನನ್ನನ್ನು ಕಾಪಾಡು ; ಪಾಮರಜನ ಪಾಲಿನಿ-ಪಾಮರ ಜನರನ್ನು ರಕ್ಷಿಸುವವಳೂ ; ಕಾಮದಹನ-ಮನ್ಮಥನನ್ನು ಸುಟ್ಟ ಈಶ್ವರನ ; ಮೋಹಿನಿ-ಪ್ರಿಯೆಯೂ ; ನಾಮರೂಪ ವಿಮರ್ಶಿನಿ ನಾಮರೂಪಗಳನ್ನು ವಿಮರ್ಶಿಸುವವಳೂ ನಟೇಶ್ವರಿಯೂ ಜಗಜ್ಜನನಿಯೂ ಆದ ಮೀನಾಕ್ಷಿ, ನನ್ನನ್ನು ಕಾಪಾಡು. ಪಾಂಡ್ಯ ಪೂಜಿತ-ಪಾಂಡ್ಯರಾಜ ರಾಜನಿಂದ ಪೂಜೆಗೊಂಡ ; ಅಬ್ಜ ಪದಯುಗಳೇ-ತಾವರೆಯಂತಹ ಪಾದಗಳುಳ್ಳವಳೂ; ಒಡ್ಯಾಣಪೀಠಸ್ಥಿತೇ-ರತ್ನ ಖಚಿತವಾದ ಪೀಠದಲ್ಲಿ ಕುಳಿತವಳೂ; ಸಕಲಕಲೇ-ಸಕಲ ಕಲೆಗಳಲ್ಲೂ ಪರಿಣತಳೂ; ಪಾಟಲೀಕುಸುಮಪ್ರಿಯೇ-ಪಾಟಲೀ ಪುಷ್ಪಗಳಲ್ಲಿ ಆಸಕ್ತಿಯುಳ್ಳವಳೂ ; ಪದ್ಮರಾಗ ಸಮಪ್ರಭೇ-ಪದ್ಮರಾಗಕ್ಕೆ ಸಮನಾದ ಕಾಂತಿಯುಳ್ಳವಳೂ ; ಸೋಮಸುಂದರೇಶ ಪ್ರಿಯೆ-ಸುಂದರೇಶ್ವರನ ಪ್ರಿಯೆಯೂ ; ಗುರು ಗುಹ ಸಮುದ್ಭವೇ-ಗುರುಗುಹನನ್ನು ಪಡೆದವಳೂ ಆದ ಮೀನಾಕ್ಷಿಯೇ ನನ್ನನ್ನು ಕಾಪಾಡು.

ತಾತ್ಪರ್ಯ : ಶ್ರೀ ಮಧುರಾಪುರದಲ್ಲಿ ವಿಹರಿಸುವ ಜಗಜ್ಜನನಿ, ರಾಜಮಾತಂಗಿ, ನನ್ನನ್ನು ಕಾಪಾಡು. ಪಾಮರಜನರನ್ನು ಕಾಪಾಡುವವಳೂ, ಪರಮೇಶ್ವರನ ಪ್ರಿಯೆಯಾದ ನಟೇಶ್ವರಿಯೂ ಜಗಜ್ಜನನಿಯೂ ಆದ ಮೀನಾಕ್ಷಿಯೆ, ನನ್ನನ್ನು ಸಲಹು. ಪಾಂಡ್ಯರಾಜನಿಂದ ಪೂಜೆಗೊಂಡವಳೂ, ರತ್ನಖಚಿತ ಪೀಠದಲ್ಲಿ ಕುಳಿತವಳೂ ; ಸಕಲಕಲಾಪರಿಣತಳೂ, ಪಾಟಲೀ ಪುಷ್ಪಗಳಲ್ಲಿ ಆಸಕ್ತಳೂ, ಪದ್ಮರಾಗ ರತ್ನದಂತಹ ಕಾಂತಿಯುಳ್ಳವಳೂ, ಸುಂದರೇಶ್ವರ ವಲ್ಲಭೆಯೂ ಆದ ಮೀನಾಕ್ಷಿ , ನನ್ನನ್ನು ಕಾಪಾಡು.

33. ರಾಗ : ಬಿಲಹರಿ ಆದಿತಾಳ ತ್ಯಾಗರಾಜರು

ಪಲ್ಲವಿ : ದೊರಕುನಾ ಇಟುವಂಟಿ ಸೇವ ||

ಅನುಪಲ್ಲವಿ : ದೊರಕುನಾಯುಲ್ಪತಪ ಮೊನರಿಂಚಿನ ಭೂಸುರವರುಲಕುನ್ಶೈನ ಸುರಲುಕ್ಶೈನ ||

ಚರಣ : ತುಂಬುರು ನಾರದುಲು ಸುಗುಣ ಕೀರ್ತನಂಬುಲನಾಲಾಪಮು ಸೇಯುಗ
ಅಂಬರೀಷ ಮುಖ್ಯುಲು ನಾಮಮು ಸೇಯುಗ ಜಾಬುಲಪೈ ಚಲ್ಲಗ
ಬಿಂಬಾಧರುಲಗು ಸುರವಾರಯಲಿವೇಣುಲ ನಾಟ್ಯಮು ಲಾಡಗ
ಅಂಬುಜಭವ ಪಾಕಾರುಲಿರುಗಡಲನನ್ವಯ ವಿರುದಾವಳಿನಿ ಪೊಗಡಗ
ಅಂಬರವಾಸ ಸತುಲು ಕರ ಕಂಕಣಮುಲು ಗಲ್ಲಿನಿ ವಿಸರಗ ಮಣಿ ಹಾ
ರಂಬುಲು ಗದಲಗ ನೂಚಿ ಫಣಿ ತಲ್ಪಂಬುನು ನೆಲಕೊನ ಹರಿನಿಗನುಗೊನ ||

2. ಮರಕತ ಮಣಿಸನ್ನಿಭ ದೇಹಂಬುನ ಮೆರುಗು ಕನಕ ಚೇಲಮು ಶೋಭಿಲ್ಲ
ಚರಣಯುಗ ನಖಾವಳಿ ಕಾಂತುಲು ಚಂದುರುಬಿಲ್ಲಲನುಗೇರ
ವರ ನೂಪುರಮುವೆಲುಗ ಕರಯುಗಮುನ ವಜ್ರಪು ಭೂಷಣಮುಲು ಮೆರೆಯ

ಉರಮುನ ಮುಕ್ತ ಹಾರಮುನು ಮರಿಯುನುಚಿತಮ್ಮೈನ ಮಕರ ಕುಂಡಲಂಬುಲು
ಚಿರುನವ್ವುಲುಗಲ ವದನಂಬುನ ಮುಂಗುರುಲದ್ದಂಪು ಕಪೋಲಮು ಮುದ್ದು
ಗುರಿಯು ದಿವ್ಯ ಫಲಂಬುನ ತಿಲಕಮು ಮೆರೆಯು ಭುವಿ ಲಾವಣ್ಯ ನಿಧಾನಿಕನ ||

3. ತಾಮಸ ಗುಣರಹಿತ ಮುನುಲಗು ಪೊಗಡ ತರಮುಗಾಕನೆ ಭ್ರಮಿ ನಿಲ್ವಗ
ಶ್ರೀಮತ್ಕನಕಪು ತೋಟ್ಲ ಪೈನಿ ಚೆಲುವೊಂದು ಕೊಲುವುಂಡಗ ಕಾಮಿತಫಲ ದಾಯಕಿಯೈ ಸೀತ
ಕಾಂತುಮಿ ಕನಿಯುಪ್ಪೊಂಗ ರಾಮಬ್ರಹ್ಮ ತನಯುಡು ತ್ಯಾಗರಾಜು ತಾ ಪಾಡುಚು ನೂಚಗ
ರಾಮುನಿ ಜಗದೋದ್ಧಾರುನಿ ಸುರರಿಪು ಭೀಮುನಿ ತ್ರಿಗುಣಾ ತೀತುನಿ ಪೂರ್ಣ
ಕಾಮುನಿ ಚಿನ್ಮಯ ರೂಪುನಿ ಸದ್ಗುಣ ಧಾಮುನಿ ಕನುಲಾರ ಮದಿನಿ ಕರುಗೊನ ದೊರಕುನಾ ||

ಅರ್ಥ : ಅಲ್ಪತಪಮೊನರಿಂಚಿನ–ಎಲ್ಲೊ ಅಲ್ಪಸ್ವಲ್ಪ ತಪಸ್ಸು ಮಾಡಿದ ; ಭೂಸುರವರೂಲಕುನ್ನೈನ–ಬ್ರಾಹ್ಮರಿಗಾಗಲಿ ; ಸುರಲುಕ್ಕೈನ–ದೇವತೆಗಳಿಗಾಗಲಿ ; ಇಟುವಂಟಿ ಸೇವ–ಇಂತಹ ಸೇವೆಯು ; ದೊರಕುನಾ–ದೊರಕುತ್ತದೆಯೆ ? ; ತುಂಬುರು ನಾರದುಲು–ತುಂಬುರು ಮತ್ತು ನಾರದರು ; ಸುಗುಣಕೀರ್ತನಂಬುಲನು–ನಿನ್ನ ಸದ್ಗುಣಗಳ ಕೀರ್ತನೆಯನ್ನು ; ಆಲಾಪಮುಸೇಯಗ–ಆಲಾಪನೆ ಮಾಡುತ್ತಿರಲು ; ಅಂಬರೀಷ ಮುಖ್ಯುಲು–ಅಂಬರೀಷನೇ ಮೊದಲಾದವರು ; ನಾಮಮು ಸೇಯಗ–ನಿನ್ನ ನಾಮವನ್ನು ಉಚ್ಚರಿಸುತ್ತಾ ; ಜಾಜುಲ ಪೈ ಚಲ್ಲಗ–ಜಾಜಿಹೂವುಗಳಿಂದ ಅರ್ಚಿಸುತ್ತಿರಲು ; ಬಿಂಬಾಧರುಲಗು–ತೊಂಡೆಯ ಹಣ್ಣಿನಂಥ ತುಟಿಗಳುಳ್ಳ ; ಸುರವಾರಯುಲಿ ವೇಣುಗನಾಟ್ಯಮುಲಾಡಗ–ದೇವಲೋಕದ ಅಪ್ಸರಸ್ತ್ರೀಯರು ನಾಟ್ಯವಾಡುತ್ತಿರಲು ; ಅಂಬುಜಭವ–ಬ್ರಹ್ಮ ; ಪಾಕಾರುಲು–ಇಂದ್ರರು ; ಇರುಗಡಲನು–ಎರಡೂ ಕಡೆ ನಿಂತು ; ಅನ್ವಯ ವಿರುದಾವಳಿನಿ ಪೊಗಡಗ–ನಿನ್ನ ವಂಶದ ಬಿರುದುಗಳನ್ನು ಸಾರಿ ಹೊಗಳುತ್ತಿರಲು ; ಅಂಬರವಾಸ ಸತುಲು–ದೇವಲೋಕದ ಸ್ತ್ರೀಯರು ; ಕರಕಂಕಣಮುಲು ಗಲ್ಲಗ–ಕೈಯಕಂಕಣಗಳು ಗಲ್ಲೆಂದು ಶಬ್ದಮಾಡುವಂತೆ ; ವಿಸರಗಾ-ಬೀಸಣಿಗೆಯಿಂದ ಬೀಸುತ್ತಿರಲು ; ಮಣಿಹಾರಂಬುಲು ಗದಲುಗನೂಚೆ-ಧರಿಸಿದ ರತ್ನಹಾರಗಳು ಅತ್ತಿತ್ತ ತೂಗುತ್ತಿರಲು ; ಫಣಿತಲ್ಪಂಬುನು–ಹಾವಿನ ಹಾಸಿಗೆಯ ಮೇಲೆ ; ನೆಲುಕೊನ–ನೆಲಸಿದ ; ಹರಿನಿ-ಹರಿಯನ್ನು ; ಕನುಗೊನ-ನೋಡುವ, ಸೇವೆಯು ಸುಲಭವಾಗಿ ದೊರಕುತ್ತದೆಯೆ ?

ಮರಕತಮಣಿಸನ್ನಿಭ–ಪಚ್ಚೆರತ್ನಕ್ಕೆ ಸಮಾನವಾದ ; ದೇಹಂಬುನ–ದೇಹಕ್ಕೆ ; ಮೆರುಗು–ಹೊಳೆಯುವ ; ಕನಕಚೇಲಮು ಶೋಭಿಲ್ಲ–ಚಿನ್ನದ ವಸ್ತ್ರವು ಶೋಭಿಸಿರಲು ; ಚರಣಯುಗ ನಖಾವಳಿ ಕಾಂತುಲು–ಎರಡೂ ಪಾದಗಳ ಉಗುರುಗಳ ಕಾಂತಿಯು ; ಚಂದುರು ಬಿಲ್ಲಲನು ಗೇರ–ಚಂದ್ರನ ಕಿರಣಗಳ ಕಾಂತಿಯನ್ನು ಕೀಳುಮಾಡುತ್ತಿರಲು ; ವರನೂಪುರಮು ವೆಲಗ–ಶ್ರೇಷ್ಠವಾದ ನೂಪುರವು ಶೋಭಿಸಿ ; ಕರಯುಗಮುನ–ಕೈಗಳ , ವಜ್ರಪು ಭೂಷಣಮುಲು ಮೆರೆಯ–ವಜ್ರದ ಅಲಂಕಾರ ಆಭರಣಗಳು ಮೆರೆಯಲು ; ಉರಮಾನ–ಎದೆಯಮೇಲೆ ; ಮುಕ್ತಾಹಾರಮುಲು–ಮುತ್ತಿನಹಾರವು ; ಮರಿಯುನುಚಿತಮ್ಮೈನ–ಮತ್ತೆ ಸೂಕ್ತವಾಗಿ ಹೊಂದಿಕೊಳ್ಳುವ ; ಮಕರಕುಂಡಲಂಬುಲು–ಮಕರ ಕುಂಡಲಗಳು ಶೋಭಿಸಿರಲು ; ಚಿರುನವ್ವುಲುಗಲವದನಂಬುನ–ಮೃದುಮಂದಹಾಸವು ಮಿನುಗಿರುವ ಮುಖ ; ಮುಂಗುರುಲದ್ದಂಪು ಕಪೋಲಮು–ಮುಂಗುರುಳುಗಳಿಂದ ಶೋಭಿಸಿರುವ ಕೆನ್ನೆಗಳು ; ಮುದ್ದುಗುರಿಯು ದಿವ್ಯ ಫಲಮುನ–ಮುದ್ದಾದ, ದಿವ್ಯವಾದ ಫಲದಂತೆ ಹೊಳೆಯುವ ; ತಿಲಕಮು–ತಿಲಕವು ; ಮೆರೆಯು–

ಶೋಭಿಸಿರಲು ; ಭುವಿಲಾವಣ್ಯನಿಧಿನಿ ಕನ–ಭೂಮಿಯಮೇಲೆ ಲಾವಣ್ಯ ನಿಧಿಯಾಗಿ ಕಾಣುವ ಹರಿಯನ್ನು ನೋಡುವ ಸೇವೆಯು ಸುಲಭವಾಗಿ ದೊರಕುತ್ತದೆಯೇ ? ತಾಮಸಗುಣರಹಿತಮುನುಲಗು–ತಾಮಸಗುಣರಹಿತರಾದ ಮುನಿಗಳು ; ಪೊಗಡ–ಹೊಗಳುವ ; ತರಮುಗಾಕನೆ ಭ್ರಮಿಚಿನಿಲ್ವಗ–ರೀತಿ ತಿಳಿಯದೆ ಭ್ರಮಿಸಿ ನಿಂತಿರಲು ; ಶ್ರೀಮತ್ಕನಕಪು–ಚಿನ್ನದ ; ತೋಟ್ಲಪೈನಿ–ಉಯ್ಯಾಲೆಯ ಮೇಲೆ ; ಚೆಲುವೊಂದ ಕೊಲುವುಂಡಗ–ದಿವ್ಯವಾದ ಅಲಂಕಾರದಿಂದ ; ಕಾಮಿತಫಲದಾಯಕಿಯೈ–ಅಪೇಕ್ಷಿಸಿದ ವರಗಳನ್ನು ನೀಡುವ ; ಸೀತ ಕಾಂತುಮಿ–ಸೀತಾರಮಣಿಯು ; ಕನಿಯುಪ್ಪೊಂಗ–ನಿನ್ನನ್ನು ನೋಡಿ ಆನಂದಪಡುತ್ತಿರಲು ; ರಾಮಬ್ರಹ್ಮತನಯುಡು ತ್ಯಾಗರಾಜು–ರಾಮಬ್ರಹ್ಮರ ಮಗನಾದ ತ್ಯಾಗರಾಜನು ; ತಾಪಾಡುಚುನೂಚಗ–ಹಾಡುತ್ತಾ ತೂಗುತ್ತಿರಲು ; ರಾಮುನಿ–ಅಂಥ ಶ್ರೀರಾಮಚಂದ್ರ ನನ್ನು ; ಜಗದುದ್ಧಾರುನಿ–ಜಗದೋದ್ಧಾರನನ್ನು ; ಸುರರಿಪುಭೀಮುನಿ–ರಾಕ್ಷಸರಿಗೆ ಭಯಂಕರ ನಾದವನನ್ನು ; ಪೂರ್ಣಕಾಮುನಿ–ಪೂರ್ಣಕಾಮನನ್ನು ; ತ್ರಿಗುಣಾತೀತುನಿ–ಸತ್ವ ರಜಸ್ ತಪೋಗುಣಗಳನ್ನು ಮೀರಿದವನನ್ನು ಚಿನ್ಮಯರೂಪುನಿ–ಜ್ಞಾನಮಯರೂಪನನ್ನು ; ಸದ್ಗುಣಧಾಮುನಿ–ಸದ್ಗುಣಗಳಿಗೆ ನೆಲೆಯಾದವನನ್ನು ; ಕನುಲಾರ–ಕಣ್ಣಾರ ; ಮದಿನಿ–ಮನ ಸಾರ ; ಕನುಗೊನ–ನೋಡುವ, ಸೇವೆಯು ಸುಲಭವಾಗಿ ದೊರಕುತ್ತದೆಯೆ ?

ತಾತ್ಪರ್ಯ : ಎಲ್ಲೋ ಅಲ್ಪಸ್ವಲ್ಪ ತಪಸ್ಸು ಮಾಡಿದ ಬ್ರಾಹ್ಮಣರಿಗಾಗಲಿ, ದೇವತೆಗಳಿಗಾಗಲಿ ಇಂತಹ ಸೇವೆಯು ದೊರಕುತ್ತದೆಯೆ ? ತುಂಬುರುನಾರದರು ನಿನ್ನ ಸದ್ಗುಣಗಳನ್ನು ಹಾಡುತ್ತಿರಲು, ಅಂಬರೀಷ ಮೊದಲಾದ ಭಕ್ತರು ಜಾಜಿಹೂವುಗಳಿಂದ ಪೂಜಿಸುತ್ತಿರಲು, ತೊಂಡೆಹಣ್ಣಿನಂತಹ ತುಟಿಯುಳ್ಳ ಅಪ್ಸರೆಯರು ನರ್ತಿಸುತ್ತಿರಲು, ಬ್ರಹ್ಮ ಹಾಗೂ ಇಂದ್ರರು ಇಕ್ಕೆಲಗಳಲ್ಲೂ ನಿಂತು ನಿನ್ನ ವಂಶದ ಬಿರುದಾವಳಿಗಳನ್ನು ಹೊಗಳುತ್ತಿರಲು, ದೇವಸ್ತ್ರೀಯರು ಕೈಯ ಕಂಕಣಗಳು ಗಲ್ಲೆನ್ನುವಂತೆ ಬೀಸಣಿಗೆಗಳಿಂದ ಬೀಸುತ್ತಿರಲು, ಸರ್ಪಶಯನದ ಮೇಲೆ ನೆಲಸಿದ ಶ್ರೀಹರಿಯನ್ನು ನೋಡುವ ಭಾಗ್ಯ ಸುಲಭವಾಗಿ ದೊರಕುತ್ತದೆಯೆ ?

ಮರಕತರತ್ನದಂತಹ ದೇಹಕ್ಕೆ ಚಿನ್ನದ ವಸ್ತ್ರವು ಉಜ್ವಲವಾಗಿ ಶೋಭಿಸಿರಲು, ಪಾದಗಳ ಉಗುರುಗಳ ಕಾಂತಿಯು ಚಂದ್ರಕಾಂತಿಯನ್ನೇ ಕೀಳುಗಳೆಯುತ್ತಿರಲು, ವಜ್ರಾಭರಣಗಳು, ಮುತ್ತಿನಹಾರಗಳು, ಮಕರಕುಂಡಲಗಳು ಶೋಭಿಸಿರಲು, ಮಂದಹಾಸ ಮಿನುಗುವ ಮುಖ, ಸುಂದರವಾದ ಮುಂಗುರುಗಳು ಆಡುವ ಕಪೋಲಗಳು, ತಿಲಕ ಇವು ನಯನ ಮನೋಹರವಾಗಿರಲು ಭೂಮಿಯಲ್ಲಿ ಲಾವಣ್ಯನಿಧಿಯಾಗಿ ಮೆರೆಯುತ್ತಿರುವ ಶ್ರೀಹರಿಯನ್ನು ನೋಡುವ ಸೇವೆಯು ಸುಲಭವಾಗಿ ದೊರಕುತ್ತದೆಯೆ ?

ತಾಮಸಗುಣರಹಿತರಾದ ಮುನಿಗಳು ನಿನ್ನನ್ನು ಹೊಗಳುವ ರೀತಿ ತಿಳಿಯದೆ ಭ್ರಮಿಸಿ ನಿಂತಿರಲು, ಚಿನ್ನದ ಉಯ್ಯಾಲೆಯ ಮೇಲೆ ಕುಳಿತು ದಿವ್ಯವಾದ ಅಲಂಕಾರದಿಂದ ಶೋಭಿಸುವ ಸೀತೆಯು ನಿನ್ನನ್ನು ನೋಡಿ ಆನಂದಪಡುತ್ತಿರಲು, ರಾಮಬ್ರಹ್ಮತನಯನಾದ ತ್ಯಾಗರಾಜನು ಹಾಡುತ್ತಾ ಉಯ್ಯಾಲೆಯನ್ನು ತೂಗುತ್ತಿರಲು, ಜಗದೋದ್ಧಾರನಾದ, ರಾಕ್ಷಸರಿಗೆ ಭಯಂಕರನಾದ, ಪೂರ್ಣಕಾಮನಾದ, ತ್ರಿಗುಣಾತೀತನಾದ ನಿನ್ನನ್ನು ಕಣ್ಣಾರ ನೋಡಿ ಮನಸಾರ ಸವಿಯುವ ಭಾಗ್ಯವು ಸುಲಭವಾಗಿ ಇತರರಿಗೆ ಲಭ್ಯವಾಗುತ್ತದೆಯೆ ?

34. ರಾಗ : ಸಿಂಹೇಂದ್ರ ಮಧ್ಯಮ ಆದಿತಾಳ ಮೈಸೂರು ವಾಸುದೇವಾಚಾರ್ಯರು

ಪಲ್ಲವಿ : ನೀಕೆಂದುಕು ದಯರಾದು ರಾಮ ನೀರಜಾಕ್ಷ ನಿನ್ನೆ ನಮ್ಮಿನ ನಾಪ್ಯೈ ||

ಅನುಪಲ್ಲವಿ : ರಾಕೇಂದು ನಿಭಾನನ ರಾಮಚಂದ್ರ | ಸಾಕೇತ ಪುರಾಧೀಶ ಸರ್ವೇಶ ||

ಚರಣ : ಶರಣಾಗತ ರಕ್ಷಕುಡನುಚು ನೀದು ಬಿರುದುಲೆಲ್ಲ ನೀವು ಮರಚಿತಿವೇಮೋ |
ಧೀರಾಗ್ರಗಣ್ಯ ಧರಣಿಜಾರಮಣ | ವರಮೀಯವಯ್ಯ ಪರವಾಸುದೇವ ||

ಅರ್ಥ : ನೀರಜಾಕ್ಷ–ತಾವರೆಯಂತೆ ಕಣ್ಣುಳ್ಳ : ರಾಮ–ಶ್ರೀ ರಾಮಚಂದ್ರನೆ ; ನಿನ್ನೆ ನಮ್ಮಿನ ನಾಪ್ಯೈ– ನಿನ್ನನ್ನೇ ನಂಬಿರುವ ನನ್ನ ಮೇಲೆ ; ನೀದು–ನಿನಗೆ ; ಎಂದುಕು ದಯರಾದು–ಏಕೆ ದಯೆ ಬರುವುದಿಲ್ಲ ? ; ರಾಕೇಂದುನಿಭ–ಪೂರ್ಣ ಚಂದ್ರನಿಗೆ ಸಮನಾದ ; ಆನನ–ಮುಖವುಳ್ಳ ; ರಾಮಚಂದ್ರನೆ ; ಸಾಕೇತ ಪುರಾಧೀಶ–ಅಯೋಧ್ಯಾನಗರದ ಪ್ರಭುವೆ ; ಸರ್ವೇಶನೆ ; ಶರಣಾಗತ ರಕ್ಷಕುಡು–ನೀನು ಶರಣಾಗತರನ್ನು ರಕ್ಷಿಸುವವನು ; ಅನುಚು–ಎಂಬುದಾಗಿ ಇರುವ ; ನೀದು– ನಿನ್ನ ; ಬಿರುದುಲೆಲ್ಲ–ಬಿರುದುಗಳನ್ನೆಲ್ಲ ; ನೀವು ಮರಚಿತಿವೇಮೋ–ನೀನು ಮರೆತುಬಿಟ್ಟೆಯೋ ಹೇಗೆ ? ; ಧೀರಾಗ್ರಗಣ್ಯ– ಧೀರರಲ್ಲಿ ಅಗ್ರಗಣ್ಯನಾದವನೆ ; ಧರಣಿಜಾ ರಮಣ–ಸೀತಾ ನಾಥನೆ ; ಪರವಾಸುದೇವನೆ ; ವರಮು ಈಯವಯ್ಯ–ವರವನ್ನು ದಯಪಾಲಿಸಯ್ಯ.

ತಾತ್ಪರ್ಯ : ತಾವರೆಯಂತೆ ಕಣ್ಣುಳ್ಳ ಶ್ರೀರಾಮಚಂದ್ರ, ನಿನ್ನನ್ನೇ ನಂಬಿದ ನನ್ನ ಮೇಲೆ ನಿನಗೆ ಏಕೆ ದಯೆ ಬರುತ್ತಿಲ್ಲ ? ಪೂರ್ಣಚಂದ್ರನನ್ನು ಹೋಲುವ ಮುಖವುಳ್ಳ ರಾಮಚಂದ್ರ, ಸಾಕೇತ ಪುರಾಧೀಶ ನೀನು ಶರಣಾಗತರನ್ನು ರಕ್ಷಿಸುವವನು ಎಂಬುದಾಗಿ ಇರುವ ನಿನ್ನ ಬಿರುದುಗಳನ್ನೆಲ್ಲ ನೀನೇ ಮರೆತು ಬಿಟ್ಟೆಯೋ ಹೇಗೆ ? ಧೀರರಲ್ಲಿ ಅಗ್ರಗಣ್ಯನಾದವನೆ, ಸೀತಾನಾಥನೆ, ಪರವಾಸುದೇವನೇ ನನಗೆ ವರವನ್ನು ಅನುಗ್ರಹಿಸಯ್ಯ.

35. ರಾಗ : ಸಿಂಹೇಂದ್ರ ಮಧ್ಯಮ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ರಾಮರಾಮ ಗುಣಸೀಮಾ ರಾಮ ಹೃದಯಾಭಿರಾಮ ||

ಅನುಪಲ್ಲವಿ : ಸೋಮಾನನ ಘನಶ್ಯಾಮ ಹೇಮಾಂಬರಾರಿ ವಿರಾಮ ||

ಚರಣ : ವಾಸವ ಮುಖದೇವ ವಂದ್ಯಮಾನ ಚರಣ
ವರ ಮೇ ಹೃದಿ ಸದಾ ವಾರಣಮೋಹನ ಗತೇ
ಭಾಸಿತ ಹೇಮಕಲಾಪ ಪಾಟಿತ ಖಲಾಟೋಪ
ನಾಶಿತ ಸಂಸಾರತಾಪ ನಯನ ಭರಿತ ಕೃಪ ||

ಪ್ಲವಗ ಸಮುದಯ ಪರಿವೃತ ಕಲಯ
ವಿಭೋ ಮಮ ಕುಶಲಂ ದಿನ ಮನು
ನವ ಮಣಿಮಯ ಹಾರ ನೀರಧಿ ಮದಹರ
ಭವ ಸರಿದೀಶಪಾರ ಭೂರಿ ಸುಂದರಾಕಾರ ||

ದೀನ ಬಂಧೋ ಮಾಮವ ದಶಮುಖ ವಿದಳನ
ವಿನತ ಕಲ್ಪತರೋ ವಾರಿಜನಾಭ ರೂಪ

ಮುನಿ ಮಾನಸಧಾಮ ಮೃಗಮದ ಸುಲಲಾಮ
ವನಜಾಪಾಂಗಸುದಾಮ ವೈದೇಹಿ ಸಕಾಮ ||

ಅರ್ಥ : ರಾಮರಾಮ, ಗುಣಸೀಮಾ–ಸದ್ಗುಣಗಳಿಗೆ ಎಲ್ಲೆಯಾದವನೇ ; ಹೃದಯಾಭಿರಾಮ–ಹೃದಯಕ್ಕೆ ಸಂತೋಷವುಂಟುಮಾಡುವವನೆ ; ಸೋಮಾನನ–ಚಂದ್ರನಂತೆ ಮುಖವುಳ್ಳವನೆ ; ಘನಶ್ಯಾಮ–ಮೋಡದಂತೆ ನೀಲವರ್ಣನೆ ; ಹೇಮಾಂಬರ–ಚಿನ್ನದ ವಸ್ತ್ರವನ್ನು ಧರಿಸಿದವನೆ ; ಅರಿವಿರಾಮ–ಶತ್ರುಗಳನ್ನು ನಾಶಮಾಡಿದವನೆ ;

ವಾಸವಮುಖ–ದೇವೇಂದ್ರನೇ ಮೊದಲಾದ ; ದೇವ–ದೇವತೆಗಳಿಂದ ; ವಂದ್ಯಮಾನಚರಣ–ನಮಸ್ಕರಿಸಲ್ಪಟ್ಟ ಪಾದಗಳುಳ್ಳವನೆ ; ಮೇ ಹೃದಿ–ನನ್ನ ಹೃದಯದಲ್ಲಿ ; ಸದಾ–ಯಾವಾಗಲೂ ; ವಸ–ವಾಸಿಸು ; ಭಾಸಿತ–ಹೊಳೆಯುವ ; ಹೇಮಕಲಾಪ–ಚಿನ್ನದ ಆಭರಣಗಳ ಅಲಂಕಾರವುಳ್ಳವನೆ ; ಖಲಾಟೋಪ–ರಾಕ್ಷಸರ ಆಟೋಪವನ್ನು ; ಪಾಟಿತ–ನಾಶಮಾಡುವವನೇ; ನಾಶಿತ ಸಂಸಾರ ತಾಪ–ಸಂಸಾರದ ತಾಪಗಳನ್ನು ನಾಶಮಾಡುವವನೆ ; ನಯನ ಭರಿತ ಕೃಪ–ಕರುಣೆ ತುಂಬಿದ ಕಣ್ಣುಗಳುಳ್ಳವನೆ ; ಪ್ಲವಗ ಸಮುದಯ–ವಾನರರ ಸಮೂಹದಿಂದ ; ಪರಿವೃತ–ಸುತ್ತುವರಿಯಲ್ಪಟ್ಟ ದೇವನೆ ; ಕಲಯ–ಕಾಪಾಡು

ತಾತ್ಪರ್ಯ : ಸದ್ಗುಣಗಳಿಗೆ ಸೀಮೆಯಾದ ಶ್ರೀ ರಾಮಚಂದ್ರ, ನೀಲವರ್ಣನೆ, ಚಂದ್ರನಂತೆ ಮುಖವುಳ್ಳವನೆ, ಹೇಮವಸ್ತ್ರಗಳನ್ನು ಧರಿಸಿದವನೆ, ಶತ್ರುಗಳನ್ನು ನಾಶಮಾಡಿದವನೆ, ದೇವೇಂದ್ರಾದಿಗಳಿಂದ ನಮಸ್ಕೃತನಾದವನೇ ಸದಾ ನನ್ನ ಹೃದಯದಲ್ಲಿ ವಾಸಿಸು. ರಾಕ್ಷಸರ ಆಟೋಪಗಳನ್ನು ನಾಶಮಾಡಿದ, ಸಂಸಾರದ ತಾಪಗಳನ್ನು ಪರಿಹರಿಸುವ, ಕರುಣೆ ತುಂಬಿದ ಕಣ್ಣುಗಳುಳ್ಳ, ವಾನರವೀರರಿಂದ ಸುತ್ತುವರಿಯಲ್ಪಟ್ಟ ದೇವನೇ ನನ್ನ ಹೃದಯದಲ್ಲಿ ವಾಸಮಾಡು.

36. ರಾಗ : ಸಿಂಹೇಂದ್ರ ಮಧ್ಯಮ ಆದಿತಾಳ ಪಾಪನಾಶಂ ಶಿವನ್

ಪಲ್ಲವಿ : ಇಹಪರಮೆನು ಇರು ಉಲಗಿಲುಂ ಪರಸುಖಂ
ಉದವುಂ ಸುಗುಣ ಶೀಲ ||

ಅನುಪಲ್ಲವಿ : ಗುಹ ಶರವಣಭವ ಶಿವಬಾಲ ಶಿವ
ಗುರುವೆನುಂ ಪುಗಳ್ ಪೆರುಂ ವಡಿವೇಲ
ಅಹಮುರುಂ ಅವುಣರ್‌ಗಳ್ ಕುಲಕಾಲಾ
ಅಮರುಲಗುಂ ಅಖಿಲವುಯಿರುಂ ವಳರ ಅರುಳ ಕೃಪಾಲವಾಲ ||

ಚರಣ : ದಯ್ಯೈನಿರ್‍ೈಂದ ತಿರುವಿಳಿಗಳ್ ಪನಿರಂಡುಂ
ಕವರ್‌ನ್ದ ಮುರುವಲ್ ವದನಂ ಆರುಂ
ಬುಯಗ ರಾಜನೆನತ್ತಿಗಳ್‌ನ್ದ ಪನ್ನಿರು
ಬುಯಂಗಳುಂ ಅಗಲ ಮಣಿಫಣಿಯುಂ
ಮಯಿಲೋಡುಂ ಇರುಪುರಂ ಇರುಮಾದರ್
ಮರುವ ನನ್ ಮಯಿಲ್‌ಮಿಶೈ ವರುವಾಯೇ
ಪಯಸಿಜ ಪದವಿಣೈ ತರುವಾಯೇ
ಭವಕಡರ್ ಕರೈ ಕಡಕ್ಕ ಅರುಳ್ ಮರಕ್ಕಲಂ ಕೊಡುಕ್ಕುಂ ||

ಅರ್ಥ : ಇಹಪರವೆನ್ನುವ ಎರಡು ಪ್ರಪಂಚಗಳಲ್ಲಿ ಪರಮಸುಖವನ್ನು, ಉದವುಂ–ಕೊಡುವ; ಸುಗುಣಶೀಲ ಎನುಂ–ಎಂಬ, ಪುಗಳ್–ಹೊಗಳಿಕೆಯನ್ನು ಪಡೆದ, ವಡಿವೇಲನೆ ; ಅಹಂ ಉರುಂ–ಅಹಂಕಾರಿಗಳಾದ, ಅವುಣರ್‌ಗಳ್–ರಾಕ್ಷಸರ, ಕುಲಕಾಲ–ವಂಶಕ್ಕೆ ಯಮನಂತಿರುವವನೆ ಅಮರುಲಗುಂ ಅಖಿಲವುಯಿರುಂ–ದೇವತೆಗಳು ಮತ್ತು ಸಕಲ ಜೀವಗಳನ್ನು ; ವಳರ–ಸಲಹುವ ; ಅರುಳ–ಅನುಗ್ರಹಕ್ಕೆ ; ಕೃಪಾ ಆಲವಾಲ–ಕೃಪೆಗೆ ಪಾತಿಯಂತಿರುವವನೆ

ದಯೈನಿರೈಂದ-ದಯೆತುಂಬಿದ ; ತಿರುವಿಳಿಗಳ್-ಸಂಪದ್ಯುಕ್ತವಾದ ಕಣ್ಣುಗಳು ; ಹನ್ನೆರಡು ; ಕವರ್‌ನ್ದ–ಆಕರ್ಷಕವಾದ ; ಮುರುವಲ್–ಮುಗುಳ್ನಗೆಯುಳ್ಳ ; ವದನಂ ಆರುಂ–ಆರುಮುಖವುಳ್ಳ ; ಪುಯಗರಾಜನ್ ಎನತ್ತಿಗಳ್‌ನ್ದ–ಶ್ರೇಷ್ಠರಾಜನೆಂದು ಹೊಗಳಿಕೆಗೆ ಸಂದ, ಪನ್ನಿರು ಬುಯಂಗಳುಂ–ಹನ್ನೆರಡು ಭುಜಗಳು; ಅಗಲ ಮಣಿಫಣಿಯುಂ–ವಿಶಾಲವಾದ ವಕ್ಷಾಭರಣಗಳೂ ; ಮಯಿಲೋಡುಂ–ನವಿಲುವಾಹನವೂ ; ಇರುಪುರಂ–ಎರಡುಕಡೆಯೂ ; ಇರುಮಾದರ್–ವಲ್ಲಿ ದೇವಯಾನೆಯರು, ಮರುವ–ಆಲಿಂಗಿಸಿಕೊಂಡ ; ನನ್ ಮಯಿಲ್‌ಮಿಸೈ ವರುವಾಯೇ–ನಿನ್ನ ನವಿಲುವಾಹನದ ಮೇಲೆ ಕುಳಿತು ಪ್ರತ್ಯಕ್ಷನಾಗು ; ಪಯಸಿಜ ಪದವಿಣ್ಯೆ–ಸಂಪತ್ತನ್ನು ಶ್ರೀಯನ್ನು, ತರುವಾಯೇ–ಕೊಡು; ಭವ ಕಡರ್–ಭವಸಾಗರದ; ಕಡಕ್ಕರೈ ಕಡಕ್ಕ–ದಾಟಿ ಆಚೆದಡ ಸೇರಲು ; ಮರಕ್ಕಲಂ ಕೊಡುಕ್ಕುಂ–ದೋಣಿಯನ್ನು ಕೊಡು.

37. ರಾಗ : ಮಲಯ ಮಾರುತ ಆದಿತಾಳ

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಜನ್ಮಮೆಂದುಕು ಭಕ್ತಿಲೇನಿ ನರ–ಜನ್ಮಮೆಲ್ಲ ಭೂಭಾರಮೇ ಮನಸಾ

ಅನುಪಲ್ಲವಿ : ಮನ್ಮದಾಂಧಕಾರಮುಗು ಚೀಕಟಿಲೋ ಮರಿಮರಿ ದೂರಿ ಮಹಿಲೋನ ಬುಟ್ಟಿ ||

ಚರಣ : ತನದೈವಮನಿ ಅನ್ಯದೈವಮನಿ–ತನಲೋನೆ ತಾನು ತಾರತಮ್ಯಮೆಂಚಿ
ಪೆನುವಾದ ತರ್ಕಮುಲು ಚೇಸಿ ಚೇಸಿ–ಘನಮ್ಯೆನ ಪಾಪಮುನು ಬೆಂಚುಚುಂಡೇ ||

2. ತನಪಾಶಮುನಿದಗಿಲಿ ಚಿಂತಲೇಕ–ಧನಧಾನ್ಯಮುಲೇ ದೈವಮನಿಯೆಂಚಿ
ತನವಂಟಿಮಾನವುನಿ ಸನ್ನುತಿಂಚಿ–ತನಪ್ರಾಯಮೆಲ್ಲ ತಾರುಮಾರು ಚೇಸೆ ||

3. ಹರಿ ಬ್ರಹ್ಮರುದ್ರಾದುಲನೆಲ್ಲಮಾನಿ–ಹರಿಗತ ತತ್ವಾರ್ಥಮುಲುಚೆದಿವಿ ಶ್ರೀ
ಹರಿ ! ವೆಂಕಟೇಶ ! ಯನಿ ಭಜಿಯಿಂಚೆ ವರಭಕ್ತುಲತೋ ವಾದಾಡುಚುಂಡೇ ||

ಅರ್ಥ : ಭಕ್ತಿಲೇನಿ–ಭಕ್ತಿಯಿಲ್ಲದ ; ಜನ್ಮಮೆಂದುಕು–ಜನ್ಮ ಏಕೆ ? ಮನಸಾ–ಮನಸ್ಸೇ ; ಜನ್ಮಮೆಲ್ಲ–ಅಂತಹ ಬದುಕೆಲ್ಲವೂ ; ಭೂಭಾರಮೇ–ಭೂಮಿಗೆ ಭಾರವೇ ಸರಿ ; ಮನ್ಮದಾಂಧಕಾರಮುಗು–ನನ್ನದು ಎಂಬ ಗರ್ವದ ; ಚೀಕಟಿಲೋ–ಕಗ್ಗತ್ತಲಲ್ಲಿ ; ಮರಿಮರಿ ದೂರಿ–ಮತ್ತೆ ಮತ್ತೆ ಹೊಕ್ಕು ; ಮಹಿಲೋನ ಬುಟ್ಟಿ–ಈ ಭೂಮಿಯಲ್ಲಿ ಹುಟ್ಟಿ; ತನದೈವಮು ಅವಿ–ನನ್ನ ದೇವರು ಎಂದು ; ಅನ್ಯದೈವಮು ಅನಿ–ಅನ್ಯರ ದೇವರು ಎಂದು ; ತನಲೋನೆ ತಾನು–ನನ್ನಲ್ಲೇ ನಾನು ; ತಾರತಮ್ಯಮೆಂಚಿ–ತಾರತಮ್ಯಮಾಡುತ್ತಾ ; ಪೆನುವಾದ ತರ್ಕಮುಲು ಚೇಸಿ ಚೇಸಿ–ವಿತಂಡವಾದ ತರ್ಕಗಳನ್ನು ಮಾಡುತ್ತಾ ಮಾಡುತ್ತಾ ; ಘನಮ್ಯೆನ–ಹಿರಿದಾದ ; ಪಾಪಮುನು–ಪಾಪವನ್ನು ; ಬೆಂಚುಚುಂಡೇ–ಬೆಳೆಸಿಕೊಂಡೆ ; ತನಪಾಶಮುನು ತಗಿಲಿ–ನನ್ನದೆಂಬ ಪಾಶಕ್ಕೆ ಅಂಟಿಕೊಂಡು ; ಚಿಂತಲೇಕ–ಚಿಂತೆಯಿಲ್ಲದೆ ; ಧನಧಾನ್ಯಮುಲೇ–ಧನಧಾನ್ಯಗಳೇ ; ದೈವಮನಿ

ಯೆಂಚಿ–ದೈವವೆಂದು ಭಾವಿಸಿ ; ತನವಂಟಿ–ತನ್ನಂಥವರೇ ಆದ ; ಮಾನವುನಿ–ಮಾನವರನ್ನು ; ಸನ್ನುತಿಂಚಿ–ಸ್ತೋತ್ರಮಾಡುತ್ತಾ ; ತನಪ್ರಾಯವೆಲ್ಲ–ನನ್ನ ಜೀವನವನ್ನೆಲ್ಲ ; ತಾರು ಮಾರು ಚೇಸೇ–ಅಸ್ತವ್ಯಸ್ತಗೊಳಿಸಿಕೊಂಡೆನೇ ; ಹರಿಬ್ರಹ್ಮರುದ್ರಾದುಲನೆಲ್ಲನಾನಿ–ಹರಿಬ್ರಹ್ಮ ರುದ್ರ ರೆಲ್ಲರನ್ನೂ ಬಿಟ್ಟು ; ಹರಿಗತ ತತ್ವಾರ್ಥಮುಲ–ಹರಿಯನ್ನು ಕುರಿತ ತತ್ವಾರ್ಥಗಳನ್ನು ಚೆದಿವಿ–ಓದಿ, ಕಲಿತು ; ಶ್ರೀಹರಿ, ವೆಂಕಟೇಶ! ಅನಿ–ಎಂಬುದಾಗಿ ; ಭಜಿಯಿಂಚೆ–ಭಜಿಸಲು ; ವರಭಕ್ತುಲತೋ–ನಿನ್ನ ಶ್ರೇಷ್ಠನಾದ ಭಕ್ತನಲ್ಲಿ; ವಾದಾಡುಚುಂಡೇ–ಹಟಮಾಡುತ್ತಿರುವೆನಲ್ಲ ; ಈ ಜನ್ಮ ವ್ಯರ್ಥವಲ್ಲವೆ !

ತಾತ್ಪರ್ಯ : ಭಕ್ತಿಯಿಲ್ಲದ ನರಜನ್ಮವೇಕೆ ? ಅದು ಭೂಮಿಗೆ ಭಾರವೇ ಸರಿ. ನಾನು ನನ್ನದು ಎಂಬ ಅಹಂಕಾರದ ಕಗ್ಗತ್ತಲನ್ನು ಹೊಕ್ಕು ಮತ್ತೆ ಮತ್ತೆ ಹುಟ್ಟುತ್ತಾ, ನನ್ನ ದೇವರು ನಿನ್ನ ದೇವರು ಎಂದು ಪಕ್ಷಪಾತ ಮಾಡುತ್ತಾ, ಅರ್ಥವಿಲ್ಲದ ತರ್ಕಗಳನ್ನು ಮಾಡುತ್ತಾ ಅಪಾರವಾಗಿ ಪಾಪ ಸಂಗ್ರಹ ಮಾಡಿದ್ದೇನೆ. ಧನ ಧಾನ್ಯ ವೈಭವಗಳೇ ದೈವವೆಂದು ಭಾವಿಸಿ ನನ್ನಂತಹ ಮಾನವರನ್ನೇ ಸ್ತುತಿಸುತ್ತಾ ಜೀವನವನ್ನೆಲ್ಲ ಅಸ್ತವ್ಯಸ್ತಗೊಳಿಸಿಕೊಂಡಿದ್ದೇನೆ. ಸಕಲ ತತ್ವಾರ್ಥಗಳನ್ನು ಕಲಿತು ಶ್ರೀಹರಿ, ವೆಂಕಟೇಶ ಎಂದು ಸ್ತುತಿಸದೆ ಹಟಮಾಡುತ್ತಿರುವೆನಲ್ಲ, ಇಂತಹ ಭಕ್ತಿಯಿಲ್ಲದ ಜೀವನ ಏಕೆ ?

38. ರಾಗ : ಮಲಯ ಮಾರುತ ಆದಿತಾಳ ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಧನ್ಯುಡೆವ್ವಡೋ ದಾಶರಥೇ !

ಅನುಪಲ್ಲವಿ : ಅನ್ಯಮುಂದು ಚಿತ್ತಮುಂದಿಯ್ಯಕ ಬ್ರಹ್ಮಾನಂದಾಮೃತಪಾನಮುಚೇಸೇ ||

ಚರಣ : ವರಮುದ್ದಳ ತಾಳಾದಿ ತಮ್ಮುರ ವೀಣವಾದ್ಯಮುಲ ಚೇರ್ಚುಕೊನಿ
ಸ್ವರ ಶುದ್ಧಮುತೋ ಸುಖಮು ಶ್ರೀವರದವೆಂಕಟೇಶ್ವರುನಿ ಭಜಿಂಚೇ ||

ಅರ್ಥ : ದಾಶರಥೇ–ಶ್ರೀರಾಮಚಂದ್ರ ; ಧನ್ಯುಡು ಎವ್ವಡೋ–ಧನ್ಯರು ಯಾರೋ ; ಅನ್ಯಮುಂದು–ಬೇರೆ ವಿಷಯಗಳಿಗೆ ; ಚಿತ್ತಮು-ಮನಸ್ಸನ್ನು ; ಅಂದಿಯ್ಯಕ-ಕೊಡದೆ ; ಬ್ರಹ್ಮಾನಂದಾಮೃತಪಾನಮು-ಬ್ರಹ್ಮಾನಂದವೆಂಬ ಅಮೃತಪಾನವನ್ನು ; ಚೇಸೇ–ಮಾಡುವ, ಧನ್ಯರು ಯಾರೋ ! ವರ–ಶ್ರೇಷ್ಠವಾದ ; ಮದ್ದಳೆ ತಾಳ, ತಮ್ಮುರ–ತಂಬೂರಿ ; ವೀಣೆಯೇ, ಮೊದಲಾದ, ವಾದ್ಯಮುಲ–ವಾದ್ಯಗಳನ್ನು ; ಚೇರ್ಚುಕೋನಿ–ಸೇರಿಸಿಕೊಂಡು ; ಸ್ವರಶುದ್ಧಮುತೋ–ಸ್ವರಶುದ್ಧವಾಗಿ ; ಸುಖಮು–ಸುಖವಾಗಿ, ಹಿತವಾಗಿ ; ಶ್ರೀ ವರದವೆಂಕಟೇಶ್ವರನನ್ನು ; ಭಜಿಂಚೇ–ಭಜಿಸುವ ಧನ್ಯರು ಯಾರೋ !

ತಾತ್ಪರ್ಯ : ಶ್ರೀರಾಮಚಂದ್ರ, ಅನ್ಯವಿಷಯಗಳಿಗೆ ಮನಸ್ಸು ಕೊಡದೆ ಬ್ರಹ್ಮಾನಂದದ ಅಮೃತಪಾನ ಮಾಡುತ್ತಾ, ತಂಬೂರಿ ವೀಣೆ ಮೊದಲಾದ ವಾದ್ಯಗಳೊಂದಿಗೆ ಸ್ವರಶುದ್ಧವಾಗಿ ಹಾಡುತ್ತಾ ಶ್ರೀವರದ ವೆಂಕಟೇಶ್ವರನನ್ನು ಭಜಿಸುವ ಧನ್ಯರು ಯಾರಿದ್ದಾರೆ !

39. ರಾಗ : ಮಲಯಮಾರುತ ರೂಪಕತಾಳ ಸ್ವಾತಿತಿರುನಾಳ್

ಪಲ್ಲವಿ : ಪದ್ಮನಾಭ ಪಾಲಿತೇಭ ಭುಜಗಾಧಿಪತಲ್ಪ
ವಿಬುಧಪಾಲನ ಲೋಲುಪ ಮಾಮವ ||

ಅನುಪಲ್ಲವಿ : ಛದ್ಮಹೀನ ಗುಣಗಣವಾಸ ಮೃದುಹಾಸ ಹತಕಂಸ
ನಿಜದಾಸಾಮಿತ ಮಂಗಳ ವಿತರಣ ಮಮಹೃದಿ ಪರಿಲಸ

ಚರಣ : ರಾಮಚಂದ್ರ ರವಿ ಸೋಮವಿಲೋಚನ ಖಲ
ಸಾಧನ ರಾಘವ ರಾವಣ ರೀಣ ರೋಷ
ಕಾಮಿತದಾನಲೋಲ ಘನಕೇಶ ಭುವನೇಶ
ಧುತ ದೋಷಾಮರ ಪೋಷಾವನಿಜಾಧವ
ಜಲಧರ ಸಮರುಚಿ ವಿಲಸಿತ
ಕಾಮಪ್ರಭ ನತಕಾಮ ಪ್ರದಚಣ ಸೋಮದ್ಯುತಿಮುಖ ||

2. ಗೋಪಬಾಲ ಕಮಲಾಸನ ಗರ್ವಹರಣ
ಕೌಶಿಕ ಶೌನಕ ನಾರದ ಗೇಯಕೀರ್ತೇ
ತಾಪಸ ಹೃದಾಲಯ ಧೃತಶೈಲ ನತಪಾಲ
ಸುನಿಟಿಲಾಖಿಲಮೂಲ ಖಲ ಪನ್ನಗನರ ಫಣ ವಿರಚಿತ
ಸುನಟನ ರುದ್ರಪ್ರವಿನುತ ಭದ್ರಪ್ರದ ಭವ ಛಿದ್ರ ಪ್ರಶಮನ ||

3. ಸ್ಯಾನಂದೂರಾಲಯ ಶ್ರೇಷ್ಠ ದಿವಾಕರ ಮುನಿ
ಕಾಮಿತ ವಿತರಣ ಪಟುತಮ ನಿರುಪಮ
ಶ್ಯಾಮಳಾಂಗ ಕನಕವಸನ ಬಹುವಾಮಧೃತಧಾಮ
ಹತ ಭೌಮಾದಿವಿರಾಮ ಮುರಶಾಸನ ವಿರಚಯ ಶುಭಮಯಿ ದಿನಮನು ||

ಅರ್ಥ : ಪದ್ಮನಾಭ–ಪದ್ಮನಾಭನೆ ; ಪಾಲಿತೇಭ–ಆನೆಯನ್ನು (ಗಜೇಂದ್ರಮೋಕ್ಷದ ಉಲ್ಲೇಖ) ಪಾಲಿಸಿದವನೆ ; ಭುಜಗಾಧಿಪತಲ್ಪ–ಸರ್ಪವನ್ನು ಹಾಸಿಗೆಯಾಗಿ ಉಳ್ಳವನೆ ; ವಿಬುಧ ಪಾಲನ ಲೋಲುಪ–ಸಜ್ಜನರನ್ನು ಪಾಲಿಸುವುದರಲ್ಲಿ ಆಸಕ್ತನಾದವನೆ ; ಮಾಮವ-ನನ್ನನ್ನು ಕಾಪಾಡು ; ಛದ್ಮಹೀನ ಗುಣಗಣ ವಾಸ–ಕಪಟವಿಲ್ಲದ ಸದ್ಗುಣಗಳ ಸಮೂಹವನ್ನು ತಳೆದವನೆ ; ಮೃದುಹಾಸ–ಮುಗುಳ್ನಗೆಯಿಂದ ಕೂಡಿದವನೆ ; ಹತಕಂಸ–ಕಂಸನನ್ನು ಕೊಂದವನೆ ; ನಿಜದಾಸ–ನಿನ್ನ ಭಕ್ತರಿಗೆ ; ಅಮಿತ ಮಂಗಳ ವಿತರಣ–ಅಪಾರವಾದ ಶುಭಗಳನ್ನು ನೀಡುವವನೆ ; ಮಮಹೃದಿ–ನನ್ನ ಹೃದಯದಲ್ಲಿ ; ಪರಿಲಸ–ವಿಹಾರಮಾಡು.

ರಾಮಚಂದ್ರ, ರವಿ ಸೋಮ ವಿಲೋಚನ–ಸೂರ್ಯಚಂದ್ರರನ್ನೇ ಕಣ್ಣುಗಳಾಗಿ ಉಳ್ಳವನೇ ; ಖಲ ಸಾಧನ–ರಾಕ್ಷಸರನ್ನು ಗೆದ್ದವನೆ ; ರಾಘವ, ರಾವಣರೋಷರೀಣ–ರಾವಣನ ರೋಷವನ್ನು ಸೋರಿಹೋಗುವಂತೆ ಮಾಡಿದವನೆ ; ಕಾಮಿತ ದಾನಲೋಲ–ಅಪೇಕ್ಷಿಸಿದುದನ್ನು ನೀಡುವುದರಲ್ಲಿ ಪ್ರಿಯವುಳ್ಳವನೆ ; ಘನಕೇಶ–ದಟ್ಟವಾದ ಮುಡಿಯವನೆ ; ಭುವನೇಶ–ಜಗತ್ತುಗಳಿಗೆ ಅಧಿಪತಿಯೆ ; ಧುತದೋಷ–ದೋಷಗಳನ್ನು ತೊಳೆದುಕೊಂಡಿರುವವನೆ ; ಅಮರ ಪೋಷ–ದೇವತೆಗಳನ್ನು ಸಲಹುವವನೆ ; ಅವನಿಜಾಧವ–ಸೀತಾಪತಿಯೆ ; ಜಲಧರಸಮ–ಮೋಡಗಳಿಗೆ ಸಮಾನವಾದ ; ರುಚಿವಿಲಸಿತ–ಶ್ಯಾಮಲ ಕಾಂತಿಯಿಂದ ಶೋಭಿಸುವವನೆ ; ಕಾಮಪ್ರಭ–ಮನ್ಮಥನಂತೆ ಪ್ರಕಾಶಮಾನನಾಗಿರುವವನೆ ; ನತ–ಭಕ್ತರ ; ಕಾಮಪ್ರದ–ಅಭೀಷ್ಟಗಳನ್ನು ಪೂರೈಸುವುದರಲ್ಲಿ ; ಚಣ–ಪ್ರಸಿದ್ಧನಾದವನೆ ; ಸೋಮ ದ್ಯುತಿ ಮುಖ–ಚಂದ್ರನಂತೆ ಕಾಂತಿಯುಳ್ಳ ಮುಖದವನೆ ; ಗೋಪಬಾಲ ; ಕಮಲಾಸನ ಗರ್ವಹರಣ–ಬ್ರಹ್ಮನ ಗರ್ವವನ್ನು ಇಳಿಸಿದವನೆ ; ಕೌಶಿಕ–ವಿಶ್ವಾ

ಮಿತ್ರ, ಶೌನಕ, ನಾರದ, ಗೇಯಕೀರ್ತೇ–ಇವರಿಂದ ಹಾಡಲ್ಪಟ್ಟ ಕೀರ್ತಿಯುಳ್ಳವನೆ ; ತಾಪಸ ಹೃದಾಲಯ–ಮುನಿಜನರ ಹೃದಯಗಳಲ್ಲಿ ನೆಲೆಸಿದವನೆ ; ಧೃತಶೈಲ–ಪರ್ವತವನ್ನು ಧರಿಸಿದವನೆ (ಗೋವರ್ಧನ ಪರ್ವತವನ್ನೆತ್ತಿದ ಉಲ್ಲೇಖ) ; ನತಪಾಲ–ಭಕ್ತರನ್ನು ಪಾಲಿಸುವವನೆ ; ಸುನಿಟಿಲ ಸುಂದರವಾದ ಹಣೆಯುಳ್ಳವನೆ ; ಅಖಿಲಮೂಲ–ಸಕಲಕ್ಕೂ ಮೂಲನಾದವನೆ ; ಖಲಪನ್ನಗ ವರ ಫಣ ವಿರಚಿತ–ದುಷ್ಟನಾದ ಕಾಳಿಂಗನಾಗನ ಹೆಡೆಯಮೇಲೆ ; ಸುನಟನ–ನಾಟ್ಯವಾಡಿದವನೆ ; ರುದ್ರಪ್ರವಿನುತ–ರುದ್ರನಿಂದ ಸ್ತುತನಾದವನೆ ; ಭದ್ರಪ್ರದ–ಒಳ್ಳೆಯದು ಉಂಟುಮಾಡುವವನೆ ; ಭವಛಿದ್ರಪ್ರಶಮನ–ಜನ್ಮಾಂತರದ ಸಂಕಟವನ್ನು ಶಮನಗೊಳಿಸುವವನೆ ; ಸ್ಯಾನಂದೂರಾಲಯ–ಸ್ಯಾನಂದೂರಿನಲ್ಲಿ ನೆಲೆಸಿದ ; ಶ್ರೇಷ್ಠ ದಿವಾಕರ ಮುನಿ ಕಾಮಿತ ವಿತರಣ ಪಟು–ದಿವಾಕರ ಮುನಿಯ ಅಭೀಷ್ಟವನ್ನು ನೆರವೇರಿಸುವುದರಲ್ಲಿ ನಿಪುಣನಾದವನೆ ; ನಿರುಪಮ–ಹೋಲಿಕೆಯೇ ಇಲ್ಲದ ; ಶ್ಯಾಮಳಾಂಗ–ನೀಲವರ್ಣದ ದೇಹಕಾಂತಿಯುಳ್ಳವನೆ ; ಕನಕವಸನ–ಚಿನ್ನದ ವಸ್ತ್ರಗಳನ್ನು ಧರಿಸಿದವನೆ ; ಬಹು ವಾಮಧೃತಧಾಮ–? ; ಹತ ಭೌಮಾದಿ ವಿರಾಮ–ಭೌಮಾಸುರನೇ ಮೊದಲಾದವರನ್ನು ನಾಶಮಾಡಿದವನೆ ; ಮುದಶಾಸನ–ಮುದಾಸುರನನ್ನು ಅಂಕೆಯಲ್ಲಿಟ್ಟವನೆ ; ದಿನಮನು–ಅನುದಿನವೂ ; ಮಯಿ ಶುಭಂ ವಿರಚಯ–ನನಗೆ ಶುಭವನ್ನು ಉಂಟುಮಾಡು.

ತಾತ್ಪರ್ಯ : ಗಜೇಂದ್ರನನ್ನು ಸಲಹಿದ, ಸೂರ್ಯಚಂದ್ರರೇ ನೇತ್ರಗಳಾದ, ಕಂಸನನ್ನು ಕೊಂದ, ರಾವಣನ ಗರ್ವವನ್ನು ನಾಶಮಾಡಿದ ಸೀತಾಪತಿಯಾದ ಶ್ರೀರಾಮನೂ ; ಮೋಡದಂತೆ ಶ್ಯಾಮಲನಾದ, ಬ್ರಹ್ಮನ ಗರ್ವವನ್ನಡಗಿಸಿದ, ಗೋವರ್ಧನವನ್ನೆತ್ತಿ ಕಾಳಿಂಗನ ಹೆಡೆಯಮೇಲೆ ನಾಟ್ಯವಾಡಿದ ಕೃಷ್ಣನೂ ; ಮುದ ಭೌಮ ಮೊದಲಾದ ರಕ್ಕಸರನ್ನು ಕೊಂದವನೂ ಆದ ಪದ್ಮನಾಭನನ್ನು ಬೇಡುತ್ತೇನೆ, ನನಗೆ ಅನುದಿನವೂ ಶುಭವುಂಟುಮಾಡಲಿ.

40. ರಾಗ : ಕಮಾಚ್ ಆದಿತಾಳ ವಾಲಾಜಪೇಟೆ ವೆಂಕಟರಮಣ ಭಾಗವತರ್

ಪಲ್ಲವಿ : ಮನಸಾ ರಾಮುನಿ ಮರವಕವೇ ಓ ||

ಅನುಪಲ್ಲವಿ : ಮುನುಪಟಿ ದುರ್ಗುಣಮುಲನು ವಿಡಚಿ ಅತಿ
ವಿನಯ ವಿಧೇಯುಡವೈ ವಿವೇಕಮುತೋ ||

ಚರಣ : ಭಕ್ತಧಾರುಡು ಪರಮಪಾವನುಡು
ಭಕ್ತವತ್ಸಲುಡು ಪರಮಾತ್ಮುಡು
ಮುಕ್ತಿದಾಯಕುಡು ಮೋಹನರೂಪುಡು
ಭಕ್ತಿ ಲೇನಿ ಮಾನವುಲಕು ವಿಮುಖುಡು ||

2. ದಶರಥ ಬಾಲುಡು ದಾನವ ಕಾಲುಡು
ದಶಮುಖ ದೈತ್ಯ ಸಂಹಾರುಡು ಧೀರುಡು
ವಿಶದಮುಗ ಭಕ್ತ ಚಿತ್ತ ವಿಹಾರುಡು
ರವಿಕುಲ ವೇಗನೇ ರಕ್ಷಿಂಚುವಾಡು ||

3. ಶ್ಯಾಮಲ ಮೇಘ ಸುಂದರುಡನಿ ಶೂರುಡು
ರಾಮದಾಸ ಮಾನಸ ಸಂಚಾರುಡು

ರಾಮಚಂದ್ರ ಪುರಾಧಾರುಡು ವೆಂಕಟ
ರಮಣ ಭಾಗವತ ವರದುಡು ಗಾನು ||

ಅರ್ಥ : ಓ ಮನಸಾ–ಎಲೆ ಮನಸ್ಸೇ ; ರಾಮುನಿ–ರಾಮನನ್ನು ; ಮರವಕವೇ–ಮರೆಯಬೇಡ ; ಮುನುಪಟಿ–ಹಿಂದಿನ ; ದುರ್ಗುಣಮುಲನು ವಿಡಚಿ–ದುರ್ಗುಣಗಳೆಲ್ಲವನ್ನೂ ಬಿಟ್ಟು ; ಅತಿವಿನಯ ವಿಧೇಯುಡ ವೈ–ಅತ್ಯಂತ ವಿನಯ ವಿಧೇಯತೆಗಳಿಂದ ; ವಿವೇಕಮುತೋ–ವಿವೇಕದಿಂದ ರಾಮನನ್ನು ಮರೆಯದಿರು. ಭಕ್ತಧಾರುಡು–ಅವನು ಭಕ್ತರನ್ನು ಉದ್ಧರಿಸುವವನು, ಪರಮಪಾವನನು, ಭಕ್ತ ವತ್ಸಲನು, ಪರಮಾತ್ಮನು, ಮುಕ್ತಿದಾಯಕನು, ಮೋಹನ ರೂಪನು ; ಭಕ್ತಿಲೇನಿ–ಭಕ್ತಿಯಿಲ್ಲದ ; ಮಾನವುಲಕು–ಮಾನವರಿಗೆ ; ವಿಮುಖುಡು–ವಿಮುಖನಾಗುವವನು ; ದಶರಥನ ಮಗನು, ರಾಕ್ಷಸರಿಗೆ ಯಮನಂತಿರುವವನು ; ದಶಮುಖ–ರಾವಣ, ದೈತ್ಯ ಸಂಹಾರುಡು–ರಾಕ್ಷಸರನ್ನು ಕೊಂದವನು, ಧೀರನು, ಭಕ್ತ ಚಿತ್ತ–ಭಕ್ತರ ಹೃದಯಗಳಲ್ಲಿ ; ವಿಶದಮುಗಾ–ವಿಸ್ತಾರವಾಗಿ ; ವಿಹಾರುಡು–ವಿಹರಿಸುವವನು ; ರವಿಕುಲ–ಸೂರ್ಯವಂಶಕ್ಕೆ ಸೇರಿದವನು ; ವೇಗವೇ–ಬಹುಬೇಗನೆ ; ರಕ್ಷಿಂಚುವಾಡು–ಕಾಪಾಡುವವನು ; ಶ್ಯಾಮಲ ಮೇಘ ಸುಂದರುಡು–ಮೇಘಗಳಂತೆ ಶ್ಯಾಮಲವರ್ಣನೂ ಸುಂದರನೂ ಆದವನು ; ರಾಮದಾಸ ಮಾನಸ ಸಂಚಾರುಡು–ರಾಮದಾಸನ ಮನಸ್ಸಿನಲ್ಲಿ ಸಂಚರಿಸುವವನು ; ರಾಮಚಂದ್ರ ಪುರಾಧಾರುಡು–ರಾಮಚಂದ್ರಪುರದಲ್ಲಿ ನೆಲೆಸಿದ ವೆಂಕಟರಮಣ ಭಾಗವತನಿಗೆ, ವರದುಡು–ವರದನಾದವನು ; ಇಂಥವನನ್ನು, ಎಲೆ ಮನಸ್ಸೆ ಮರೆಯಬೇಡ.

41. ರಾಗ : ಕಮಾಚ್ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಸಾರಸ ಸಮ ಮುಖ ಪರಮುವ ಮಾಂ
ಸನಕ ಮುಖವಿನುತ ||

ಅನುಪಲ್ಲವಿ : ಪಾರರಹಿತ ಭವ ಘೋರ ಕಲುಷತರ
ವಾರಿ ರಾಶಿ ಪರಿಪತಿತ ಮಯಿ ಸದಯ ||

ಚರಣ : ಕುಟಿಲ ಭುಜಗವರ ಫಕ್ಕಣತ ಸುರುಚಿರ ನಟನದೇವ
ಗೋಕುಲ ಕಲಶ ಪಯೋನಿಧಿ ಪೂರ್ಣ ಶಶಾಂಕ
ನಿಟಿಲ ತಟ ಲಸಿತ ಮೃಗಮದ ತಿಲಕ ಸು
ನಿಲವಾರಿದ ಶರೀರ ಯದುತಿಲಕ ||

2. ಮದನ ಜನಕ ನವ ಮಣಿಮಯ ಸುಲಲಿತ ಹಾರ ಶೌರೇ
ಮಂಜುಳ ವಚನ ವಿಮೋಹಿತ ವಿಬುಧ ನಿಕಾಯ
ಪದ ನತ ನಿಖಿಲ ಮನೋರಥದಾಯಕ
ಪಾಪ ಜಾಲ ಗಿರಿ ಕುಲಿಶ ಸಾರಸ ತರ ||

3. ಸಕಲ ಭುವನ ಭಯಹರಣ ಪಟುಚರಿತ ಜಾಲಮೇಯ
ಸಂತತಂ ವಿಹರ ಮೇ ಮನಸಿಹ ದಯಾಳೋ
ಪ್ರಕಟ ಬಲ ದನುಜ ಭೇದನ ಲೋಲುಪ
ಪದ್ಮನಾಭ ಭುಜಗಾಧಿಪತಿ ಶಯನ ||

ಅರ್ಥ : ಸನಕಮುಖವಿನುತ–ಸನಕನೇ ಮೊದಲಾದವರಿಂದ ನುತಿಗೊಂಡ ; ಸಾರಸಸಮುಮುಖ–ತಾವರೆ ಯಂತಹ ಮುಖವುಳ್ಳವನೆ ; ಪರಂ ಅವ ಮಾಂ–ನನ್ನನ್ನು ರಕ್ಷಿಸು ; ಪಾರರಹಿತ–ಕೊನೆಯೇ ಇಲ್ಲದ ; ಭವ ಘೋರ ಕಲುಷತರ ವಾರಿ ರಾಶಿ–ಹುಟ್ಟುಸಾವೆಂಬ ಭಯಂಕರವಾದ ದೋಷ ಪೂರ್ಣವಾದ ಸಾಗರದಲ್ಲಿ ; ಪರಿಪತಿತ–ಬಿದ್ದು ಹೋಗಿರುವ ; ಮಯಿ–ನನ್ನಮೇಲೆ ; ಸದಯ–ದಯಾಪೂರ್ಣನೆ, ಕರುಣೆ ತೋರು.

ಕುಟಿಲ–ದುಷ್ಟನಾದ ; ಭುಜಗವರ ಫಣಕೃತನಟನ–ಸರ್ಪನ (ಕಾಳಿಂಗ ಮರ್ದನದ ಉಲ್ಲೇಖ) ಹೆಡೆಯ ಮೇಲೆ ನಾಟ್ಯವಾಡಿದವನೆ ; ದೇವ, ಗೋಕುಲ ಕಲಶ–ಗೋಕುಲಕ್ಕೆ ಕಲಶದಂತೆ ಶ್ರೇಷ್ಠನಾದವನೆ ; ಪಯೋನಿಧಿ ಪೂರ್ಣ ಶಶಾಂಕ–ಕ್ಷೀರ ಸಾಗರದಲ್ಲಿ ಮೂಡಿದ ಪೂರ್ಣ ಚಂದ್ರನಂತಿರುವವನೇ ; ನಿಟಿಲ ತಟ–ಹಣೆಯಲ್ಲಿ ; ಲಸಿತ–ಹೊಳೆಯುವ ; ಮೃಗ ಮದ ತಿಲಕ–ಕಸ್ತೂರಿಯ ತಿಲಕವುಳ್ಳವನೆ ; ಸುನಿಲವಾರಿದ ಶರೀರ–ನೀಲವರ್ಣದ ಮೇಘ ದಂತೆ ಮೈಬಣ್ಣವುಳ್ಳವನೆ ; ಯದು ತಿಲಕ–ಯದುವಂಶಕ್ಕೆ ತಿಲಕವಾಗಿರುವವನೆ ; ಮದನ ಜನಕ–ಮನ್ಮಥನ ತಂದೆಯಾದವನೆ ; ನವ ಮಣಿಮಯ ಸುಲಲಿತಹಾರ ಶೌರೇ–ಮನೋಹರ ವಾದ ರತ್ನಖಚಿತ ಹಾರವನ್ನು ಧರಿಸಿದ ಶೌರಿಯೇ ; ಮಂಜುಳವಚನ ವಿಮೋಹಿತವಿಬುಧ ನಿಕಾಯ–ವಿದ್ವಾಂಸರು ಮಧುರವಾದ ಮಾತುಗಳಿಂದ ಸ್ತುತಿಸುತ್ತಿರಲು ಅದರಿಂದ ಮೋಹಿತ ನಾದವನೆ ; ಪದನತ–ಪಾದಗಳಿಗೆ ನಮಿಸಿದವರ ; ನಿಖಿಲ ಮನೋರಥ ದಾಯಕ–ಸಕಲ ಅಭೀಷ್ಟಗಳನ್ನು ನೀಡುವವನೆ ; ಪಾಪಜಾಲಗಿರಿಕುಲಿಶ–ಪಾಪ ಜಾಲವೆಂಬ ಪರ್ವತಕ್ಕೆ ವಜ್ರಾಯುಧದಂತಿರುವವನೆ ; ಸಕಲಭುವನಭಯಹರಣಪಟುಚರಿತ–ಸಕಲಜಗತ್ತುಗಳ ಭಯ ವನ್ನು ಪರಿಹರಿಸುವುದರಲ್ಲಿ ಕುಶಲವಾದ ಚಾರಿತ್ರ್ಯವುಳ್ಳವನೆ ; . ಜಾಲಮೇಯ–?;ಸಂತತಂ– ಯಾವಾಗಲೂ : ಮೇ ಮನಸಿ ಇಹ ದಯಾಳೋ ವಿಹರ–ಈ ನನ್ನ ಮನಸ್ಸಿನಲ್ಲಿ ವಿಹರಿಸು ; ಪ್ರಕಟಬಲದನುಜ–ಬಲಶಾಲಿಗಳಾದ ರಾಕ್ಷಸರನ್ನು ; ಭೇದನ ಲೋಲುಪ–ನಾಶಮಾಡುವುದ ರಲ್ಲಿ ಆಸಕ್ತನಾದವನೆ ; ಭುಜಗಾಧಿಪತಿ ಶಯನ–ಹಾವು ಹಾಸಿಗೆಯವನೆ ; ಪದ್ಮನಾಭನೆ ನನ್ನನ್ನು ರಕ್ಷಿಸು.

ತಾತ್ಪರ್ಯ : ಸನಕಸನಂದನಾದಿಗಳಿಂದ ಸ್ತುತನಾದ ಪದ್ಮನಾಭನೆ, ಮೊದಲು ಕೊನೆಗಳಿಲ್ಲದ ಹುಟ್ಟು ಸಾವೆಂಬ ಸಾಗರದಲ್ಲಿ ಬಿದ್ದು ಹೋಗಿರುವ ನನ್ನನ್ನು ರಕ್ಷಿಸು. ಕಾಳಿಂಗನಾಗನ ಹೆಡೆಯಮೇಲೆ ಕುಣಿದವನೆ, ಕಸ್ತೂರೀತಿಲಕದಿಂದಲೂ ಮೇಘದಂತೆ, ಶ್ಯಾಮಲ ವರ್ಣದಿಂದಲೂ, ರತ್ನಖಚಿತ ಹಾರಗಳಿಂದಲೂ ಮನೋಹರನಾದವನೇ, ಮನ್ಮಥನ ತಂದೆಯೆ, ಪಾಪಗಳೆಂಬ ಪರ್ವತಕ್ಕೆ ವಜ್ರದಂತಿರುವವನೇ, ಜಗತ್ತುಗಳ ಭಯವನ್ನು ನಿವಾರಿಸುವುದರಲ್ಲಿ ನಿಪುಣನಾದವನೆ ನನ್ನನ್ನು ರಕ್ಷಿಸು.

42 ರಾಗ : ಕಮಾಚ್ ರೂಪಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಸಂತಾನ ಗೋಪಾಲಕೃಷ್ಣಮುಪಾಸ್ಮಹೇ ಶ್ರೀ ||

ಅನುಪಲ್ಲವಿ : ಸಂತಾನ ಸೌಭಾಗ್ಯ ವಿತರಣ ನಿಪುಣತರಂ
ಸಂತತಂ ಸದ್ಗುರುಗುಹ ಸನ್ನುತಂ ಸಾರಸಪದಂ ||

ಚರಣ : ಶ್ರೀ ರುಕ್ಮಿಣೀ ಸತ್ಯಭಾಮಾ ಸಮೇತಂ
ಅರ್ಜುನ ಪ್ರೇಮಾಸ್ಪದಂ ಆಶ್ರಿತಜನ ಫಲದಂ
ನರ್ತನ ಮುರಳೀಧರಂ ನತ ಶುಕಸನಕ ನಾರದಂ
ನೀರಜಾಸನಾದಿ ನುತಂ ನೀಲಮೇಘ ಜಿತಗಾತ್ರಂ ||

ಅರ್ಥ : ಸಂತಾನ ಗೋಪಾಲಕೃಷ್ಣನನ್ನು ; ಉಪಾಸ್ಮಹೇ–ಪೂಜಿಸುತ್ತೇನೆ ; ಸಂತಾನ ಸೌಭಾಗ್ಯ ವಿತರಣ ನಿಪುಣ ತರಂ–ಸಂತಾನ ಸೌಭಾಗ್ಯವನ್ನು ನೀಡುವುದರಲ್ಲಿ ನಿಪುಣನಾದವನು ; ಸಂತತಂ–ಸದಾ ; ಸದ್ಗುರುಗುಹ ಸನ್ನುತಂ–ಗುರುಗುಹನಿಂದ ಸ್ತುತನಾದವನು ; ಸಾರಸಪದಂ–ತಾವರೆಯಂಥ ಪಾದಗಳುಳ್ಳವನು ; ಶ್ರೀ ರುಕ್ಮಿಣೀ ಸತ್ಯಭಾಮಾ ಸಮೇತನಾದವನು ; ಅರ್ಜುನ ಪ್ರೇಮಾಸ್ಪದ –ಅರ್ಜುನನ ಪ್ರೀತಿಗೆ ಅವಕಾಶಕೊಟ್ಟವನು ; ಆಶ್ರಿತಜನ ಫಲದಂ–ಆಶ್ರಯಬೇಡಿದ ಜನರಿಗೆ ಫಲ ನೀಯುವವನು ; ನರ್ತನ ಮುರಳೀಧರಂ–ನರ್ತಿಸುವ ಮುರಳೀಧರನು ; ನತ ಶುಕ ಸನಕ ನಾರದಂ–ಶುಕ ಸನಕ ನಾರದ ಮೊದಲಾದವರು ನಮಸ್ಕರಿಸಿದವನು ; ನೀರಜಾಸನಾದಿನುತಂ–ಬ್ರಹ್ಮನೇ ಮೊದಲಾದವರಿಂದ ಸ್ತುತನಾದವನು ; ನೀಲಮೇಘ ಜಿತ ಗಾತ್ರಂ–ನೀಲಿಯ ಮೇಘ ವರ್ಣವನ್ನೆ ಸೋಲಿಸಿದ ಶರೀರವುಳ್ಳವನು-ಇಂತಹ ಸಂತಾನ ಗೋಪಾಲಕೃಷ್ಣನನ್ನು ಪೂಜಿಸುತ್ತೇನೆ.

43. ರಾಗ : ಹುಸೇನಿ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಶ್ರೀರಾಮಚಂದ್ರ ಪರಿಲಸ ಮಮಹೃದಿ
ಪಾರಾವಾರ ಗಂಭೀರ ಶ್ರೀರಾಮ

ಅನುಪಲ್ಲವಿ : ಕರ ಶೋಭಿತ ಖರ ಭೇದನ ಶರಕಾರ್ಮುಕ ಕರುಣಾ
ರಸಾರಾಜಿತ ನಯನ ||

ಚರಣ : ಕೌಶಿಕಾದಿಮುನಿ ಸನ್ನುತ ಮೃದು ಚರಣಾದ್ಭುತ ದೇಹರುಚೇ
ಕಮನೀಯ ಗುಣಗಣ ಸಕಲ ಭುವನಶರಣ
ನಾಶಯಾಂಘ್ರಿ ವಿನತಾರ್ತಿಮಯೇ ನಿಜ
ಕೇಶಪಾಶಜಿತ ಜಲದ ಮನೋಹರ ||

2. ಮಾರಕೋಟಿ ಮದಭೇದ ತನು ಸುಷಮ ಕುರುಮೇ ಕುಶಲಂ
ಮನುವಂಶ ತಿಲಕ ನತ ನಿಕರ ಪರಮ ಸುಗಮ
ಪಾರಿಜಾತ ಸುಮವಾಸಿತ ಚಿಕುರ
ಪಾರ್ವಣೇಂದು ಸಮವದನ ದಯಾಕರ ||

3. ಜಾನಕೀ ಹೃದಯ ಮೋಹನ ವಿಲಸಿತ ಅಂಬುಜನಾಭವಿಭೋ
ಜಗದೀಶ ಜಲಜಭವ ವಿಬುಧ ಪರಮವಿನುತ ಹರೇ
ಭಾನು ಕುಲಜ ದಶವದನ ನಿಷೂದನ
ವಾನರಾದಿ ಪರಿವೇಷ್ಟಿತ ಪಾವನ ||

ಅರ್ಥ : ಶ್ರೀರಾಮಚಂದ್ರನೆ, ಮಮಹೃದಿ–ನನ್ನ ಹೃದಯದಲ್ಲಿ ; ಪರಿಲಸ–ಪ್ರಕಾಶಿಸು ; ಪಾರಾವಾರ ಗಂಭೀರ-ಸಮುದ್ರದಂತೆ ಗಂಭೀರವಾದವನೆ, ಶ್ರೀರಾಮ ; ಖರಭೇದನ–ಖರನನ್ನು ಕೊಂದ ; ಶರ

ಕಾರ್ಮುಕ-ಬಾಣವೂ ಬಿಲ್ಲೂ; ಕರಶೋಭಿತ-ಕೈಯಲ್ಲಿ ಶೋಭಿಸಿರುವವನೆ; ಕರುಣಾರಸರಾಜಿತ ನಯನ-ಕಣ್ಣುಗಳಲ್ಲಿ ಕರುಣೆ ತುಳುಕುತ್ತಿರುವವನೆ ; ಕೌಶಿಕಾದಿ-ವಿಶ್ವಾಮಿತ್ರನೇ ಮೊದಲಾದ ; ಮುನಿಸನ್ನುತ-ಮುನಿಗಳಿಂದ ಸ್ತುತಿಸಲ್ಪಟ್ಟವನೆ ; ಮೃದುಚರಣ-ಮೃದುವಾದ ಪಾದಗಳುಳ್ಳವನೆ ; ಅದ್ಭುತ ದೇಹರುಚೇ-ಅದ್ಭುತವಾದ ದೇಹಕಾಂತಿಯುಳ್ಳವನೆ ; ಕಮನೀಯ-ಮನೋಹರವಾದ ; ಗುಣಗಣ-ಗುಣಗಳು ತುಂಬಿದವನೆ ; ಸಕಲ ಭುವನಶರಣ-ಸಕಲ ಲೋಕಗಳಿಗೂ ಆಶ್ರಯನೆ ; ಅಂಘ್ರಿವಿನತ-ನಿನ್ನ ಪಾದಗಳಿಗೆ ನಮಿಸಿರುವ ; ಮಯಿ-ನನ್ನಲ್ಲಿರುವ ; ಆರ್ತಿ-ಸಂಕಟವನ್ನು ; ನಾಶಯ-ನಾಶಮಾಡು ; ಜಿತಜಲದ-ಮೋಡವನ್ನು ಮೀರಿಸಿರುವ ; ಮನೋಹರವಾದ ; ನಿಜ ಕೇಶಪಾಶ-ತಲೆಗೂದಲುಳ್ಳವನೆ ; ಮಾರ ಕೋಟಿ ಮದಭೇದ-ಕೋಟಿಮನ್ಮಥರ ಅಹಂಕಾರ ವನ್ನು ಮುರಿಯುವ ; ತನು ಸುಷಮ-ಮನೋಹರವಾದ ದೇಹವುಳ್ಳವನೆ ; ಮೇ ಕುಶಲಂ ಕುರು-ನನಗೆ ಒಳ್ಳೆಯದು ಮಾಡು ; ಮನುವಂಶತಿಲಕ-ಮನುವಂಶದಲ್ಲಿ ಶ್ರೇಷ್ಠನಾದವನೆ ; ನತನಿಕರ ಪರಮ ಸುಗಮ-ಶರಣಾಗತರಾದವರನ್ನು ಶ್ರೇಷ್ಠವಾದ ಗತಿಗೆ ಕೊಂಡೊಯ್ಯುವವನೆ ; ಪಾರಿಜಾತ ಸುಮವಾಸಿತ-ಪಾರಿಜಾತ ಹೂವುಗಳ ವಾಸನೆ ಕಟ್ಟಿದ ; ಚಿಕುರ-ತಲೆಗೂದಲುಳ್ಳ ವನೆ ; ಪಾರ್ವಣೇಂದು ಸಮ ವದನ-ಹುಣ್ಣಿಮೆಯ ಚಂದ್ರನಿಗೆ ಸಮಾನವಾದ ಕಾಂತಿಯುಳ್ಳ ಮುಖದವನೆ ; ದಯಾಕರ-ಕರುಣಾಮಯನೆ ; ಜಾನಕೀ ಹೃದಯ ಮೋಹನ-ಜಾನಕಿಯ ಹೃದಯಕ್ಕೆ ಮೋಹಕನಾದವನೆ ; ವಿಲಸಿತ-ಅರಳಿದ ; ಅಂಬುಜನಾಭವಿಭೋ-ತಾವರೆಯನು ನಾಭಿಯಲ್ಲಿ ಉಳ್ಳ ಪ್ರಭುವೇ ; ಜಗದೀಶ, ಜಲಜಭವ-ಬ್ರಹ್ಮ, ಮೊದಲಾದ ವಿಬುಧ-ದೇವತೆ ಗಳಿಂದ ; ಪರಮ ವಿನುತ ಹರೇ-ಸ್ತುತನಾದ ಹರಿಯೇ ; ಭಾನು ಕುಲಜ-ಸೂರ್ಯವಂಶದಲ್ಲಿ ಜನಿಸಿದವನೆ ; ದಶವದನ ನಿಷೂದನ-ರಾವಣನನ್ನು ಕೊಂದವನೇ ; ವಾನರಾದಿ ಪರಿವೇಷ್ಟಿತ-ವಾನರ ಮುಖ್ಯರಿಂದ ಸುತ್ತುವರಿದವನೇ, ಪಾವನನೇ, ಶ್ರೀರಾಮಚಂದ್ರ, ನನ್ನ ಹೃದಯದಲ್ಲಿ ಪ್ರಕಾಶಿಸು.

ತಾತ್ಪರ್ಯ : ಖರನನ್ನು ಸಂಹರಿಸಿದ ಶರಕಾರ್ಮುಕಗಳನ್ನು ಹಿಡಿದ ಶ್ರೀರಾಮಚಂದ್ರ, ನನ್ನ ಹೃದಯದಲ್ಲಿ ಶೋಭಿಸು. ಸಕಲ ಲೋಕಗಳಿಗೆ ಆಶ್ರಯನಾದ, ಕೋಟಿಮನ್ಮಥರ ಗರ್ವವನ್ನು ಇಂಗಿಸಿದ, ಮನುವಂಶ ತಿಲಕನಾದ, ಪೂರ್ಣಿಮೆಯ ಚಂದ್ರನಂಥ ಮುಖವುಳ್ಳ, ಜಾನಕಿಯ ಹೃದಯಕ್ಕೆ ಸಂತೋಷವುಂಟುಮಾಡುವ ಪ್ರಭುವೇ, ನನ್ನ ಹೃದಯದಲ್ಲಿ ಪ್ರಕಾಶಿಸು.

44. ರಾಗ : ಹುಸೇನಿ ಆದಿತಾಳ ತ್ಯಾಗರಾಜರು

ಪಲ್ಲವಿ : ರಾಮ ನಿನ್ನೆ ನಮ್ಮಿನಾನು ನಿಜಮುಗ ಸೀತಾ ||

ಅನುಪಲ್ಲವಿ : ಕಾಮಜನಕ ಕಮನೀಯವದನ ನನು ಕಾವವೇ ಕಾರುಣ್ಯ ಜಲಧೇ ||

ಚರಣ : ಸಾರ ಸಾಮಾದಿ ವೇದಸಾರ ಸಂತತ ಬುಧ ವಿಹಾರ ರಾಜಿತ ಮುಕ್ತಾ
ಹಾರ ಕನಕ ಕೇಯೂರಧರ ಸುಗುಣ-ಪಾರಾವಾರ ಸುರಾರಾಧಿತ ಪದ ||

2. ಧೀರ ಸುಜನ ಹೃತ್ಪಂಜರ-ಕೀರ ನೀ ಪದಭಕ್ತಿಮಾಕೀರ ಮದನ ಸುಂದರಾ
ಕಾರ ದನುಜ ಸಂಹಾರ ದುಷ್ಟ ಜನ ದೂರ ರಘುಕುಲೋದ್ಧಾರೋದಾರ ||

3. ರಾಜ ರಾಜ ವಂದಿತ ಭೂಜಾನಾಯಕ ಸುರಸಮಾಜ ಶ್ರೀಕರ ತ್ಯಾಗ
ರಾಜ ಮಾನಸ ಸರೋಜ ಕುಸುಮ ದಿನ ರಾಜ ಪಂಕ್ತಿ ರಥರಾಜ ತನಯ ಶ್ರೀ ||

ಅರ್ಥ : ರಾಮ, ನಿಜಮುಗ–ನಿಜವಾಗಿಯೂ ; ನಿನ್ನೆ ನಮ್ಮಿನಾನು–ನಿನ್ನನ್ನೇ ನಂಬಿದ್ದೇನೆ ; ಕಾಮ ಜನಕ–ಮನ್ಮಥನ ತಂದೆಯೆ ; ಕಮನೀಯ ವದನ–ಮನೋಹರವಾದ ಮುಖವುಳ್ಳವನೆ ; ಕರುಣಾಜಲಧೇ–ಕರುಣೆಯ ಸಾಗರವಾಗಿರುವವನೆ ; ನನು ಕಾವವೇ–ನನ್ನನ್ನು ಕಾಪಾಡಯ್ಯ ; ಸಾರ ಸಾಮಾದಿವೇದಸಾರ–ಸಾರವತ್ತಾದ ಸಾಮವೇ ಮೊದಲಾದ ವೇದಗಳ ಸಾರರೂಪನಾದವನೆ ; ಸಂತತ ಬುಧವಿಹಾರ–ಯಾವಾಗಲೂ ವಿದ್ವಾಂಸರ (ಮನಸ್ಸಿನಲ್ಲಿ) ವಿಹರಿಸುವವನೆ ; ರಾಜಿತ ಮುಕ್ತಾಹಾರ–ಮುತ್ತಿನ ಹಾರಗಳಿಂದ ಅಲಂಕೃತನಾದವನೆ ; ಕನಕ ಕೇಯೂರಧರ–ಚಿನ್ನದ ಕೇಯೂರಗಳನ್ನು ಧರಿಸಿದವನೆ ; ಸುಗುಣಪಾರಾವಾರ–ಸದ್ಗುಣಗಳ ಸಾಗರನಾದವನೆ ; ಸುರಾರಾಧಿತ ಪದ–ದೇವತೆಗಳಿಂದ ಆರಾಧಿಸಲ್ಪಟ್ಟ ಪಾದಗಳುಳ್ಳವನೆ ; ಧೀರನೆ, ಸುಜನ–ಸಜ್ಜನರ ; ಹೃತ್ಪಂಜರ ಕೀರ–ಹೃದಯವೆಂಬ ಪಂಜರದಲ್ಲಿರುವ ಗಿಣಿಯೆ ; ನೀ ಪದ ಭಕ್ತಿ–ನಿನ್ನ ಪಾದಕಮಲಗಳ ಮೇಲೆ ಭಕ್ತಿಯನ್ನು ; ಮಾಕೀರ–ನನಗೆ ನೀಡಯ್ಯ ; ಮದನ ಸುಂದರಾಕಾರನೆ, ದನುಜಸಂಹಾರನೆ, ದುಷ್ಟಜನರಿಗೆ ದೂರನಾದವನೆ ; ರಘುಕುಲವನ್ನು ಉದ್ಧಾರಮಾಡಿದವನೆ, ಉದಾರನೆ ನಿನ್ನನ್ನೆ ನಂಬಿದ್ದೇನೆ.

45. ರಾಗ : ಹುಸೇನಿ ಆದಿತಾಳ ರಾಮನಾಡ್ ಶ್ರೀನಿವಾಸ ಅಯ್ಯಂಗಾರ್

ಪಲ್ಲವಿ : ಶ್ರೀ ರಘುಕುಲನಿಧಿಂ ಶ್ರಿತಜನ ಪರಿಪಾಲಂ
ಚಿಂತಯಾಮ್ಯಹಂ ಸಂತತಂ ಶ್ರೀರಾಮಂ ||

ಅನುಪಲ್ಲವಿ : ನೀರಜದಳನೇತ್ರಂ ನಿರುಪಮ ಸುಚರಿತ್ರಂ
ನಿಖಿಲ ಭುವನ ಪವಿತ್ರಂ–ನಿಜಶ್ಯಾಮಲಗಾತ್ರಂ||

ಚರಣ : ದಶರಥ ರಾಜಕುಮಾರಂ–ದಶಮುಖರಿಪು ಸಂಹಾರಂ
ಧರಜಾಸುಮನೋಹರಂ–ತಾಪತ್ರಯ ಹರಂ
ಪಶುಪತಿ ಹೃದಯ ವಿಹಾರಂ–ಪರಮ ದಯಾಕರ ವರಂ
ಪಾಕಾರಿ ವಿನುತಂ ಪದಂ–ಪತಿ ಶ್ರೀನಿವಾಸೇಶ್ವರಂ

ಅರ್ಥ : ಶ್ರೀ ರಘುಕುಲ ನಿಧಿಂ–ರಘುವಂಶಕ್ಕೆ ನಿಧಿಯಂತಿರುವ ; ಶ್ರಿತಜನ ಪರಿಪಾಲಂ–ಆಶ್ರಿತ ಜನರನ್ನು ರಕ್ಷಿಸುವ ; ಶ್ರೀರಾಮಂ–ಶ್ರೀರಾಮನನ್ನು ; ಸಂತತಂ–ಸದಾ ; ಅಹಂ ಚಿಂತಯಾಮಿ–ನಾನು ಧ್ಯಾನಿಸುತ್ತೇನೆ ; ನೀರಜದಳನೇತ್ರಂ–ತಾವರೆಯ ದಳದಂತೆ ಕಣ್ಣುಳ್ಳ ; ನಿರುಪಮ–ಹೋಲಿಕೆಯೇ ಇಲ್ಲದ ; ಸುಚರಿತ್ರಂ–ಶ್ರೇಷ್ಠವಾದ ಚಾರಿತ್ರ್ಯವುಳ್ಳ ; ನಿಖಿಲ ಭುವನ ಪವಿತ್ರಂ–ಸಕಲ ಲೋಕಗಳಿಗೂ ಪವಿತ್ರನಾದ ; ನಿಜಶ್ಯಾಮಲಗಾತ್ರಂ– ಶ್ಯಾಮಲವರ್ಣದ ದೇಹವುಳ್ಳ ; ದಶರಥ ರಾಜಕುಮಾರನಾದ ; ಶತ್ರುವಾದ ರಾವಣನನ್ನು ಸಂಹರಿಸಿದ ; ಧರಜಾಸುಮನೋಹರಂ–ಸೀತೆಯ ಮನೋಹರನಾದ ; ತಾಪತ್ರಯಗಳನ್ನು ಪರಿಹರಿಸುವ ; ಪಶುಪತಿ–ಈಶ್ವರನ ; ಹೃದಯ ವಿಹಾರಂ–ಹೃದಯದಲ್ಲಿ ಸಂಚರಿಸುವ ; ಪರಮ ದಯಾಕರನಾದ ; ಶ್ರೇಷ್ಠನಾದ ; ಪಾಕಾರಿ–ಇಂದ್ರನಿಂದ ; ವಿನುತ ಪದಂ–ಸ್ತುತಿಸಲ್ಪಟ್ಟ ಪಾದಗಳುಳ್ಳ ; ಪತಿ ಶ್ರೀನಿವಾಸೇಶ್ವರಂ–ಒಡೆಯನಾದ ಶ್ರೀನಿವಾಸಪ್ರಭು (ಶ್ರೀನಿವಾಸ ಎಂಬುದು ಅಂಕಿತ)ವನ್ನು ಸದಾ ಚಿಂತಿಸುತ್ತೇನೆ.

ತಾತ್ಪರ್ಯ : ರಘುಕುಲ ನಿಧಿಯೂ, ಶ್ಯಾಮಲ ದೇಹನೂ, ಹೋಲಿಕೆಗೆ ಮೀರಿದ ಸಚ್ಚರಿತ್ರವುಳ್ಳವನೂ ಆದ ಶ್ರೀ ರಾಮಚಂದ್ರನನ್ನು ಸದಾ ಮನಸ್ಸಿನಲ್ಲಿ ಧ್ಯಾನಿಸುತ್ತೇನೆ.

46. ರಾಗ : ನಾದನಾಮಕ್ರಿಯಾ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಜಗದೀಶ ಪಂಚಶರ ಸೂದನ ನಿಗಮಾಗಮವೇದ್ಯ ಪರಿಪಾಲಯ ಮಾಂ||

ಚರಣ : 1. ಯೋಗಿಜಾತ ಹೃದಯಾಬ್ಜ ಸದನಾದ್ಭುತ ನಾಗಭೂಷಣ ಪರಿಪಾಲಯ ಮಾಂ||
2. ಪಾದವಿನತ ಭವ ಖೇದದಲನ ಚರಣ-ಸಾಧುಸೇವಿತ ಪರಿಪಾಲಯ ಮಾಂ||
3. ಪುರಜಲದ ಪವನ ಪುರಂದರಾದಿ ಸುಪೂಜಿತ ಚರಣ ಪರಿಪಾಲಯ ಮಾಂ||
4. ಗಿರಿಜಾಸುತ ಹೃದಯ ಕುವಲಯ ಶಶಾಂಕ ಕರುಣಾವಾಸ ಪರಿಪಾಲಯ ಮಾಂ||
5. ಜಲಜನಾಭ ಪದನಳಿನ ಭಜನರತಾಖಿಲ ಶುಭದ ಪರಿಪಾಲಯ ಮಾಂ||

ಅರ್ಥ : ಜಗದೀಶ-ಜಗದೀಶ್ವರನೆ ; ಪಂಚಶರ ಸೂದನ-ಮನ್ಮಥನನ್ನು ಸಂಹರಿಸಿದವನೆ ; ನಿಗಮಾಗಮ ವೇದ್ಯ-ವೇದಾದಿ ನಿಗಮ ಆಗಮಗಳಿಗೆ ಮಾತ್ರವೇ ತಿಳಿದು ಬರುವವನೆ ; ಮಾಂ ಪರಿಪಾಲಯ-ನನ್ನನ್ನು ರಕ್ಷಿಸು ; ಯೋಗಿಜಾತ ಹೃದಯಾಬ್ಜ ಸದನ-ಯೋಗಿಗಳ ಹೃದಯಗಳೆಂಬ ತಾವರೆಯಲ್ಲಿ ನೆಲೆಸಿದವನೆ ; ನಾಗಭೂಷಣನೆ ನನ್ನನ್ನು ರಕ್ಷಿಸು, ಪಾದವಿನತ-ಪಾದಗಳಿಗೆ ನಮಸ್ಕರಿಸಿದವರ ; ಭವಖೇದದಲನ ಚರಣ-ಜನ್ಮದುಃಖವನ್ನು ಪರಿಹರಿಸುವಂಥ ಪಾದಗಳುಳ್ಳವನೆ ; ಸಾಧುಗಳಿಂದ ಸೇವಿತನಾದವನೆ, ನನ್ನನ್ನು ರಕ್ಷಿಸು ; ಪುರಜಲದ ಪವನ-ತ್ರಿಪುರಗಳೆಂಬ ಮೇಘಗಳಿಗೆ ಬಿರುಗಾಳಿಯಂತಿರುವವನೆ ; ಪುರಂದರಾದಿ-ದೇವೇಂದ್ರನೇ ಮೊದಲಾದವರಿಂದ ; ಸುಪೂಜಿತ ಚರಣ-ಪೂಜಿಸಲ್ಪಟ್ಟ ಪಾದಗಳುಳ್ಳವನೆ ; ನನ್ನನ್ನು ಕಾಪಾಡು ; ಗಿರಿಜಾಸುತ-ಪಾರ್ವತಿಯ ; ಹೃದಯ ಕುವಲಯ-ಹೃದಯವೆಂಬ ಕನ್ನೈದಿಲೆಗೆ ; ಶಶಾಂಕ-ಚಂದ್ರನಂತಿರುವವನೆ ; ಕರುಣಾವಾಸ-ಕರುಣೆಗೆ ನೆಲೆಯಾದವನೆ ; ನನ್ನನ್ನು ರಕ್ಷಿಸು ; ಜಲಜನಾಭ, ಪಾದನಳಿನರತ-ನಿನ್ನ ಪಾದಗಳೆಂಬ ತಾವರೆಗಳಲ್ಲಿ ಆಸಕ್ತರಾದವರಿಗೆ ; ಅಖಿಲಶುಭದ-ಸಕಲ ಶುಭಗಳನ್ನು ನೀಡುವವನೆ, ನನ್ನನ್ನು ರಕ್ಷಿಸು.

47. ರಾಗ : ನಾದನಾಮಕ್ರಿಯಾ ಆದಿತಾಳ ಭದ್ರಾಚಲ ರಾಮದಾಸರು

ಏಮಿರಾ ರಾಮ ನಾವಲ್ಲ ನೇರಮೇಮಿರಾ ರಾಮಾ
ಏಮಿ ರಾಮ ಈಲಾಗು ಕಷ್ಟಮು ನೀಮಹಿಮಮೋ ನಾ ಪ್ರಾರಬ್ಧಮೋ ||

1. ಕುಂಡಲಿ ಶಯನಾ ವೇದಂಡರಕ್ಷಕಾ
ಖಂಡ ತೇಜನಾ-ಯಡನುಂಡವೇ ||
2. ಪಂಕಜ ಲೋಚನ-ಶಂಕರನುತ ನಾ
ಸಂಕಟಮಾರ್ಪವೇ-ಪೊಂಕಮುತೋನು ||
3. ಮಂದರಧರ ನೀ-ಸುಂದರಪದಮುಲ
ನಿಂದಿರೇಶ ಕನುಗೊಂದು ಜೂಪವೇ ||
4. ದಿನಮೊಕಯೇಡುಗ-ಘನಮುಗ ಗಡಪೆಡಿ
ತನಯುನಿಮೀದನು-ದಯಲೇದಯಯೋ ||
5. ಸದಯ ಹೃದಯ ನೀ-ಮೃದುಪದಮುಲು ನಾ
ಹೃದಯ ಕಮಲಮುನ-ವದಲಕ ನಿಲ್ಪೆದ ||
6. ರಾಮ ರಾಮ ಭದ್ರಾಚಲ ಸೀತಾ
ರಾಮದಾಸುಡನು ಪ್ರೇಮತೋನೇಲವೇ ||

ಅರ್ಥ : ರಾಮು–ಶ್ರೀರಾಮು ; ನಾವಲ್ಲ–ನನ್ನಿಂದಾಗಿರುವ ; ನೇರಮು ಏಮಿರಾ–ದೋಷವು ಏನಯ್ಯ ? ಈ ಲಾಗುಕಷ್ಟಮು–ಈ ಬಗೆಯ ಕಷ್ಟವು ; ನೀ ಮಹಿಮಮೋ–ನಿನ್ನ ಮಹಿಮೆಯೊ ; ನಾ ಪ್ರಾರಬ್ಧಮೋ–ನಾನು ಮಾಡಿದ ಕರ್ಮದ ಫಲವೋ ; ಏಮಿ ರಾಮು–ಏನಯ್ಯ ರಾಮಚಂದ್ರ ? ಕುಂಡಲಿ ಶಯನಾ–ಸರ್ಪದಮೇಲೆ ಮಲಗಿದವನೆ ; ವೇದಂಡ ರಕ್ಷಕಾ–ಆನೆಯನ್ನು [ಗಜೇಂದ್ರ ಮೋಕ್ಷದ ಉಲ್ಲೇಖ] ರಕ್ಷಿಸಿದವನೆ ; ಅಖಂಡತೇಜ–ಸಂಪೂರ್ಣವಾದ ತೇಜಸ್ಸುಳ್ಳವನೆ ; ನಾಯಡ ನುಂಡವೇ–ನನ್ನ ಜೊತೆಯಲ್ಲಿ ಇರಯ್ಯ ; ಪಂಕಜಲೋಚನ–ತಾವರೆಯಂತೆ ಕಣ್ಣುಳ್ಳವನೆ ; ಶಂಕರನುತ–ಈಶ್ವರನಿಂದ ಸ್ತುತನಾದವನೆ ; ಪೊಂಕಮುತೋನು–ಪ್ರೀತಿಯಿಂದ ; ನಾ ಸಂಕಟ ಮಾರ್ಪವೇ–ನನ್ನ ಸಂಕಟವನ್ನು ಹೋಗಲಾಡಿಸು ; ದಿನಕವೊಯೇಡುಗ–ಒಂದೊಂದು ದಿನವೂ ಒಂದೊಂದು ವರ್ಷವಾಗಿ ; ಘನಮುಗ–ತೀವ್ರವಾಗಿ ; ಗಡಪೆಡಿ–ಕಳೆಯುತ್ತಿದೆ ; ತನಯುನಿ ಮೀದನು–ನಿನ್ನ ಮಗನ ಮೇಲೆ ; ದಯಲೇದಯಯೋ–ದಯೆಬಾರದೆ, ಅಯ್ಯಯ್ಯೋ ; ಸದಯ ಹೃದಯ–ದಯಾಪೂರ್ಣವಾದ ಹೃದಯವುಳ್ಳವನೆ ; ನೀ ಮೃದು ಪದಮುಲು–ನಿನ್ನ ಮೃದುವಾದ ಪಾದಗಳನ್ನು ; ನಾ ಹೃದಯ ಕಮಲಮುನ–ನನ್ನ ಹೃದಯವೆಂಬ ತಾವರೆಯಲ್ಲಿ ; ವದಲಕ ನಿಲ್ಪೆದ–ಅಲುಗದೆ ನಿಲ್ಲುವಂತೆ ಮಾಡು ; ರಾಮು ರಾಮು, ಭದ್ರಾಚಲ ಸೀತಾರಾಮು, ರಾಮದಾಸುಡನು–ರಾಮದಾಸನನ್ನು ; ಪ್ರೇಮತೋನು–ಪ್ರೀತಿಯಿಂದ ; ಏಲವೇ–ಕಾಪಾಡಯ್ಯ.

ತಾತ್ಪರ್ಯ : ನನಗೆ ಪ್ರಾಪ್ತವಾಗಿರುವ ಕಷ್ಟವು ನಿನ್ನ ಮಹಿಮೆಯೋ, ನನ್ನ ಪ್ರಾರಬ್ಧ ಕರ್ಮವೋ ತಿಳಿಯದಾಗಿದ್ದೇನೆ. ಒಂದೊಂದು ದಿನವೂ ವರ್ಷವಾಗಿ ಅತಿಭಾರವಾಗಿ ಕಳೆಯುತ್ತಿದೆ. ನಿನ್ನ ಮಗನಾದ ನನ್ನ ಮೇಲೆ ಕರುಣೆ ಬಾರದೆ ? ನಿನ್ನ ಪಾದಗಳು ನನ್ನ ಹೃದಯ ಕಮಲದಲ್ಲಿ ನೆಲೆ ನಿಲ್ಲುವಂತೆ ಮಾಡಲಾರೆಯಾ ?

**48.** ರಾಗ : ನಾದನಾಮಕ್ರಿಯಾ ಆದಿತಾಳ ಮುತ್ತಯ್ಯ ಭಾಗವತರ್

ಪಲ್ಲವಿ : ಶ್ರೀ ಲಲಿತೇ ಜಗನ್ಮಾತೇ ಶ್ರೀಪತಿ

ಅನುಪಲ್ಲವಿ : ಶ್ರೀ ಲಲಿತಾಗಮ ಸೇವಿತ ಪಾದೇ ಶ್ರೀಪತಿ ಸೋದರಿ ದೇವೇಶವಿನುತೇ ||

ಚರಣ : ಮೋದರೂಪೆ ನಿನ್ನಯ ಪಾದದ ಸೇವೆಯ
ಸಾದರದಿ ಎನಗಿತ್ತು ಸಲಹಮ್ಮ
ಗೌರಿ ನಾದಬಿಂದು ಕಳಾತೀತೆ ಮಾತೆ
ವೇದರೂಪ ಹರಿಕೇಶ ಹಿತೇ ||

ಅರ್ಥ : ಆಗಮಸೇವಿತ ಪಾದೆ–ವೇದ ಶಾಸ್ತ್ರದಿಗಳಿಂದ ಸೇವಿಸಲ್ಪಡುವ ಪಾದಗಳುಳ್ಳ, ಶ್ರೀಲಲಿತೆ, ಜಗನ್ಮಾತೇ, ಶ್ರೀಪತಿ ಸೋದರಿ–ವಿಷ್ಣು ಸಹೋದರಿಯೆ ; ದೇವೇಶವಿನುತೆ–ದೇವೇಂದ್ರನಿಂದ ನುತಳಾದವಳೆ, ಗೌರಿ, ಮೋದರೂಪೆ–ಆನಂದ ಸ್ವರೂಪಳಾದವಳೆ, ನಾದಬಿಂದು ಕಲಾತೀತೆ, ಮಾತೆ, ವೇದರೂಪೆ, ಹರಿಕೇಶಹಿತೇ, ಸಾದರದಿ–ಆದರದಿಂದ ; ನಿನ್ನಯ ಪಾದದ ಸೇವೆಯ–ನಿನ್ನ ಪಾದ ಸೇವೆಯನ್ನು ; ಎನಗಿತ್ತು ಸಲಹಮ್ಮ.

49. ರಾಗ : ನಾಟಕುರಂಜಿ ಆದಿತಾಳ ತ್ಯಾಗರಾಜರು

ಪಲ್ಲವಿ : ಮನಸು ವಿಷಯ ನಟ ವಿಟುಲಕೊಸಂಗಿತೇ–ಮಾ ರಾಮುನಿ ಕೃಪಗಲ್ಗುನೋ ಮನಸಾ ||

ಅನುಪಲ್ಲವಿ : ತನ ತಲುಪೊಕರಿಂಟಿಕಿ ತೀಸಿ ಪೆಟ್ಟಿ–ತಾ ಕುಕ್ಕಲ ತೋಲು ರೀತಿಗಾದೋ ||

ಚರಣ : ತವುಟಿಕಿ ರಂಕಾಡ ಬೋಯಿಕೊಟಿ–ತಪಿಲೆ ಕೋತಿ ಗೊಂಪೊಯಿನಟ್ಟು ಗಾದೋ
ಚೆವುಟಿಕುಪದೇಶಿಂಚಿ ನಟ್ಟುಗಾದೋ–ಶ್ರೀ ತ್ಯಾಗರಾಜುನುತುನಿ ದಲಚಕ ||

ಅರ್ಥ : ಮನಸು–ಮನಸ್ಸು ; ವಿಷಯ ನಟವಿಟುಲಕು–ವಿಷಯಗಳೆಂಬ ನಟ ವಿಟರ ; ಒಸಂಗಿತೇ–ಪಾಲಾದರೆ ; ಮಾರಾಮುನಿಕೃಪ–ನನ್ನ ರಾಮನ ಕೃಪೆಯು ; ಗಲ್ಗುನೋ–ಒದಗುತ್ತದೆಯೆ ಮನಸಾ–ಎಲೆ ಮನಸ್ಸೆ ; ತನತಲುಪು ಒಕರಿಂಟಿಕಿ–ತನ್ನ ಮನೆಬಾಗಿಲನ್ನು ಬೇರೆಯವರಿಗಾಗಿ ; ತೀಸಿ ಪೆಟ್ಟಿ–ತೆಗೆದಿಟ್ಟು ; ತಾ–ತಾನು ; ಕುಕ್ಕಲು –ನಾಯಿಗಳನ್ನು ; ತೋಲು ರೀತಿ–ಓಡಿಸಲು ಕುಳಿತ ರೀತಿ ; ಗಾದೋ–ಅಲ್ಲವೋ ; ತವುಟಿಕಿ–ತವುಡಿಗಾಗಿ ; ರಂಕಾಡ ಬೋಯಿಕೊಟಿ–ವೇಶ್ಯಾವೃತ್ತಿಗಿಳಿದು ; ತಪಿಲೆ–ಅನ್ನದ ತಪ್ಪಲೆಯನ್ನು ; ಕೋತಿ ಗೊಂಪೊಯಿನಟ್ಟು ಗಾದೋ–ಕೋತಿಯ ಪಾಲು ಮಾಡಿದ ಹಾಗಾಗಲಿಲ್ಲವೆ ? ಚೆವುಟಿಕಿ–ಕಿವುಡನಿಗೆ : ಉಪದೇಶಿಂಚಿನಟ್ಟು ಗಾದೋ–ಉಪದೇಶಿಸಿದ ಹಾಗಾಗಲಿಲ್ಲವೋ ; ಶ್ರೀ ತ್ಯಾಗರಾಜನುತನಿ–ತ್ಯಾಗರಾಜನಿಂದು ನುತಿಸಲ್ಪಟ್ಟವನನ್ನು ; ತಲಚಕ–ತಿಳಿದುಕೊಳ್ಳದೆ.

ತಾತ್ಪರ್ಯ : ಮನಸ್ಸನ್ನು ವಿಷಯ ಸುಖಗಳ ಪಾಲು ಮಾಡಿಬಿಟ್ಟರೆ ರಾಮನ ಕೃಪೆ ದೊರಕುತ್ತದೆಯೆ ? ಅದು ತನ್ನ ಮನೆಯ ಬಾಗಿಲನ್ನು ಬೇರೆಯವರಿಗಾಗಿ ತೆಗೆದುಕೊಟ್ಟು ತಾನು ತನ್ನ ಮನೆಯನ್ನು ನಾಯಿಗಳಿಂದ ರಕ್ಷಿಸಲು ಕಾದುಕುಳಿತ ಹಾಗೆ ಆಗುತ್ತದೆ. ಮಾಡಿದ ಅನ್ನದ ತಪ್ಪಲೆಯನ್ನು ಕೋತಿಗಳ ಪಾಲಾಗಲು ಬಿಟ್ಟು, ಹೊಟ್ಟೆ ಸಂಪಾದಿಸಲು ದೇಹವನ್ನು ಮಾರಿಕೊಳ್ಳಲು ಹೋದಂತಾಗುತ್ತದೆ. ತ್ಯಾಗರಾಜನುತನಾದ ಶ್ರೀರಾಮಚಂದ್ರನನ್ನು ತಿಳಿದುಕೊಳ್ಳದೆ ಹೋದರೆ ಕಿವುಡನಿಗೆ ಉಪದೇಶ ಮಾಡಿದಹಾಗಾಗುತ್ತದೆ.

50. ರಾಗ : ನಾಟಕುರಂಜಿ ಆದಿತಾಳ ಪಲ್ಲವಿ ಗೋಪಾಲಯ್ಯರ್

ಪಲ್ಲವಿ : ನೀದು ಮೂರ್ತಿನಿ ಕನುಗೊನಿ ನೆಮ್ಮದಿನಿ ಸೇವಿಂಚಿ ನೇನು ಧನ್ಯುಡನೈತಿನಿ ||

ಅನುಪಲ್ಲವಿ : ವೇದ ವೇದಾಂತ ವಿದಿತುಡೈನ ವೆಂಕಟೇಶ ಸಕಲ ಜಗನ್ನಿವಾಸ ||

ಚರಣ : ಮಂದರ ಗಿರಿಧರ ಸನಕಾದಿ ಮುನಿ ಮಾನಸಾಬ್ಜ ಭೃಂಗ ಧೃತ ಶುಭಾಂಗ
ಇಂದಿರಾರಮಣ ಗುಣಾಭರಣ ಈಶ ವಿನುತ ನಾಮ ಪರಂಧಾಮ ||

2. ಪಂಕಜಭವಾದಿ ಮುಖ ಸನ್ನುತ ಪ್ರಪನ್ನ ವತ್ಸಲ ಪತಿತಪಾವನ ಬಿರು
ದಾಂಕ ಶೇಷಾಂಗ ಶ್ರೀನಿಧೇ ವತ್ಸಾಂಕ ನಿಷ್ಕಳಂಕ ಗರುಡ ತುರಂಗ ||

3. ಮಾಧವ ಮುಕುಂದ ಮಧುಸೂದನ ನತಮಲ್ಲ ಪಲ್ಲವ ಸದೃಶ ಭಾಸಮಾನ
ಶ್ರೀಧರ ಪುರಾಣ ಪುರುಷ ನವ ತುಲಸೀ ಧಾಮ ಕೋಟಿ ಅತುಲಿತ ವೇಷ ||

ಅರ್ಥ : ನೀದು ಮೂರ್ತಿನಿ–ನಿನ್ನ ಮೂರ್ತಿಯನ್ನು ; ಕನುಗೊನಿ–ನೋಡಿ; ನೆಮ್ಮದಿನಿ ಸೇವಿಂಚಿ–ನೆಮ್ಮದಿಯಾಗಿ ಸೇವಿಸಿ ; ನೇನು–ನಾನು ; ಧನ್ಯುಡನೈತಿನಿ–ಧನ್ಯನಾದೆನು ; ವೇದ ವೇದಾಂತ ವಿದಿತು

ಡೈನ–ವೇದ ವೇದಾಂತಗಳಿಗೆ ವ್ಯಕ್ತನಾಗುವ ; ವೆಂಕಟೇಶನೆ, ಸಕಲ ಜಗನ್ನಿವಾಸ–ಸಕಲ ಜಗತ್ತುಗಳಿಗೂ ಮನೆಯಾದವನೆ ; ಮಂದರ ಗಿರಿಧರ–ಕೂರ್ಮಾವತಾರವೆತ್ತಿ ಮಂದರ ಪರ್ವತವನ್ನು ಧರಿಸಿದವನೆ ; ಸನಕಾದಿ ಮುನಿ ಮಾನಸ ಅಬ್ಜ ಭೃಂಗ–ಸನಕನೇ ಮೊದಲಾದ ಮುನಿಗಳ ಮನಸ್ಸೆಂಬ ತಾವರೆಯಲ್ಲಿ ದುಂಬಿಯಂತಿರುವವನೆ ; ಧೃತ ಶುಭಾಂಗ–ಶುಭಕರವಾದ ದೇಹವುಳ್ಳವನೆ ; ಇಂದಿರಾ ರಮಣ–ಲಕ್ಷ್ಮೀರಮಣನೆ ; ಗುಣಾಭರಣ–ಸದ್ಗುಣಗಳೇ ಆಭರಣವಾಗಿರುವವನೆ ; ಈಶ ವಿನುತ ನಾಮ-ಪರಮೇಶ್ವರನಿಂದ ಸ್ತುತಿಗೊಂಡವನೆ ; ಪರಂಧಾಮನೆ ; ಪಂಕಜಭವಾದಿ ಮುಖ ಸನ್ನುತ–ಬ್ರಹ್ಮನೇ ಮೊದಲಾದವರಿಂದ ಸ್ತುತಿಸಲ್ಪಟ್ಟವನೆ ; ಪ್ರಪನ್ನ ವತ್ಸಲ–ಶರಣಾಗತರನ್ನು ವಾತ್ಸಲ್ಯದಿಂದ ಕಾಪಾಡಿದವನೆ ; ಪತಿತ ಪಾವನ ಬಿರುದಾಂಕ–ಪತಿತರನ್ನು ಪಾವನವಾಗಿಸುವ ಬಿರುದು ಉಳ್ಳವನೆ ; ವತ್ಸಾಂಕ–ಶ್ರೀವತ್ಸ ಚಿಹ್ನೆಯುಳ್ಳವನೆ ; ನಿಷ್ಕಳಂಕನಾದವನೆ ; ಗರುಡತುರಂಗ–ಗರುಡನನ್ನು ವಾಹನವಾಗಿ ಉಳ್ಳವನೆ ; ಮಾಧವ, ಮುಕುಂದ ಮಧುಸೂಧನ ; ನುತಮಲ್ಲ–ಮಲ್ಲನಿಂದ ನಮಸ್ಕೃತನಾದವನೆ ; ಪಲ್ಲವ ಸದೃಶ–ಚಿಗುರಿಗೆ ಸಮನಾಗಿ ; ಭಾಸಮಾನ–ಹೊಳೆಯುವವನೆ ; ಶ್ರೀಧರನೆ, ಪುರಾಣ ಪುರುಷ–ಪ್ರಾಚೀನನಾದ ಪರಮಾತ್ಮನೆ ; ನವ ತುಲಸೀಧಾಮ–ಚಿಗುರಿದ ತುಲಸಿಯಲ್ಲಿ ನೆಲೆಸಿದವನೆ ; ಅತುಲಿತ ಕೋಟಿ ವೇಷ–ಹೋಲಿಕೆಯೇ ಸಾಧ್ಯವಿಲ್ಲದ ಅಸಂಖ್ಯರೂಪಗಳಲ್ಲಿ ಪ್ರಕಟನಾದವನೆ ; ನಿನ್ನನ್ನು ಸೇವಿಸಿ ನಾನು ಧನ್ಯನಾಗಿದ್ದೇನೆ.

**51.** ರಾಗ : ನಾಟಕುರಂಜಿ ರೂಪಕತಾಳ ತಿರುಪತಿ ವಿದ್ಯಾಲಯ ನಾರಾಯಣಸ್ವಾಮಿ

ಪಲ್ಲವಿ : ಪರಾಕೇಲ ಸರಸ್ವತಿ ಮುರಾರಿಸುತಸತೀ ಮತಿ

ಅನುಪಲ್ಲವಿ : ಬಿರಾನ ವರಾಲೊಸಗು ಪರಾತ್ಪರಿ ದಯಾಕರಿ ||

ಚರಣ : ಪರಾಶರಾದುಲಕ್ಕೈನನು–ಪ್ರಣುತಿಂಪತರಮುಗಾನಿ
ಪುರಾಣಿ ಆದರಿಂಚುಟಿಕು–ಸ್ಮರಿಂಚೆದ ಸರೋಜಮುಖಿ ||

2. ಸುರಾಸುರುಲ ಮನಂಬುನನು ಸ್ಥಿರಂಬುಗನು ಮರಿವೆಲಯು
ತಿರುಪತಿಪುರವಾಸುಡೌ–ದೇವದೇವುನಿ ದಲಿತುನೆಪುಡು ||

ಅರ್ಥ : ಸರಸ್ವತಿ, ಪರಾಕುಏಲ–ಏಕೆ ಅನಾದರ ? ; ಮುರಾರಿಸುತ– ವಿಷ್ಣುವಿನಿಂದ ನುತನಾದ ಬ್ರಹ್ಮನ ; ಸತೀ–ರಾಣಿಯೆ ; ಮತಿ–ಬುದ್ಧಿ ಸ್ವರೂಪಳೆ ; ಪರಾತ್ಪರಿ, ದಯಾಕರಿ, ಬಿರಾನ–ಬೇಗ ; ವರಾಲೊಸಗು–ವರಗಳನ್ನು ಕರುಣಿಸು ; ಪರಾಶರಾದುಲಕ್ಕೈನನು–ಪರಾಶರರೇ ಮೊದಲಾದವರಿಗೂ ; ಪ್ರಣುತಿಂಪ–ನಿನ್ನನ್ನು ಸ್ತುತಿಸುವ ; ತರಮುಗಾನಿ–ರೀತಿಯು ತಿಳಿಯದಲ್ಲ ; ಪುರಾಣಿ–ಪ್ರಾಚೀನಳೇ ಆದರಿಂಚುಟಕು–ನನ್ನನ್ನು ಆದರಿಸು ಎಂಬುದಾಗಿ ; ಸ್ಮರಿಂಚೆದ–ಸ್ಮರಿಸುತ್ತಿದ್ದೇನೆ ; ಸರೋಜಮುಖಿ, ಸುರಾಸುರುಲ–ಸುರಾಸುರರ ; ಮನಂಬುನನು–ಮನಸ್ಸಿನಲ್ಲಿ ; ಸ್ಥಿರಮುಗನು–ಸ್ಥಿರವಾಗಿ ; ಮರಿ–ಮತ್ತೆ ; ನೆಲಯು–ಶೋಭಿಸುವ ; ತಿರುಪತಿಪುರ ವಾಸುಡೌ–ತಿರುಪತಿಯಲ್ಲಿ ನೆಲೆಸಿದ ದೇವದೇವನನ್ನು ; ಎಪುಡು–ಯಾವಾಗಲೂ ; ದಲತುನು–ಪರಿಭಾವಿಸುತ್ತೇನೆ. [ತಿರುಪತಿಪುರವಾಸ ಎಂಬುದು ಅಂಕಿತ]

ಸುಬ್ಬರಾಯಶಾಸ್ತ್ರಿ

52. ರಾಗ : ಮುಖಾರಿ ಆದಿತಾಳ

ಪಲ್ಲವಿ : ಏಮನಿ ನೇ ನೀ ಮಹಿಮ ದೆಲುಪುದುನಮ್ಮ ||

ಅನುಪಲ್ಲವಿ : ಸಾಮಜಗಾಮಿನೀ ಸಾರಸ ಲೋಚನಿ ||

ಚರಣ : ಹರಿ ಹಯ ಸುರ ಮುನಿವರುಲಕು ನೀದು
ಚರಣ ಮಹಿಮ ಪೊಗಡುಟ ತರಮಾ
ನರುಡನು ನೇನು ಪಾಮರುಡನು ದೇವಿ ವರ ಕಂಚಿ
ಪುರಾಲಯ ವಾಸಿನಿ ಶ್ರೀ ಪರದೇವತ–ನೀದು ಕುಮಾರುಡನಮ್ಮ ||

ಅರ್ಥ : ನೇ–ನಾನು ; ನೀ ಮಹಿಮ–ನಿನ್ನಮಹಿಮೆಯನ್ನು ; ಏಮನಿ ದೆಲುಪುದುನಮ್ಮ–ಏನೆಂದು ವರ್ಣಿಸಲಮ್ಮ ; ಸಾಮಜಗಾಮಿನಿ–ಆನೆಯಂತೆ ನಡೆಯುಳ್ಳವಳೆ ; ಸಾರಸ ಲೋಚನಿ–ಸಾರಸದಂತೆ ಕಣ್ಣುಳ್ಳವಳೆ ; ಹರಿ ಹಯ–ವಿಷ್ಣು, ಇಂದ್ರ ; ಸುರ ಮುನಿವರುಲಕು–ದೇವಮುನಿಗಳೇ ಮೊದಲಾದವರಿಗೆ ಕೂಡ ; ನೀದು ಚರಣಮಹಿಮ–ನಿನ್ನ ಪಾದಮಹಿಮೆಯನ್ನು ; ಪೊಗಡುಟ ತರಮಾ–ಹೊಗಳಲು ಸಾಧ್ಯವಿದೆಯೆ ? ನೇನು ನರುಡನು–ನಾನು ಬಾಲಕನು ; ಪಾಮರುಡನು–ಸಾಮಾನ್ಯನು ; ದೇವಿ, ಕಂಚಿಪುರಾಲಯ ವಾಸಿನಿ, ಶ್ರೀ ಪರದೇವತ–ಪರದೇವತೆಯೆ ; ನೀದು ಕುಮಾರುಡನಮ್ಮ–ನಿನ್ನ ಮಗನಮ್ಮ ನಾನು.

ತಾತ್ಪರ್ಯ : ನಿನ್ನ ಮಹಿಮೆಯನ್ನು ನಾನು ಏನೆಂದು ಬಣ್ಣಿಸಲಿ ? ವಿಷ್ಣು ಇಂದ್ರ ಮೊದಲಾದವರಿಗೆ ಕೂಡ ನಿನ್ನ ಪಾದಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ. ನಾನು ಬಾಲಕ, ಸಾಮಾನ್ಯ, ನಿನ್ನ ಕುಮಾರನಂತೆ ಭಾವಿಸಿ ಸಲಹು.

ತ್ಯಾಗರಾಜರು

53. ರಾಗ : ಮುಖಾರಿ ಆದಿತಾಳ

ಪಲ್ಲವಿ : ಏಲಾವತಾರಮೆತ್ತುಕೊಂಟಿವಿ ಏಮಿ ಕಾರಣಮು ಶ್ರೀರಾಮುಡೈ ||

ಅನುಪಲ್ಲವಿ : ಆಲಮುಸೇಯುಟಕಾ ಅಯೋಧ್ಯಾ ಪಾಲನ ಸೇಯುಟಕಾ ||

ಚರಣ : ಯೋಗುಲು ಜೂಚುಟಂದುಕಾ ಭವ ರೋಗುಲ ಬ್ರೋಚುಟಂದುಕಾ ಶತ
ರಾಗರತ್ನ ಮಾಲಿಕಲು ರಚಿಂಚಿನ ತ್ಯಾಗರಾಜುಕು ವರಮೊಸಗುಟಂದುಕಾ ||

ಅರ್ಥ : ಶ್ರೀರಾಮುಡೈ–ಶ್ರೀರಾಮನಾಗಿ ; ಏಮಿ ಕಾರಣಮು ಅವತಾರಮೆತ್ತುಕೊಂಟಿವಿ ಏಲ–ಯಾವ ಕಾರಣಕ್ಕಾಗಿ ಅವತಾರವೆತ್ತಿದೆಯಯ್ಯ ? ; ಆಲಮು ಸೇಯುಟಕಾ–ಅಯೋಧ್ಯೆಯನ್ನು ಪಾಲಿಸಬೇಕೆಂದೆ ? ಯೋಗುಲು–ಯೋಗಿಗಳು ; ಜೂಚುಟಂದುಕಾ–ನಿನ್ನನ್ನು ದರ್ಶನ ಮಾಡಲೆಂದೆ ? ಭವರೋಗುಲ–ಸಂಸಾರದ ರೋಗವನ್ನು ಅನುಭವಿಸುತ್ತಿರುವ ಜನರನ್ನು ; ಬ್ರೋಚುಟಂದುಕಾ–ಕಾಪಾಡಲೆಂದೆ ? ಶತ ರಾಗರತ್ನ ಮಾಲಿಕಲು–ನೂರಾರು ರಾಗ ರತ್ನಮಾಲೆಗಳನ್ನು ; ರಚಿಂಚಿನ–ರಚಿಸಿದ ; ತ್ಯಾಗರಾಜುಕು–ತ್ಯಾಗರಾಜನಿಗೆ ; ವರಮೊಸಗುಟಂದುಕಾ–ವರವೀಯಲೆಂದೆ ?

ತಾತ್ಪರ್ಯ : ಯುದ್ಧ ಮಾಡಲೆಂದು ಅವತರಿಸಿದೆಯೋ, ಅಯೋಧ್ಯೆಯನ್ನು ಪಾಲಿಸಲೆಂದು ಬಂದೆಯೋ, ಯೋಗಿಗಳಿಗೆ ದರ್ಶನವೀಯುವ ಸಲುವಾಗಿಯೋ, ಜನರ ಭವದುಃಖಗಳನ್ನು ಹೋಗಲಾಡಿಸು

ವುದಕ್ಕಾಗಿಯೋ ಅಥವಾ ನೂರಾರು ರಾಗರತ್ನಮಾಲಿಕೆಗಳನ್ನು ರಚಿಸಿದ ತ್ಯಾಗರಾಜನಿಗೆ ವರ ವೀಯಲೆಂದೋ–ಯಾವ ಕಾರಣಕ್ಕಾಗಿ ನೀನು ಶ್ರೀರಾಮಚಂದ್ರನಾಗಿ ಅವತರಿಸಿದ್ದೀಯೆ ?

54. ರಾಗ : ಮುಖಾರಿ ರೂಪಕತಾಳ ತ್ಯಾಗರಾಜರು

ಪಲ್ಲವಿ : ಎಂತನಿ ನೇ ವರ್ಣಿಂತುನು ಶಬರೀಭಾಗ್ಯ ||

ಅನುಪಲ್ಲವಿ : ದಾಂತುಲ ವರಕಾಂತಲು ಜಗಮಂತ ನೀಡಿಯುಂಡಗ ||

ಚರಣ : ಕನುಲಾರ ಸೇವಿಂಚಿ ಕಮ್ಮನಿ ಫಲಮುಲನೊಸಗಿ
ತನುವು ಪುಲಕರಿಂಚ ಪಾದಯುಗಮುಲಕು ಮ್ರೊಕ್ಕಿ
ಇನಕುಲಪತಿ ಸಮುಖಂಬುನ ಪುನರಾವೃತ್ತಿ ರಹಿತ ಪದ
ಮುನುಬೊಂದಿನ ತ್ಯಾಗರಾಜನುತುರಾಲಿ ಪುಣ್ಯಮುನು ||

ಅರ್ಥ : ಶಬರೀಭಾಗ್ಯ–ಶಬರಿಯ ಭಾಗ್ಯವನ್ನು ; ನೇ–ನಾನು ; ಎಂತನಿ ವರ್ಣಿಂತುನು–ಏನೆಂದು ವರ್ಣಿಸಲಿ ? ಜಗಮಂತ–ಜಗತ್ತಿನಾದ್ಯಂತ ಇರುವ ; ದಾಂತುಲ ವರಕಾಂತಲು–ಸತ್ಪುರುಷರ ಪತ್ನಿಯರು ; ನೀಡಿಯುಂಡಗ–ಪಡೆದಿಲ್ಲದ ; ಕನುಲಾರ ಸೇವಿಂಚಿ–ಕಣ್ಣಾರ ನೋಡಿ ಸೇವಿಸಿ ; ಕಮ್ಮನಿ–ಮಧುರವಾದ ; ಫಲಮುಲನೊಸಗಿ–ಹಣ್ಣುಗಳನ್ನು ನೀಡಿ ; ತನುವು ಪುಲಕರಿಂಚ–ದೇಹವು ರೋಮಾಂಚಗೊಳ್ಳುತ್ತಿರಲು ; ಪಾದಯುಗಮುಲಕು–ಪಾದಗಳಿಗೆ ; ಮ್ರೊಕ್ಕಿ–ನಮಸ್ಕರಿಸಿ ; ಇನಕುಲಪತಿ–ಸೂರ್ಯವಂಶ ಶ್ರೇಷ್ಠನಾದ ರಾಮನ; ಸಮುಖಂಬುನ–ಸಮ್ಮುಖದಲ್ಲಿಯೇ ; ಪುನರಾವೃತ್ತಿರಹಿತ–ಮತ್ತೆ ಹಿಂದಿರುಗುವಿಕೆಯಿಲ್ಲದಂತಹ ; ಪದಮುನು–ಪದವಿಯನ್ನು ; ಬೊಂದಿನ–ಪಡೆದ ; ತ್ಯಾಗರಾಜನುತು–ತ್ಯಾಗರಾಜನಿಂದ ಸ್ತುತನಾದ ; ಆಲಿ ಪುಣ್ಯಮುನು–ಅವಳ ಪುಣ್ಯವನ್ನು ಏನೆಂದು ವರ್ಣಿಸಲಿ ?

ತಾತ್ಪರ್ಯ : ತನ್ನ ದೈವವನ್ನು ಸಾಕ್ಷಾತ್ತಾಗಿ ಕಣ್ಣಾರ ನೋಡಿ, ಹಣ್ಣುಗಳನ್ನು ನೀಡಿ ಸೇವಿಸಿ, ಅವನ ಪಾದಗಳಿಗೆ ನಮಸ್ಕರಿಸಿದ, ಪುನರಾವೃತ್ತಿರಹಿತವಾದ ಸದ್ಗತಿ ಪಡೆದ ಶಬರಿಯ ಭಾಗ್ಯವನ್ನು ಏನೆಂದು ವರ್ಣಿಸಲಿ ?

55. ರಾಗ : ಸಾವೇರಿ ಆದಿತಾಳ ಟಿ. ಚೌಡಯ್ಯ

ಪಲ್ಲವಿ : ದೇವಿ ಶ್ರೀ ಚಾಮುಂಡೇಶ್ವರಿ ಕೃಪಾಕರಿ ಶಂಕರಿ ||

ಅನುಪಲ್ಲವಿ : ದೇವಿ ಮನೋಹರಿ ಗೌರಿ ಪರಾತ್ಪರಿ
ಮಹಾಬಲಗಿರಿ ನಿವಾಸಿನಿ ಅಂಬ ||

ಚರಣ : ಮಹಿಷಾಸುರ ಮರ್ದಿನಿ ಮಹಾಬಲೇಶ್ವರ ಮಹಿತೇ ದೇವಿ
ರಾಜ ರಾಜ ಜಯಚಾಮರಾಜೇಂದ್ರ ಪೂಜಿತ ತ್ರಿಮಕುಟ ಕ್ಷೇತ್ರವಾಸನುತ ||

ಅರ್ಥ : ಮಹಾಬಲಗಿರಿ–ಚಾಮುಂಡಿಬೆಟ್ಟ ತ್ರಿಮಕುಟಕ್ಷೇತ್ರ–ತಿರುಮಕೂಡಲು ನರಸೀಪುರ.

56. ರಾಗ : ಸಾವೇರಿ ಆದಿತಾಳ ಶ್ಯಾಮಾಶಾಸ್ತ್ರಿ

ಪಲ್ಲವಿ : ದುರುಸುಗಾ ಕೃಪಜೂಚಿ ಸಂತತ
ಮರೋಗ ದೃಢ ಶರೀರಮು ಸಲುಪುನನು ||

ಅನುಪಲ್ಲವಿ : ಪರಮಪಾವನಿ ಕೃಪಾವನಿ ವಿನುತ
ಪದಸರೋಜ ಪ್ರಣತಾರ್ಥಿಹರು ರಾಣಿ
ಪರಾಕು ಧರ್ಮಸಂವರ್ಧಿನಿ ಬಹು
ಪರಾಕಮಲಗುಣಾ ತ್ರಿಪುರಸುಂದರಿ

ಸ್ವರ ಸಾಹಿತ್ಯ : ಸರೋಜನಯನ ನತಜನಪಾಲಿನಿ ವನಿ
ವೇದಮುಲು ಮೊರಲಿಡಗಾನಿತರು ಲೆವರು
ಮನವಿವಿನಿ ಕೃಪಸಲುವು ಪರಾಕುಸಲುಪ
ರಾದಿಕ ನೀವಿಪುಡು ||

ಚರಣ : ನೀ ಸನ್ನಿಧಿನಿಜೇರಿ ಗೊಲಿಚಿನ
ನಿನ್ನೆಪುಡು ತಲಚೇ ಸುಜನ
ದಾಸಜನ ಭಾಗ್ಯಮೆಪುಡು ತೆಲುಪುದುನೇ ?
ಓ ಸಕಲಲೋಕ ಜನನೀ ವಿನು
ಓಂಕಾರಿ ನಿಯತಿ ಎಟುಲನೊ ನೀ ಸಾಟೆವರು
ಈ ಜಗಂಬುಲಸುನೇ ನಿರತಮುನು ಗೊಲಿಚಿತಿ ||

2\. ಏಮೋ ಕಲಕಜೆಂದಿ ಮನಮುನ ನೇ ನೆಚ್ಚಟ ಗತಿಗಾನಕನು
ನೀ ಮಹಿಮಲೆಲ್ಲ ಚೆವುಲನಯವಿನಿ
ಈ ಮನಸುಲೋನಿ ವೆತದೀರ್ಚುಟಕೀವೇಳ ನಿಪುಣವನಿ
ಕಾಮಾಕ್ಷಿಯು ನೀವು ವೇರೆತನುಗಾದನಿ ದಲಚಿ ಗೊಲಿಚಿತಿನಿ ||

3\. ಧಾರಾಧರವಿನೀಲ ಕಚ ಲಸಿತಾ ಸರಸಕವಿತಾ ನಿಚಿತ
ಸಾರ ಘನಸಾರ ಸಿತಧರ ಹಾಸಿತಾ
ವಾರಿರುಹವಾರಿವದನೋಚಿತವಾಗೀಶ ವಿನುತ ಭೃತ ನತಾ
ನಾರಾಯಣಿ ಶ್ಯಾಮಕೃಷ್ಣನುತ ನಾ ಮನವಿನಿ ವಿನು ಗಿರಿಸುತ ||

ಅರ್ಥ : ದುರುಸುಗಾ_ಬೇಗ ; ಕೃಪಜೂಚಿ_ಕೃಪೆಯಿಂದ ನೋಡಿ ; ಸಂತತಮು–ಯಾವಾಗಲೂ ; ಅರೋಗ_ರೋಗವಿಲ್ಲದ ; ದೃಢಶರೀರಮುಗ_ದೃಢವಾದ ಶರೀರವಾಗುವಂತೆ ; ನನುಸಲುಪು–ನನ್ನನ್ನು ಸಲಹು ; ಪರಮಪಾವನಿ, ಕೃಪಾವನಿ_ಕೃಪಾಮಯಳಾದವಳೆ ; ವಿನುತ-ಸ್ತುತಿಸಲ್ಪಟ್ಟ ; ಪದಸರೋಜ_ಪಾದಕಮಲಗಳುಳ್ಳವಳೆ ; ಪ್ರಣತಾರ್ಥಿಹರುನಿರಾಣಿ_ಪರಮೇಶ್ವರನ ರಾಣಿಯೆ ; ಧರ್ಮಸಂವರ್ಧಿನಿ-ಧರ್ಮವನ್ನು ವರ್ಧಿಸುವವಳೆ ; ಪರಾಕು, ಬಹುಪರಾಕು ; ಅಮಲಗುಣಾ_ಪರಿಶುದ್ಧವಾದ ಗುಣಗಳುಳ್ಳವಳೆ ; ತ್ರಿಪುರಸುಂದರಿ, ಸರೋಜನಯನ_ತಾವರೆಯಂತೆ ಕಣ್ಣುಳ್ಳವಳು ; ನತಜನಪಾಲಿನಿ-ಭಕ್ತರನ್ನು ಪಾಲಿಸುವವಳು ; ಅನಿ_ಎಂಬುದಾಗಿ ವೇದಮುಲು_ವೇದಗಳು ; ಮೊರಲಿಡಗಾನು_ಮೊರೆಯಿಡುವಂಥವರು ; ಇತರು ಲೆವರು-ಬೇರೆ ಯಾರಿದ್ದಾರೆ! ಮನವಿ ವಿನಿ–ನನ್ನ ಪ್ರಾರ್ಥನೆಯನ್ನು ಕೇಳಿ ; ನೀವು-ನೀನು; ಕೃಪಸಲುವು–ಕೃಪೆ ತೋರಿಸು; ಇಪುಡು_ಈಗ; ಪರಾಕು ಸಲುಪರಾದು-ಅನಾದರ ಮಾಡಬೇಡ ; ನೀ ಸನ್ನಿಧಿನಿಜೇರಿ-ನಿನ್ನ ಸನ್ನಿಧಿಯನ್ನು ಸೇರಿ ; ಗೊಲಿಚಿನ-ಪ್ರಾರ್ಥಿಸುವ ; ನಿನ್ನೆ-ನಿನ್ನನ್ನೆ ; ಎಪುಡು-ಯಾವಾಗಲೂ ; ತಲಚೇ-ಪರಿಭಾವಿಸುವ ; ಸುಜನ ದಾಸಜನ – ಸಜ್ಜನರಾದ ದಾಸಜನರ ; ಭಾಗ್ಯಮು_ಭಾಗ್ಯವನ್ನು ; ಎಪುಡು-ಯಾವಾಗ ; ತೆಲುಪುದುನೇ_ತಿಳಿಸುವೆ ; ಓ ಸಕಲಲೋಕ

ಜನನೀ ; ಓಂಕಾರಿ ; ನಿಯತಿ–ವಿಧಿ ರೂಪಳೆ ; ವಿನು–ಕೇಳು ; ಎಟುಲನೊ ನೀಸುಟಿವರು–ಎಲ್ಲೆಲ್ಲೂ ನಿನ್ನ ಸಮರು ಯಾರಿದ್ದಾರೆ ; ಈ ಜಗಂಬುಲನು–ಈ ಜಗತ್ತಿನಲ್ಲಿ ; ನೇ-ನಾನು ; ನಿರತಮುನು-ಸದಾ ; ಗೊಲಿಚಿತಿ–ಧ್ಯಾನಿಸುತ್ತಿದ್ದೇನೆ ; ಏಮೋ ಕಲಕಜೆಂದಿಮನಮುನ–ಕಲಕಿ ಹೋಗಿರುವ ಮನಸ್ಸಿನಿಂದ ; ನೇನು-ನಾನು ; ಎಚ್ಚಟಗತಿಗಾನಕನು-ಎಲ್ಲಿಯೂ ಬೇರೆ ಗತಿ ಕಾಣದೆ ; ನೀಮಹಿಮಲೆಲ್ಲ-ನಿನ್ನ ಮಹಿಮೆಗಳನ್ನೆಲ್ಲ ; ಚೆವುಲನಯವಿನಿ–ಕಿವಿಗಳಿಂದ ಕೇಳಿ ; ಈ ಮನುಸುಲೋನಿ-ಈ ಮನಸ್ಸಿನ ; ವೆತದೀರ್ಚುಟಕು-ವ್ಯಥೆಯನ್ನು ಪರಿಹರಿಸಲು ; ಈ ವೇಳೆ-ಈಗ ; ನಿಪುಣವನಿ–ನೀನೇ ನಿಪುಣಳು ಎಂದು ; ಕಾಮಾಕ್ಷಿಯು-ಕಾಮಾಕ್ಷಿಯೂ ; ನೀವು-ನೀನೂ ; ವೇರೆತನುಗಾದನಿ-ಬೇರೆ ಬೇರೆಯಲ್ಲ ಎಂದು ; ದಲಚಿಗೊಲಿಚಿತಿನಿ-ಭಾವಿಸಿ ಪ್ರಾರ್ಥಿಸುತ್ತಿದ್ದೇನೆ ; ಧಾರಾಧರ-ಮೋಡದಂತೆ ; ವಿನೀಲ-ನೀಲ ವರ್ಣದ ; ಕಚ ಲಸಿತಾ–ಶೋಭಿಸುವ ಕುರುಳು ಉಳ್ಳವಳೆ ; ಸರಸ ಕವಿತಾ ನಿಚಿತ-ಸರಸವಾದ ಕವಿತೆಗಳಿಂದ ಆವೃತಳಾದವಳೆ ; ಸಾರ-ಸಾರವತ್ತಾದ ; ಘನಸಾರ–ಕರ್ಪೂರದಂತೆ ; ಸಿತ–ಬೆಳ್ಳಗಿರುವ ; ಧರಹಸಿತಾ-ಮುಗುಳ್ನಗೆಯುಳ್ಳವಳೆ ; ವಾರಿರುಹ–ತಾವರೆಯಂತೆ ; ಉಚಿತವದನ–ಸುಂದರವಾದ ಮುಖವುಳ್ಳವಳೆ ; ವಾಗೀಶ–ಬ್ರಹ್ಮನಿಂದ ; ವಿನುತ–ಸ್ತುತಳಾದವಳೆ ; ಭೃತನತ-ಈಶ್ವರನಿಂದ ನಮಿಸಲ್ಪಟ್ಟವಳೆ ; ನಾರಾಯಣಿ, ಶ್ಯಾಮ ಕೃಷ್ಣನುತ–ಶ್ಯಾಮಕೃಷ್ಣ [ಅಂಕಿತ] ನಿಂದ ಸ್ತುತಿಸಲ್ಪಟ್ಟವಳೆ ; ಗಿರಿಸುತ–ಪಾರ್ವತಿಯೆ ; ನಾ ಮನವಿನಿ ವಿನು–ನನ್ನ ಮನವಿಯನ್ನು ಕೇಳು.

ತಾತ್ಪರ್ಯ : ನನಗೆ ಆರೋಗದೃಢಕಾಯವಾಗುವಂತೆ ಅನುಗ್ರಹಿಸು. ನೀನು ಪರಿಶುದ್ಧವಾದ ಗುಣಗಳುಳ್ಳವಳು, ತ್ರಿಪುರಸುಂದರಿ, ಭಕ್ತರನ್ನು ಸಲಹುವವಳು, ವೇದಗಳು ಮೊರೆಯಿಡುವಂಥವಳು, ಓಂಕಾರಿ, ವಿಧಿರೂಪಳು, ಕಲಕಿಹೋಗಿರುವ ಮನಸ್ಸುಳ್ಳ ನಾನು ಬೇರೆ ಗತಿಗಾಣದೆ ನನ್ನ ವ್ಯಥೆ ತೀರಿಸಲು ನೀನೊಬ್ಬಳೇ ತಕ್ಕವಳೆಂದು ಬೇಡುತ್ತಿದ್ದೇನೆ. ಕರ್ಪೂರದಂತೆ ಬೆಳ್ಳಗಿನ ಮುಗುಳುನಗೆಯುಳ್ಳ, ಮೇಘದಂತೆ ನೀಲವರ್ಣದ ಕೂದಲುಳ್ಳ, ತಾವರೆಯಂತೆ ಸುಂದರವಾದ ಮುಖವುಳ್ಳ ದೇವಿ ನೀನು. ಬ್ರಹ್ಮ ಈಶ್ವರರಿಂದ ನುತಳಾದವಳು. ನನ್ನ ಮೊರೆಯನ್ನು ಕೇಳಿ ಸಲಹನ್ನು.

ಮುದ್ದುಸ್ವಾಮಿ ದೀಕ್ಷಿತರು

57. ರಾಗ : ಸಾವೇರಿ ರೂಪಕತಾಳ

ಪಲ್ಲವಿ : ಕರಿ ಕಲಭ ಮುಖಂ ಧುಂಡಿ ಗಣೇಶಂ ಭಜರೇ ರೇ ಚಿತ್ತ
ಕಾವೇರಿ ತಟಸ್ಥಿತಂ ಸಾವೇರೀ ರಾಗನುತಂ ||

ಅನುಪಲ್ಲವಿ : ಹರಿ ಹಯಾದಿ ಸಕಲ ದೇವತಾರಾಧಿತ ಪಾದಾಂಬುಜಂ
ಗಿರಿಜಾ ತನುಜಂ ವಿಜಿತ ಮನಸಿಜಂ ಗುರುಗುಹಾಗ್ರಜಂ ||

ಚರಣ : ಮೂಲಾಧಾರ ಚತುರ್ದಳ ಪಂಕಜ ಮಧ್ಯಸ್ಥಂ
ಮೋದಕ ಹಸ್ತಂ ಮುನಿಜನ ಹೃತ್ಕಮಲಸ್ಥಂ
ಬಾಲಚಂದ್ರಂ ಸುಮುಖಂ ಕರುಣಾಸಾಂದ್ರಂ
ಪಾಶಾಂಕುಶಧರಂ ಪದ್ಮಕರಂ ಸುಂದರಂ
ನೀಲಗ್ರೀವ ಕುಮಾರಂ ನೀರದ ಶೋಭಾಹರಂ
ಪಾಲಿತ ಭಕ್ತಂ ಧೀರಂ ಅಪಾರಂ ವಾರಂ ||

ಅರ್ಥ : ಕರಿ ಕಲಭ ಮುಖಂ-ಆನೆ ಮರಿಯ ಮುಖವುಳ್ಳ ; ಧುಂಡಿ ಗಣೇಶನನ್ನು ; ರೇ ಚಿತ್ತ-ಎಲೆ ಚಿತ್ತವೆ ; ಭಜರೇ-ಭಜಿಸು ; ಕಾವೇರೀ ತಟಸ್ಥಿತಂ-ಕಾವೇರೀ ನದಿಯ ತೀರದಲ್ಲಿ ನೆಲೆಸಿದ ; ಸಾವೇರೀ ರಾಗದಿಂದ ನುತನಾದ ಗಣೇಶನನ್ನು ಭಜಿಸು. ಹರಿಹಯಾದಿ-ವಿಷ್ಣು, ಇಂದ್ರರೇ ಮೊದಲಾದ ; ಸಕಲ ದೇವತಾರಾಧಿತ-ಸಕಲ ದೇವತೆಗಳಿಂದ ಪೂಜೆಗೊಂಡ ; ಪಾದಾಂಬುಜಂ-ಪಾದ ಕಮಲಗಳುಳ್ಳವನು ; ಗಿರಿಜಾತನುಜಂ-ಪಾರ್ವತಿಯ ಪುತ್ರನು ; ವಿಜಿತಮನಸಿಜಂ-ಮನ್ಮಥನನ್ನು ಗೆದ್ದವನು ; ಗುರುಗುಹಾಗ್ರಜಂ-ಗುರುಗುಹನ (ಷಣ್ಮುಖನ) ಅಣ್ಣನು ; ಮೂಲಾಧಾರ ಚತುರ್ದಳ ಪಂಕಜ-ಮೂಲಾಧಾರದ ನಾಲ್ಕು ದಳದ ಕಮಲದ ; ಮಧ್ಯಸ್ಥಂ-ಮಧ್ಯೆ ನೆಲೆಸಿದವನು; ಮೋದಕ ಹಸ್ತಂ-ಕೈಯಲ್ಲಿ ಮೋದಕವನ್ನು ಹಿಡಿದವನು; ಮುನಿಜನ ಹೃತ್ಕಮಲಸ್ಥಂ-ತಪಸ್ವಿಗಳ ಹೃದಯ ಕಮಲದಲ್ಲಿ ನೆಲೆಸಿದವನು ; ಬಾಲಚಂದ್ರಂ ಸುಮುಖಂ-ಬಾಲಚಂದ್ರನಂತೆ ಸುಂದರವಾದ ಮುಖವುಳ್ಳವನು ; ಕರುಣಾಸಾಂದ್ರಂ-ಆಳವಾದ ಕರುಣೆಯುಳ್ಳವನು ; ಪಾಶಾಂಕುಶಧರಂ-ಪಾಶ ಅಂಕುಶಗಳನ್ನು ಧರಿಸಿದವನು ; ಪದ್ಮಾಕರಂ-ಕೈಯಲ್ಲಿ ತಾವರೆ ಹಿಡಿದವನು ; ಸುಂದರನು ; ನೀಲಗ್ರೀವ ಕುಮಾರಂ-ಈಶ್ವರನ ಪುತ್ರನು ; ನೀರದ ಶೋಭಾಹರಂ-ಮೇಘದ ಸೌಂದರ್ಯವನ್ನು ಮೀರಿಸುವ ಸೌಂದರ್ಯವುಳ್ಳವನು ; ಪಾಲಿತಭಕ್ತಂ-ಭಕ್ತರನ್ನು ಪಾಲಿಸುವವನು, ಧೀರನು ; ಇಂಥ ಧುಂಡಿ ಗಣೇಶನನ್ನು ; ವಾರಂ-ಸದಾ ; ಅಪಾರಂ-ವಿಶೇಷವಾಗಿ' ಭಜಿಸು.

ತಾತ್ಪರ್ಯ : ಎಲೆ ಮನಸ್ಸೇ, ವಿಷ್ಣು ಇಂದ್ರ ಮೊದಲಾದ ಸಕಲದೇವತೆಗಳಿಂದಲೂ ಪೂಜಿತನಾದ, ಮನ್ಮಥನನ್ನು ಜಯಿಸಿದ, ಕರುಣಾಸಾಗರನಾದ, ಸುಂದರನಾದ ಧುಂಡಿಗಣೇಶನನ್ನು ಸದಾ ಭಜಿಸು.

**58.** ರಾಗ : ಗೌಳ ತ್ರಿಪುಟತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶ್ರೀಮಹಾಗಣಪತಿರವತು ಮಾಂ ಸಿದ್ಧಿ ವಿನಾಯಕೋ ಮಾತಂಗಮುಖ ||

ಅನುಪಲ್ಲವಿ : ಕಾಮಜನಕ ವಿಧೀಂದ್ರ ಸನ್ನುತ | ಕಮಲಾಲಯ ತಟ ನಿವಾಸೋ
ಕೋಮಲತರ ಪಲ್ಲವ ಪದಕರ ಗುರುಗುಹಾಗ್ರಜೋ ಶಿವಾತ್ಮಜಃ ||

ಚರಣ : ಸುವರ್ಣಾಕರ್ಷಣ ವಿಘ್ನರಾಜೋ ಪಾದಾಂಬುಜೋ ಗೌರವರ್ಣವಸನಧರೋ
ಫಾಲಚಂದ್ರೋ ನರಾದಿ ವಿನುತ ಲಂಬೋದರೋ ||
ಕುವಲಯಾಸ್ಯವಿಷಾಣ ಪಾಶಾಂಕುಶ ಮೋದಕ ಪ್ರಕಾಶಕರೋ
ಭವಜಲಧಿನಾವೋ ಮೂಲ ಪ್ರಕೃತಿ ಸ್ವಭಾವಃ ಸುಖತರೋ
ರವಿಸಹಸ್ರ ಸನ್ನಿಭ ದೇಹೋ ಕವಿಜನನುತ ಮೂಷಕವಾಹೋ
ಅವನತ ದೇವತಾ ಸಮೂಹೋ ಅವಿನಾಶ ಕೈವಲ್ಯಗೇಹಃ ||

ಅರ್ಥ : ಮಾತಂಗಮುಖ-ಆನೆಯ ಮುಖವನ್ನುಳ್ಳ ; ಸಿದ್ಧಿ ವಿನಾಯಕನು, ಶ್ರೀಮಹಾಗಣಪತಿಯು ; ಅವತು ಮಾಂ-ನಮ್ಮನ್ನು ರಕ್ಷಿಸಲಿ ; ಕಾಮಜನಕ-ವಿಷ್ಣು ; ವಿಧಿ-ಬ್ರಹ್ಮ ; ಇಂದ್ರ ಮೊದಲಾದವರಿಂದ, ಸನ್ನುತ-ಸ್ತುತಿಸಲ್ಪಟ್ಟ; ಕಮಲಾಲಯತಟ-ಸರೋವರದ ದಡದಲ್ಲಿ; ನಿವಾಸೋ-ನೆಲೆಸಿದ ; ಕೋಮಲತರ-ಕೋಮಲವಾದ ; ಪಲ್ಲವ ಪದಕರ-ಚಿಗುರಿನಂತಹ ಪಾದಗಳು, ಕೈಗಳು ಉಳ್ಳ ; ಗುರುಗುಹಾಗ್ರಜಃ-ಗುರುಗುಹನ ಅಣ್ಣನಾದ ; ಶಿವಾತ್ಮಜಃ-ಪರಮೇಶ್ವರನ ಪುತ್ರನಾದ ಮಹಾಗಣಪತಿಯು ನಮ್ಮನ್ನು ರಕ್ಷಿಸಲಿ ; ಸುವರ್ಣ-ಒಳ್ಳೆಯ ವರ್ಣವುಳ್ಳ ;

ಕರ್ಷಣ–ಆಕರ್ಷಕನಾದ; ವಿಘ್ನರಾಜನು ; ಪಾದಾಂಬುಜೋ–ತಾವರೆಗಳಂತಹ ಪಾದಗಳುಳ್ಳ ; ಗೌರವರ್ಣ ವಸನಧರೋ–ಗೌರವರ್ಣದ ವಸ್ತ್ರಗಳನ್ನು ಧರಿಸಿದ ; ಫಾಲಚಂದ್ರೋ–ನೆತ್ತಿಯಲ್ಲಿ ಚಂದ್ರನನ್ನು ಧರಿಸಿದ ಈಶ್ವರನಿಂದಲೂ ; ನರಾದಿ–ವಿಷ್ಣುವೇ ನೊದಲಾದವರಿಂದಲೂ ; ವಿನುತ–ಸ್ತುತನಾದ ; ಲಂಬೋದರನು ; ಕುವಲಯಾಸ್ಯ ವಿಷಾಣ–ಆನೆಯ ಮುಖ ಮತ್ತು ದಂತಗಳುಳ್ಳವನು ; ಪಾಶ ಅಂಕುಶ ಮೋದಕ ಪ್ರಕಾಶಕರೋ–ಇವುಗಳನ್ನು ಕೈಗಳಲ್ಲಿ ಹಿಡಿದು ಶೋಭಿಸುವವನು ; ಭವಜಲಧಿನಾವಃ–ಈ ಸಂಸಾರವೆಂಬ ಸಾಗರವನ್ನು ದಾಟಲು ನಾವೆಯಂತಿರುವವನು ; ಮೂಲಪ್ರಕೃತಿ ಸ್ವಭಾವನು ; ಸುಖ ಕರನು, ರವಿ ಸಹಸ್ರ ಸನ್ನಿಭದೇಹೋ–ಸಾವಿರ ಸೂರ್ಯರಿಗೆ ಸಮಾನವಾದ ದೇಹವುಳ್ಳವನು ; ಕವಿಜನ–ವಿದ್ವಾಂಸರಿಂದ ; ನುತ–ಸ್ತುತಿಸಲ್ಪಟ್ಟವನು ; ಮೂಷಕವಾಹೋ–ಇಲಿಯನ್ನು ಏರಿ ಕುಳಿತವನು ; ಅವನತ ದೇವತಾ ಸಮೂಹೋ–ದೇವತೆಗಳಿಂದ ನಮಸ್ಕೃತನಾದವನು ; ಅವಿನಾಶ–ನಾಶವಾಗದ ; ಕೈವಲ್ಯ ಗೇಹಃ–ಮೋಕ್ಷಕ್ಕೆ ನೆಲೆಮನೆಯಾದವನು–ಇಂತಹ ಶ್ರೀ ಮಹಾಗಣಪತಿಯು ನಮ್ಮನ್ನು ಕಾಪಾಡಲಿ.

ಮೈಸೂರು ವಾಸುದೇವಾಚಾರ್ಯರು

59. ರಾಗ : ಗೌಳ ಆದಿತಾಳ

ಪಲ್ಲವಿ : ಪ್ರಣಮಾಮ್ಯಹಂ ಶ್ರೀ ಗೌರೀಸುತಂ
ಫಣಿತಲ್ಪ ವಾಸುದೇವ ಭಕ್ತಂ ಸತತಂ ||

ಅನುಪಲ್ಲವಿ : ಗಣನಾಥಮಮರ ಬೃಂದ ಸೇವಿತಂ
ಫಣಿಹಾರ ಭೂಷಿತಂ ಮುನಿವರ ವಂದಿತಂ ||

ಚರಣ : ಧೃತ ಚಾರುಮೋದಕಂ ಗಜಮುಖಂ | ಸಿತಕರಾಮಿತಗರ್ವಭಂಜಕಂ
ನತಲೋಕ ಸಂತೋಷ ದಾಯಕಂ | ಶ್ರಿತಭಕ್ತಪಾಲಕಂ ಸಿದ್ಧಿ ವಿನಾಯಕಂ ||

ಅರ್ಥ : ಶ್ರೀ ಗೌರಿಸುತಂ–ಗೌರೀ ಪುತ್ರನಾದ ; ಫಣಿತಲ್ಪ–ಹಾವು ಹಾಸಿಗೆಯ ಮೇಲೆ ಮಲಗಿದ ; ವಾಸುದೇವನ [ಅಂಕಿತ] ಭಕ್ತನಾದ ಸಿದ್ಧಿ ವಿನಾಯಕನನ್ನು ; ಅಹಂ–ನಾನು ; ಪ್ರಣಮಾಮಿ–ನಮಸ್ಕರಿಸುತ್ತೇನೆ. ಗಣನಾಥಂ–ಗಣಗಳಿಗೆ ಒಡೆಯನು ; ಅಮರ ಬೃಂದ ಸೇವಿತಂ–ದೇವತೆಗಳ ಸಮೂಹದಿಂದ ಸೇವೆಗೊಂಡವನು ; ಫಣಿಹಾರ ಭೂಷಿತಂ–ಸರ್ಪ ಹಾರದಿಂದ ಅಲಂಕೃತನಾದವನು ; ಮುನಿವರ ವಂದಿತಂ–ಮುನಿಗಳಿಂದ ವಂದಿತನಾದವನು ; ಚಾರು–ಮನೋಹರವಾದ ; ಧೃತಮೋದಕಂ–ಮೋದಕವನ್ನು ಹಿಡಿದವನು ; ಸಿತಕರ–ಚಂದ್ರನ ; ಅಮಿತಗರ್ವ ಭಂಜಕಂ–ಅಪಾರವಾದ ಗರ್ವವನ್ನು ನಾಶಮಾಡಿದನನು ; ನತ ಲೋಕ ಸಂತೋಷದಾಯಕಂ–ಸೇವಿಸಿದ ಲೋಕದ ಜನರಿಗೆಲ್ಲ ಸಂತೋಷವುಂಟುಮಾಡುವವನು ; ಶ್ರಿತಭಕ್ತ ಪಾಲಕಂ–ಆಶ್ರಿತರಾದ ಭಕ್ತರನ್ನು ಪಾಲಿಸುವವನು ; ಇಂತಹ ಸಿದ್ಧಿ ವಿನಾಯಕನನ್ನು ನಾನು ನಮಸ್ಕರಿಸುತ್ತೇನೆ.

ವಾಲಾಜಪೇಟೆ ವೆಂಕಟರಮಣ ಭಾಗವತರು

60 ರಾಗ : ಗೌಳ ಆದಿತಾಳ

ಪಲ್ಲವಿ : ಭಜರೇ ಮಾನಸ ಶ್ರೀ ರಘುವೀರಂ ಭಕ್ತಜನಾಧಾರಂ

ಅನುಪಲ್ಲವಿ : ಅಜಮಹಾರಾಜಾತ್ಮಜ ವರಪುತ್ರಂ ||
ನಿಜದಾಸ ಹೃದಯ ನೀರಜ ಮಿತ್ರಂ ||

ಚರಣ : ಸನಕ ಸನಂದನ ಸನ್ನುತ ಚರಿತಂ
ಸಕಲ ಜಗದ್ಭರಿತಂ

ಅನವರತಾಶ್ರಿತ ಕಲುಷಬ್ರಹದಂ
ಅವ್ಯಾಜ ಕೃಪಯಾಮೃತ ಪರಿತಂ
ಶ್ಯಾಮಳ ಸನ್ನಿಭ ಸುಂದರ ಗಾತ್ರಂ
ಚಂದ್ರ ಕಳಾಧರ ಮಿತ್ರಂ
ರಾಮಚಂದ್ರಪುರ ವರಶ್ರೀ ವೆಂಕಟ
ರಮಣ ಭಾಗವತ ಸನ್ನುತಿ ಪಾತ್ರಂ ||

ಅರ್ಥ : ರೇ ಮಾನಸ-ಎಲೆ ಮನಸ್ಸೆ ; ಶ್ರೀ ರಘುವೀರಂ-ಶ್ರೀ ರಾಮಚಂದ್ರನನ್ನು ; ಭಕ್ತ ಜನಾಧಾರಂ-ಭಕ್ತಜನರಿಗೆ ಆಧಾರನಾದವನನ್ನು ; ಭಜ-ಪ್ರಾರ್ಥಿಸು ; ಅಜಮಹಾರಾಜಾತ್ಮಜ ವರಪುತ್ರಂ-ಅಜಮಹಾರಾಜನ ಪುತ್ರನಾದ ದಶರಥನ ಮಗನೂ ; ನಿಜದಾಸಹೃದಯ ನೀರಜ ಮಿತ್ರಂ-ದಾಸರಾದವರ ಹೃದಯ ಕಮಲಗಳಿಗೆ ಸೂರ್ಯನಂತಿರುವವನೂ ; ಸನಕ ಸನಂದನರಿಂದ, ಸನ್ನುತ-ಸ್ತುತಿಸಲ್ಪಟ್ಟ ; ಚರಿತಂ-ಚಾರಿತ್ರವುಳ್ಳವನೂ ; ಸಕಲ ಜಗದ್ಭರಿತಂ-ಸಕಲ ಜಗತ್ತುಗಳನ್ನು ತುಂಬಿಕೊಂಡಿರುವವನೂ ; ಅನವರತ-ಯಾವಾಗಲೂ ; ಆಶ್ರಿತರ ಕಲುಷಗಳನ್ನು ಹೋಗಲಾಡಿಸುವವನೂ ; ಅವ್ಯಾಜ-ಕಾರಣವಿಲ್ಲದೆ ; ಕೃಪಯಾ ಅಮೃತ ಪರಿತಂ-ಕೃಪೆಯ ಅಮೃತವನ್ನು ಹರಿಸಿದವನು ; ಶ್ಯಾಮಳ ಸನ್ನಿಭ ಸುಂದರ ಗಾತ್ರಂ-ಶ್ಯಾಮಲನಾದ ಸುಂದರವಾದ ದೇಹವುಳ್ಳವನು ; ಚಂದ್ರಕಳಾಧರ ಮಿತ್ರಂ-ಚಂದ್ರನನ್ನು ಧರಿಸಿದ ಈಶ್ವರನ ಮಿತ್ರನು ; ರಾಮಚಂದ್ರಪುರದ ವೆಂಕಟರಮಣ ಭಾಗವತನ ; ಸನ್ನುತಿ ಪಾತ್ರಂ-ಸ್ತುತಿಗೆ ಒಳಗಾದವನು.

ಸಾರಾಂಶ : ಸನಕಾದಿಗಳಿಂದ ಸ್ತುತನೂ, ದಶರಥ ಪುತ್ರನೂ, ಆಶ್ರಿತರ ದುಃಖಗಳನ್ನು ನಿವಾರಿಸುವವನೂ ಕೃಪೆಯ ಅಮೃತಸಾಗರವನ್ನು ಹರಿಸಿದವನೂ, ಶ್ಯಾಮಲಸುಂದರನಾದ ದೇಹವುಳ್ಳವನೂ ಆದ ರಘುವೀರನನ್ನು ಸ್ತುತಿಸು, ಎಲೆಮನಸ್ಸೇ ಅವನನ್ನು ಭಜಿಸು.

ವಾಲಾಜಪೇಟೆ ವೆಂಕಟರಮಣ ಭಾಗವತರು

61 ರಾಗ : ಮೋಹನ ಆದಿತಾಳ

ಪಲ್ಲವಿ : ರಾಧಾರಮಣ ರಕ್ಷಮಾಂ ಅನಿಶಂ

ಅನುಪಲ್ಲವಿ : ಮಾಧವ ನಾಗಾಂತಕವರ ವಾಹಾ
ಸಾಧಿತ ಕೌರವ ಸೈನ್ಯ ಸಮೂಹ ||

ಚರಣ : ಪಾಂಡವ ಪಕ್ಷ ಭಕ್ತ ಸಂರಕ್ಷ
ಪುಂಡರೀಕಾಕ್ಷ ಭುವನಾಧ್ಯಕ್ಷ
ಪಂಡಿತ ಮಾನವ ಪಾಲನ ಲೋಲ
ಖಂಡಿತ ದಾನವ ಕಾಲ ಸುಶೀಲ ||

2. ಶಂಕರ ಹಿತವರ ಶಂಖ ಚಕ್ರಧರ
ಶಂಕರ ಭಕ್ತವಶಂಕರ ರೂಪ
ಪಂಕಜ ಭವ ಮೀನಾಂಕ ಜನಕ ಹರಿ
ಣಾಂಕ ರವಿನಯನ ಸಂಕಟ ಹರ ಶ್ರೀ ||

3. ರಾಮಚಂದ್ರ ಪರಂಧಾಮ ಸಾರ್ವಭೌಮ
ರಾಮದಾಸನುತ ನಿರ್ಮಲನಾಮ

ರಾಮಚಂದ್ರಪುರ ವರ ಶ್ರೀ ವೆಂಕಟ
ರಮಣ ಭಾಗವತ ಪಾಲನ ಭೌಮ ॥

ಅರ್ಥ : ರಾಧಾರಮಣ–ರಾಧೆಯ ಪತಿಯಾದ ಶ್ರೀ ಕೃಷ್ಣನೆ ; ಅನಿಶಂ–ಯಾವಾಗಲೂ ; ರಕ್ಷಮಾಂ–ನನ್ನನ್ನು ರಕ್ಷಿಸು ; ಮಾಧವನೆ, ನಾಗಾಂತಕವರ ವಾಹಾ–ನಾಗಗಳಿಗೆ ಮೃತ್ಯುವಾದ ಗರುಡನನ್ನು ವಾಹನವಾಗಿ ಉಳ್ಳವನೆ ; ಸಾಧಿತ ಕೌರವ ಸೈನ್ಯ ಸಮೂಹ–ಕೌರವ ಸೈನ್ಯವನ್ನು ಗೆದ್ದವನೆ (ಅರ್ಜುನನಿಗೆ ಸಾರಥಿಯಾಗಿ ಕೌರವರನ್ನು ಗೆಲ್ಲಿಸಿದುದರ ಉಲ್ಲೇಖ) ಪಾಂಡವರ ಪಕ್ಷಕ್ಕೆ ಸೇರಿದವನು ; ಭಕ್ತರನ್ನು ರಕ್ಷಿಸುವವನು ; ಪುಂಡರೀಕ ಅಕ್ಷ–ತಾವರೆಯಂತೆ ಕಣ್ಣುಳ್ಳವನು ; ಭುವನಾಧ್ಯಕ್ಷ–ಜಗತ್ತಿಗೆ ಅಧಿಪತಿಯು, ಪಂಡಿತ ಮಾನವ ಪಾಲನಲೋಲ–ಜ್ಞಾನಿಗಳನ್ನು ಕಾಪಾಡುವುದರಲ್ಲಿ ಆಸಕ್ತನು ; ಖಂಡಿತ ದಾನವ ಕಾಲ–ರಾಕ್ಷಸರನ್ನು ನಾಶಮಾಡಿದವನು ; ಸುಶೀಲ–ಸಚ್ಚರಿತ್ರನು ; ಶಂಕರ ಹಿತವರ–ಪರಮೇಶ್ವರನ ಮಿತ್ರನು ; ಭಕ್ತವಶಂಕರ–ಭಕ್ತರ ವಶನಾದವನು ; ಪಂಕಜ ಭವ–ಬ್ರಹ್ಮ ; ಮೀನಾಂಕ ಜನಕ–ಮೀನಾಂಕ ಅಂದರೆ ಮನ್ಮಥನ ತಂದೆಯಾದವನು ; ಹರಿಣಾಂಕ ರವಿ ನಯನ–ಚಂದ್ರ ಹಾಗೂ ಸೂರ್ಯರನ್ನೇ ಕಣ್ಣುಗಳಾಗಿ ಉಳ್ಳವನು ; ಸಂಕಟಗಳನ್ನು ಪರಿಹರಿಸುವವನು ; ರಾಮಚಂದ್ರ, ಪರಂಧಾಮ ಸಾರ್ವಭೌಮ, ರಾಮದಾಸನಿಂದ ಸ್ತುತನಾದ ನಿರ್ಮಲ ನಾಮನು ; ರಾಮಚಂದ್ರಪುರದ ವೆಂಕಟರಮಣ ಭಾಗವತನನ್ನು ಪಾಲಿಸುವವನು; ಭೌಮ–ಶ್ರೇಷ್ಠನು, ಇಂತಹ ರಾಧಾರಮಣನು ನನ್ನನ್ನು ರಕ್ಷಿಸಲಿ.

ತಾತ್ಪರ್ಯ : ಕೌರವ ಸೇನೆಯನ್ನು ಸಾಧಿಸಿಕೊಂಡ, ಗರುಡ ವಾಹನನಾದ ಶ್ರೀ ಕೃಷ್ಣನೆ ನನ್ನನ್ನು ರಕ್ಷಿಸು. ಚಂದ್ರಸೂರ್ಯರನ್ನೇ ಕಣ್ಣುಗಳಾಗಿ ಉಳ್ಳ, ಭಕ್ತರಿಗೆ ವಶನಾದ, ಮನ್ಮಥನ ತಂದೆಯಾದ ಶ್ರೀ ಕೃಷ್ಣನೆ ನನ್ನನ್ನು ಕಾಪಾಡು.

ಪಾಪನಾಶಂ ಶಿವನ್

62 ರಾಗ : ಮೋಹನ ಆದಿತಾಳ

ಪಲ್ಲವಿ : ಕಾಪಾಲಿ ಕರುಣೈ ನಿಲವು ಪೊಳಿವದನ ಮದಿಯನೊರು ॥

ಅನುಪಲ್ಲವಿ : ಆಬಾಲ ಗೋಪಾಲನ್ ಆಟಿಸೂಟಿಟ್ ತಲತ್ತವರುಂ
ಭೂಪಾಲರುಂ ಅಷ್ಟ ದಿಕ್ಪಾಲರುಂ ಪೋಟ್ರುಮದ್ಭುತ ॥

ಚರಣ : ಮದಿಪುನಲ್ ಅರವುಕ್ಕೊನ್ರೈ ದುಂಬೈ ಅರುಗುಂ
ಮತ್ತೈ ಪುನೈ ಮಾಶಡೈಯಾನ್
ವಿಧಿ ತಲೈಮಾಲೈ ಮಾರ್ಬನ್ ಉರಿತ್ತ ಕರಿಯಿನ್
ವೆಂಪುಲಿಯಿನ್ ತೋಲುಡೈಯಾನ್

ಅದಿರ ಮಳಂಗುಂ ಉಡುಕ್ಕೆಯುಂ ತಿರಿಶೂಲಮುಂ
ಅಂಗಿಯುಂ ಕುರಂಗಮುಂ ಇಲಂಗಿಡು ಕೈಯಾನ್
ದ್ಯುತಿ ಮಿಗುತ್ತಿರುಮೇನಿ ಮುಳುದುಂ ಶಾಂಬಲ್
ದುಲಂಗೆ ಎದಿರ್ ಮಂಗೈಯರ್ ಮನಂ ಕವರ್ ಜಗನ್ಮೋಹನ ॥

ಅರ್ಥ : ಕರುಣೈ ನಿಲವು–ಕರುಣೆಗೆ ನಿಲವಾದ ; ಪೊಳಿವದನ–ಕರುಣೆ ಹರಿಯುವ ; ಮದಿಯನ್–ಮುಖವುಳ್ಳ ; ಒರುಕಾಪಾಲಿ–ಕಾಪಾಲಿ ವೇಷದ ಶಿವನೆ ; ಆಬಾಲ ಗೋಪಾಲನ್–ಬ್ರಹ್ಮ ವಿಷ್ಣು

ಗಳು ; ಆಟ್ಟಿ ಸೂಟ್ಟ್ ತಲತ್ತವರುಂ-ಸಾಗರ ಪರಿವೃತರಾದವರು ; ಭೂಪಾಲರೂ ಅಷ್ಟ ದಿಕ್ಪಾಲರೂ ; ಪೋಟ್ರುಂ-ಹೊಗಳುತ್ತಿರುವ, ಅದ್ಭುತ ಕಾಪಾಲಿ ನೀನು.

ಮದಿ-ಬಾಲಚಂದ್ರ ; ಪುನಲ್-ಗಂಗೆ ; ಅರವು-ಸರ್ಪ ; ಕೊನ್ರೈ-ಹೂವು, ತುಂಬೈ-ತುಂಬೆಹೂವು ; ಅರುಗುಂ-ಗರಿಕೆ ; ಮತ್ತೈ-ಉಮ್ಮತ್ತಿ ; ಪುನೈ- ಇವುಗಳಿಂದ ಅಲಂಕೃತವಾದ, ಮಾಶಡೈಯಾನ್-ಮಹಾಜಟೆಯುಳ್ಳವನು. ವಿಧಿತಲೈ ಮಾಲೈ ಮಾರ್ಬನ್-ಬ್ರಹ್ಮ ಕಪಾಲಗಳಿಂದಾದ ರುಂಡ ಮಾಲೆಯನ್ನು ಧರಿಸಿದವನು ; ಉರಿತ್ತ ಕರಿಯಿನ್-ಕೊಂದ ಗಜಾಸುರನ ; ವೆಂಪುಲಿಯಿನ್-ವ್ಯಾಘ್ರಾಸುರನ ; ತೋಲುಡೈಯಾನ್-ಚರ್ಮಗಳನ್ನು ಧರಿಸಿದವನು ; ಅದಿರಮುಳಂಗುಂ-ಅನುರಣಿಸುವ ; ಉಡುಕ್ಕೈಯುಂ-ಡಮರುಗವೂ ; ತಿರಿಶೂಲಮುಂ-ತ್ರಿಶೂಲವೂ ; ಅಂಗಿಯುಂ-ಅಗ್ನಿಯೂ ; ಕುರಂಗಮುಂ-ಜಿಂಕೆಯೂ ; ಇಲಂಗಿಡುಕ್ಕೈಯಾನ್-ಸೌಂದರ್ಯವನ್ನು ಹೆಚ್ಚಿಸುತ್ತಿರುವ ಕೈಯುಳ್ಳವನು ; ದ್ಯುತಿ ಮಿಗುತ್ತಿರು ಮೇನಿ ಮುಳುದುಂ-ಸಂಪೂರ್ಣವಾದ ಕಾಂತಿಯಿಂದ ಶೋಭಿತನಾಗಿ, ಶಾಂಬಲ್-ವಿಭೂತಿಯಿಂದ, ತುಲಂಗೆ-ಪ್ರಕಾಶಮಾನವಾದ, ಎದಿರ್ ಮಂಗೈಯರ್-ಎದುರಾದ ಸ್ತ್ರೀಯರನ್ನು, ಮನಂಕವರ್-ಮನಸ್ಸನ್ನು ಆಕರ್ಷಿಸುವ ಜಗನ್ಮೋಹನ ಕಾಪಾಲಿ ನೀನು.

ತಾತ್ಪರ್ಯ : ನಿನ್ನ ನಿಲವೇ ಕರುಣೆಯ ನಿಲವು, ಕರುಣೆ ಸೂಸುವ ಮುಖ ನಿನ್ನದು, ಅದ್ಭುತ ವೇಷದ ಕಾಪಾಲಿ ಶಿವನೆ, ಬ್ರಹ್ಮ ವಿಷ್ಣುಗಳೂ, ಭೂಪಾಲ ದಿಕ್ಪಾಲರೂ ನಿರಂತರವಾಗಿ ಹೊಗಳುತ್ತಿರುವ ಕಾಪಾಲಿ ನೀನು. ಚಂದ್ರ, ಗಂಗೆ, ಸರ್ಪ, ತುಂಬೆಹೂವು, ಗರಿಕೆ, ಉಮ್ಮತ್ತಿ ಇವುಗಳಿಂದ ಅಲಂಕೃತವಾದ ಮಹಾಜಟಾಜೂಟನು ನೀನು. ಬ್ರಹ್ಮಕಪಾಲಗಳ ಮಾಲೆಯನ್ನು ಧರಿಸಿದ, ಗಜಾಸುರ ವ್ಯಾಘ್ರಾಸುರರ ಚರ್ಮಗಳನ್ನು ಧರಿಸಿದ, ಮೊಳಗುವ ಡಮರುಗ, ತ್ರಿಶೂಲ, ಅಗ್ನಿ, ಜಿಂಕೆ, ಇವು ಕೈಗಳ ಸೌಂದರ್ಯವನ್ನು ಅಧಿಕಗೊಳಿಸುತ್ತಿರಲು, ವಿಭೂತಿ ಧರಿಸಿ, ಸ್ತ್ರೀಯರ ಮನಸ್ಸು ಅಪಹರಿಸುವ ಜಗನ್ಮೋಹಕನಾದ ಕಾಪಾಲಿ ಶಿವ ನೀನು.

ಮುದ್ದುಸ್ವಾಮಿ ದೀಕ್ಷಿತರು

ಆದಿತಾಳ

63 ರಾಗ : ಮೋಹನ

ಪಲ್ಲವಿ : ನಾಗಲಿಂಗಂ ನಮಾಮಿ ಸತತಂ ನಾಮರೂಪ ಪ್ರಪಂಚಾತೀತಲಿಂಗಂ ||

ಅನುಪಲ್ಲವಿ : ನಾಗರಾಜಮಣಿ ಭೂಷಿತಲಿಂಗಂ ಶ್ರೀ ನಾಗರಸ್ಥಿತ ವಲ್ಮೀಕಲಿಂಗಂ ||

ಚರಣ : ಆಗಮವೇದಾಂತ ಸಾರಲಿಂಗಂ ಆದಿಮಧ್ಯಾಂತ ರಹಿತಲಿಂಗಂ
ಮೂಲಭೂತ ಕಾರಣಾತ್ಮಕಲಿಂಗಂ ನೀಲಕಂಠಸ್ವಯಂ ಪ್ರಕಾಶಲಿಂಗಂ
ನಾಗೇಂದ್ರವಿನುತ ಶಂಕರಲಿಂಗಂ ನಾರದಾದಿನುತ ನಂದಿತುರಂಗಂ
ವಾಗೀಶವರದ ಗುರುಗುಹ ಸುಂದರ ಶಿವಮೋಹನ ಕರಲಿಂಗಂ ||

ಅರ್ಥ : ನಾಮರೂಪ ಪ್ರಪಂಚಾತೀತಲಿಂಗಂ-ನಾಮರೂಪಗಳಿಂದ ಕೂಡಿರುವ ಈ ಪ್ರಪಂಚಕ್ಕೆ ಅತೀತವಾಗಿರುವ ಲಿಂಗವಾದ ; ನಾಗಲಿಂಗಂ-ನಾಗಲಿಂಗವನ್ನು ; ಸತತಂ ನಮಾಮಿ-ಸದಾ ನಮಿಸುತ್ತೇನೆ ; ನಾಗರಾಜ- ಆದಿಶೇಷನ ; ಮಣಿ-ಹೆಡೆಯ ರತ್ನದಿಂದ ; ಭೂಷಿತಲಿಂಗಂ-ಅಲಂಕೃತವಾದ ; ಶ್ರೀ ನಾಗರಸ್ಥಿತ-ಶ್ರೀ ನಾಗರಕ್ಷೇತ್ರದಲ್ಲಿ ನೆಲಸಿದ ವಲ್ಮೀಕಲಿಂಗವನ್ನು ನಮಿಸುತ್ತೇನೆ ; ಆಗಮವೇದಾಂತ ಸಾರಲಿಂಗಂ-ವೇದ ವೇದಾಂತಗಳ ಸಾರವಾಗಿರುವ ; ಆದಿಮಧ್ಯಾಂತ ರಹಿತ-ಮೊದಲು ಮಧ್ಯೆ ಕೊನೆಯೆಂಬುದಿರದ ; ಮೂಲಭೂತ ಕಾರಣಾತ್ಮಕ-ಸಮಸ್ತಕ್ಕೂ ಮೂಲ

ಭೂತ ಕಾರಣವಾಗಿರುವ ; ನೀಲಕಂಠ ಸ್ವಯಂ ಪ್ರಕಾಶಲಿಂಗಂ–ನೀಲಕಂಠನಾದ ಶಿವನು ತಾನೇ ಪ್ರಕಾಶಿಸುತ್ತಿರುವ ಲಿಂಗವನ್ನು ; ನಾಗೇಂದ್ರವಿನುತ–ಸರ್ಪರಾಜನಿಂದ ಸ್ತುತನಾದ ; ಶಂಕರ–ಶುಭವನ್ನುಂಟುಮಾಡುವ ; ನಾರದಾದಿನುತ–ನಾರದನೇ ಮುಂತಾದವರ ಸ್ತುತಿಗೊಳಗಾದ ; ನಂದಿತುರಂಗಂ–ನಂದಿಯನ್ನು ವಾಹನವಾಗಿ ಉಳ್ಳ ಶಿವನನ್ನು ; ವಾಗೀಶ ವರದ–ಬ್ರಹ್ಮನಿಗೆ ವರನೀಡಿದ ; ಗುರುಗುಹ ಸುಂದರ–ಗುರುಗುಹನಿಗೆ ಸುಂದರನಾದ ಶಿವನನ್ನು, ಮೋಹನಕರವಾದ ಲಿಂಗವನ್ನು ನಮಿಸುತ್ತೇನೆ.

ತಾತ್ಪರ್ಯ : ವೇದ ವೇದಾಂತಗಳ ಸಾರರೂಪನೂ, ನಾಮರೂಪ ಪ್ರಪಂಚಕ್ಕೆ ಅತೀತನೂ, ಸರ್ಪರಾಜನ ಹೆಡೆಯ ರತ್ನದಿಂದ ಅಲಂಕೃತನಾದವನೂ, ಸಮಸ್ತಕ್ಕೂ ಮೂಲಕಾರಣಭೂತನಾದವನೂ, ಆದಿಮಧ್ಯಾಂತಗಳಿಲ್ಲದವನೂ, ನೀಲಕಂಠನೇ ಸ್ವಯಂ ಪ್ರಕಾಶಿಸುತ್ತಿರುವವನೂ, ನಂದಿವಾಹನನೂ ಆದ ಲಿಂಗರೂಪಿ ಶಿವನನ್ನು ಸದಾ ಪ್ರಾರ್ಥಿಸುತ್ತೇನೆ.

64. ರಾಗ : ಧನ್ಯಾಸಿ ರೂಪಕತಾಳ ವಾಲಾಜಪೇಟೆ ವೆಂಕಟರಮಣ ಭಾಗವತರು

ಪಲ್ಲವಿ : ಕನುಲಾರ ಕಂಟೆನಿಪುಡು ಕಾಂಚಿ ವರದುನಿನೇ

ಅನುಪಲ್ಲವಿ : ಪುನ್ನಮ ಚಂದ್ರುನಿಗೇರು–ಪೂರ್ಣ ವದನುಡೈನ ಹರಿನಿ ||

ಚರಣ 1 ರಾಮಕೃಷ್ಣ ಹರಿಹರಿಯನಿ ನಾಮಕೀರ್ತನಲ ಸೇಯುಚು
ನೇಮಮುತೋ ನಿದುರಜೆಂದ ಸ್ವಾಮಿ ನಿನೆ ಸ್ವಪ್ನಮುನನು ||

2 ಗರುಡಗಮನುಡನುಚು ವೆಡಲಿ ಗಂಗೊನ್ರ ಮಂಟಪ ಮುನ
ಸ್ಥಿರಮುಗಾನು ನೆಲಗೊನು ಯವಸರಮುನ ನಿತ್ಯಪುದುಮುಗ ||

3 ಪರಮ ಭಾಗವತುಲೆಲ್ಲನು ಕರಮುಲ ತಂಬೂರ ಮೆರೆಯ
ಚರಣಮುಲ ಗಜ್ಜಲನುಗಟ್ಟಿ ಹರಿಹರಿಯನಿ ಪೊಗಡುಚುರಾಗಾ ||

4 ವೆಂಕಟಾದ್ರಿ ಮೊದಲು ಬುಧಲು ವಿನತಿ ಸೇಯುಚು ನಟನಮುಲಾಡ
ಸಂಕಟಮುಲು ದೀರೆನನುಚು ಸಾಕ್ಷಾತ್ಕಾರಂಬುನ ನೇ ||

5 ಹರಿ ಹರಿ ಹರಿಯನಿ ಮೊರಲಿಡಗಾ ಪರಮಪದನುನುಂಡಿವೆಡಲಿ
ಸರಗುಣ ಯಾ ಮಕರಿ ದ್ರುಂಚಿ ಕರಿನಿಗಾಚಿ ನಟ್ಟಿವಾರಿನಿ ||

6 ಪಾರ್ಥುನಿ ಸತಿ ಕೃಷ್ಣಾಯನ ಯಾರ್ಥಿನಿ ತೊಲಗಿಂಚಿ ಬ್ರೋಚಿ
ಕೀರ್ತಿಚೆಂದಿ ನಟ್ಟಿ ಕೃಷ್ಣಮೂರ್ತಿನಿ ಪ್ರಣತಾರ್ಥಿಹರುನಿ ||

7 ಗುರುತರ ದೃಢ ಭಕ್ತಿಯುಂದು ಚೂಡನರ್ಥಿಯ್ಯೆ ವೆಲಯುಚು
ಪರನು ಶಾಂತುಡೈನ ಯಟ್ಟಿ ಗುರುಕಟಾಕ್ಷಂಬುನನೇ ||

8 ರಾಮಚಂದ್ರಪುರಿನಿ ವೆಡಲಿ ರಾಮದಾಸು ನೇಲುಕೊರಕು
ನೇಮಮುತೋ ಹಸ್ತಿಗಿರಿನಿ ನೆಲಕೊನು ಶ್ರೀವರದುನಿನೇ ||

ಅರ್ಥ : ಇಪುಡು–ಈಗ ; ಕಾಂಚಿವರದುನಿನೇ–ಕಾಂಚೀಪುರದಲ್ಲಿ ನೆಲಸಿದ ವರದರಾಜನನ್ನೇ ; ಕನುಲಾರ ಕಂಟೆನಿ–ಕಣ್ಣಾರ ನೋಡಿದೆನು ; ಪುನ್ನಮ ಚಂದ್ರುನಿಗೇರು–ಪೂರ್ಣಿಮೆಯ ಚಂದ್ರನನ್ನು ಮೀರಿಸುವ ; ಪೂರ್ಣ ವದನುಡೈನ–ತುಂಬು ಮುಖದ ಹರಿಯನ್ನು ಕಣ್ಣಾರೆ ಕಂಡೆ. ರಾಮ, ಕೃಷ್ಣ, ಹರಿಹರಿ ಎಂದು, ನಾಮಕೀರ್ತನೆ ಮಾಡುತ್ತಾ ; ನೇಮಮುತೋ–ನೇಮದಿಂದ ; ನಿದುರಜೆಂದ–

ನಿದ್ರೆಮಾಡಿ ; ಸ್ವಪ್ನಮುನನು–ಕನಸಿನಲ್ಲಿಯೂ, ನಿನೆ–ನಿನ್ನನ್ನೆ ಕಣ್ಣಾರೆ ಕಂಡೆನು. ಪರಮ ಭಾಗವತುಲೆಲ್ಲನು–ಪರಮ ಭಾಗವತರೆಲ್ಲರೂ ; ಕರಮುಲ–ಕೈಯಲ್ಲಿ ; ತಂಬೂರ ಮೆರೆಯ–ತಂಬೂರಿಯು ಶೋಭಿಸಿರಲು ; ಚರಣಮುಲ ಗಜ್ಜಲನು ಕಟ್ಟಿ–ಕಾಲುಗಳಿಗೆ ಗೆಜ್ಜೆ ಕಟ್ಟಿಕೊಂಡು; ಹರಿಹರಿ ಎಂದು ; ಪೊಗಡುಚು ರಾಗಾ–ಹೊಗಳುತ್ತ ಬರುತ್ತಿರಲು ನಾನು ಕಣ್ಣಾರ ಕಂಡೆ. ವೆಂಕಟಾದ್ರಿ ಮೊದಲು ಬುಧಲು–ವೆಂಕಟಾದ್ರಿಯೇ ಮೊದಲಾದ ವಿದ್ವಜ್ಜನರು ; ವಿನತಿ ಸೇಯುಚು–ನಮಸ್ಕರಿಸುತ್ತ ; ನಟನಮುಲಾಡ–ನಾಟ್ಯವಾಡುತ್ತಿರಲು ; ಸಂಕಟಮುಲು ದೀರೆ ನನುಚು–ನನ್ನ ಸಂಕಟವು ಬಗೆಹರಿಯಲಿ ಎಂದು ; ಸಾಕ್ಷಾತ್ಕಾರಮುನ–ಸಾಕ್ಷಾತ್ತಾಗಿ ; ನೇ–ನಾನು ಕಣ್ಣಾರ ನೋಡಿದೆನು. ಹರಿ ಹರಿ ಹರಿ ಎಂಬುದಾಗಿ ; ಮೊರಲಿಡಗಾ–ಮೊರೆಯಿಡು ತ್ತಿರಲು ; ಆ ಪರಮ ಪದಮುನುಂಡಿ ವೆಡಲಿ–ವೈಕುಂಠವನ್ನು ಬಿಟ್ಟು ಬಂದು ; ಆ ಮಕರಿ ದ್ರುಂಚಿ–ಆ ಮೊಸಳೆಯನ್ನು ಕೊಂದು ; ಕರಿನಿಗಾಚಿನಟ್ಟಿವಾರನಿ–ಗಜೇಂದ್ರನನ್ನು ಕಾಪಾಡಿದ ವನು ಎಂದು ಕಣ್ಣಾರೆ ನೋಡಿದೆ. ಪಾರ್ಥುನಿ ಸತಿ–ಅರ್ಜುನನ ಪತ್ನಿ ದ್ರೌಪದಿಯು ; ಕೃಷ್ಣಾ ಎಂದು ಮೊರೆಯಿಡಲು ; ಅರ್ಥಿನಿ ತೊಲಗಿಂಚಿ–ಅವಳ ಸಂಕಟವನ್ನು ತೊಲಗಿಸಿ, ಬ್ರೋಚಿ–ಕಾಪಾಡಿದ ; ಕೀರ್ತಿಚೆಂದಿನಟ್ಟಿ ಕೃಷ್ಣಮೂರ್ತಿನಿ–ಕೀರ್ತಿ ಪಡೆದ ಕೃಷ್ಣಮೂರ್ತಿಯನ್ನು ಪ್ರಣತಾರ್ಥಿ ಹರುನಿ–ಭಕ್ತರ ಸಂಕಟಗಳನ್ನು ಪರಿಹರಿಸುವವನನ್ನು ಕಣ್ಣಾರೆ ಕಂಡೆನು. ರಾಮ ಚಂದ್ರಪುರದಿಂದ ಹೊರಟು ರಾಮದಾಸನನ್ನು ಕಾಪಾಡಿದ, ಹಸ್ತಿಗಿರಿಯಲ್ಲಿ ನೆಲಸಿದ ಶ್ರೀ ವರದ ರಾಜನನ್ನು ಕಣ್ಣಾರೆ ನೋಡಿದೆನು.

ವೀಣಾ ಕುಪ್ಪಯ್ಯರ್

೬5. ರಾಗ : ಧನ್ಯಾಸಿ ರೂಪಕತಾಳ

ಪಲ್ಲವಿ : ನಾ ಮೊರಾಲಗಿಂಚಿ ನನ್ನು ಬ್ರೋವವಮ್ಮ

ಅನುಪಲ್ಲವಿ : ಭೂಮಿವೆಲಯು ಶ್ರೀಮದಾದಿಪುರಿ ತ್ರಿಪುರ ಸುಂದರಿ ||

ಚರಣ 1 ನನು ಕಾವರಾದ ಅಂಬ ನಾ ಮೀದ ದಯಲೇದಾ
ನಿನ್ನು ನಮ್ಮಿನ ವಾಡುಗದಾ ನೀ ಮದಿನಿ ತೋಚಲೇದಾ ||

2 ಇಟುವಂಟಿವಾದು ಈಶ್ವರಿ ಕಾರಾದು
ಹಟಮುಸೇಯ ಮೇರಗಾದು ಅಂಬ ಗತಿವೇರೆಲೇದು ||

3 ಹಿಮಗಿರಿಬಾಲಾ ಈ ಬಾಧ ತಾಳ ಜಾಲ
ದಮಿತ ಕಂಸ ಗೋಪಾಲ ದಾಸುನಿ ಪೈ ಕೋಪ ಮೇಲ ||

ಅರ್ಥ : ನಾ ಮೊರ–ನನ್ನ ಮೊರೆಯನ್ನು ; ಆಲಗಿಂಚಿ–ಆಲಿಸಿ ; ನನ್ನು–ನನ್ನನ್ನು ; ಬ್ರೋವವಮ್ಮ–ಕಾಪಾಡಮ್ಮ ; ಭೂಮಿವೆಲಯು–ಭೂಮಿಯಲ್ಲಿ ಪ್ರಸಿದ್ಧಳಾದ ; ಶ್ರೀಮದಾದಿಪುರಿ ತ್ರಿಪುರ ಸುಂದರಿಯೆ ; ನನು–ನನ್ನನ್ನು ; ಕಾವರಾದ–ಕಾಪಾಡಬಾರದೆ ? ಅಂಬ–ಅಮ್ಮ ; ನಾಮೀದ–ನನ್ನ ಮೇಲೆ ; ದಯಲೇದಾ–ದಯೆಯಿಲ್ಲವೆ ? ನಿನ್ನು ನಮ್ಮಿನವಾಡುಗದಾ–ನಿನ್ನನ್ನೇ ನಂಬಿದವ ನಲ್ಲವೆ ನಾನು ? ನೀ ಮದಿನಿ ತೋಚಲೇದಾ–ನಿನ್ನ ಮನಸ್ಸಿನಲ್ಲಿ ಅದು ಹೊಳೆಯಲಿಲ್ಲವೆ ? ಇಟು ವಂಟಿವಾದು–ಈ ಬಗೆಯ ಹಟವು ; ಈಶ್ವರಿಕಾರಾದು–ಈಶ್ವರಿಯಾದವಳಿಗೆ ಸರಿಯಲ್ಲ ; ಹಟಮುಸೇಯ ಮೇರಗಾದು–ನಿನಗೆ ಹೀಗೆ ಹಟಮಾಡುವುದು ತರವೂ ಅಲ್ಲ ; ಅಂಬ–ಅಮ್ಮ ; ವೇರೆ ಗತಿಲೇದು–ನನಗೆ ಬೇರೆ ಗತಿಯಿಲ್ಲ ; ಹಿಮಗಿರಿಬಾಲಾ–ಹಿಮವತ್ಪರ್ವತನ ಪುತ್ರಿಯೆ ; ಈ

ಬಾಧ ತಾಳಜಾಲ–ಈ ಬಾಧೆಯನ್ನು ತಾಳಲಾರೆನು ; ದಮಿತ ಕಂಸ-ಕಂಸನನ್ನು ಕೊಂದ ; ಗೋಪಾಲದಾಸುನಿ-ಗೋಪಾಲನದಾಸನ ಮೇಲೆ [ಗೋಪಾಲದಾಸ ಎಂಬುದು ಅಂಕಿತ] ಕೋಪ ಮೇಲ–ಕೋಪವೇಕಮ್ಮ ?

ತಾತ್ಪರ್ಯ : ಅಮ್ಮ, ತ್ರಿಪುರ ಸುಂದರಿಯೆ ನನ್ನ ಮೊರೆಯನ್ನು ಕೇಳು. ನಾನು ನಿನ್ನನ್ನೇ ನಂಬಿದವನು, ನನ್ನ ಮೇಲೆ ಏಕೆ ದಯೆ ಬಾರದು ? ಹೀಗೆ ಹಟ ಮಾಡಬೇಡ. ಈ ವ್ಯಥೆಯನ್ನು ನಾನು ತಾಳಲಾರ ನಾಗಿದ್ದೇನೆ, ಬೇರೆ ಗತಿಯಿಲ್ಲ, ಕಾಪಾಡು.

ತ್ಯಾಗರಾಜರು

66. ರಾಗ : ಧನ್ಯಾಸಿ ಆದಿತಾಳ

ಪಲ್ಲವಿ : ಧ್ಯಾನಮೇ ವರಮೈನ ಗಂಗಾಸ್ನಾನಮೇ ಮನಸಾ ॥

ಅನುಪಲ್ಲವಿ : ವಾನ ನೀಟ ಮುನುಗ ಮುನುಗಲೋನಿ
ವಂಚನ ದ್ರೋಹಮುನು ಕರಬೋನಾ ॥

ಚರಣ : ಪರಧನ ನಾರೀ ಮಣುಲನು ದೂರಿ
ಪರನಿಂದಲ ಪರಹಿಂಸಲ ಮೀರಿ
ಧರನುವೆಲಯು ಶ್ರೀರಾಮುನಿ ಗೋರಿ
ತ್ಯಾಗರಾಜು ದೆಲಸು ಕೊನ್ನ ರಾಮು ॥

ಅರ್ಥ : ಮನಸಾ–ಎಲೆ ಮನಸ್ಸೆ ; ಧ್ಯಾನಮೇ–ಶ್ರೀರಾಮಚಂದ್ರನ ಧ್ಯಾನವೇ ; ವರಗಂಗಾ ಸ್ನಾನಮೇ–ಶ್ರೇಷ್ಠವಾದ ಗಂಗಾಸ್ನಾನವು ; ವಾನ ನೀಟ ಮುನುಗ ಮುನುಗಲೋನಿ–ನೀರಿನಲ್ಲಿ ಮತ್ತೆ ಮತ್ತೆ ಮುಳುಗು ಹಾಕಿದರೂ ; ವಂಚನ ದ್ರೋಹಮುನು ಕರ-ವಂಚನೆ ದ್ರೋಹಗಳ ಕರೆಯು ; ಪೋನಾ–ಹೋಗುತ್ತದೆಯೆ ? ; ಪರಧನ–ಪರರ ಧನವನ್ನೂ ; ನಾರೀ ಮಣುಲನು–ಪರಸ್ತ್ರೀಯ ರನ್ನೂ ; ದೂರಿ–ಅಪಹರಿಸಲು ಇಚ್ಛಿಸದ ; ಪರನಿಂದಲ ಪರಹಿಂಸಲ–ಪರನಿಂದೆ ಪರಹಿಂಸೆಗಳನ್ನು ; ಮೀರಿ–ಮೀರಿದ ; ಮಾಡದ ಮನಸ್ಸಿನಿಂದ ; ಧರನುವೆಲಯು–ಭೂಮಿಯಲ್ಲಿ ಪ್ರಸಿದ್ಧನಾದ ; ಶ್ರೀರಾಮುನಿ–ಶ್ರೀರಾಮಚಂದ್ರನನ್ನು ; ಗೋರಿ–ಪ್ರಾರ್ಥಿಸಿ ; ತ್ಯಾಗರಾಜು ದೆಲಸು ಕೊನ್ನ–ತ್ಯಾಗರಾಜನು ತಿಳಿದುಕೊಂಡಿರುವ ; ರಾಮುಧ್ಯಾನಮೇ–ರಾಮನಧ್ಯಾನವೇ ಅತ್ಯಂತ ಶ್ರೇಷ್ಠ ವಾದದ್ದು.

ತಾತ್ಪರ್ಯ : ಧ್ಯಾನದ ಮಹತ್ವವನ್ನು, ಅದು ಹೇಗಿರಬೇಕೆಂಬುದನ್ನು ತ್ಯಾಗರಾಜರು ಈ ಕೃತಿಯಲ್ಲಿ ನಿರೂಪಿಸಿ ದ್ದಾರೆ. ಶ್ರೀರಾಮಚಂದ್ರನ ಧ್ಯಾನವೇ ಪರಮಪಾವನವಾದ ಗಂಗಾಸ್ನಾನಕ್ಕೆ ಸಮಾನ. ಆದರೆ ಆ ಧ್ಯಾನ ಹೇಗಿರಬೇಕು ? ಪರಧನ ಪರಸತಿಯರನ್ನು ಬಯಸದ, ಪರನಿಂದೆ ಪರಹಿಂಸೆಗಳಸದ ಶುದ್ಧ ಮನಸ್ಸಿನಿಂದ ಮಾಡಬೇಕು. ಆಗ ಮಾತ್ರವೇ ಆ ಧ್ಯಾನವು ಗಂಗಾಸ್ನಾನಕ್ಕೆ ಸಮ.

ತ್ಯಾಗರಾಜರು

67. ರಾಗ : ರಾಮಪ್ರಿಯ ಆದಿತಾಳ

ಪಲ್ಲವಿ : ಸಂದೇಹಮುನುದೀರ್ಪನಯ್ಯ ಸಾಕೇತನಿಲಯ ! ರಾಮಯ್ಯ

ಅನುಪಲ್ಲವಿ : ನಂದಾರ್ಚಿತ ಪದಯುಗಮುಲು ಮೇಲೋ–
ನಾಗರೀಕಮಗು ಪಾದುಕಾಯುಗಂಬುಲು ಮೇಲೋ ॥

ಚರಣ : ವರಮೌನುಲೆಲ್ಲ ಚರಣಂಬುಲನು
ಸ್ಮರಿಯಿಂಪ ನೀದು ಪದಮೊಸಂಗೆನೇ
ಭರತಾರ್ಚನಚೇ ಪಾದುಕಲು
ಧರಣಿ ನಿನ್ನೊಸಗೆ ತ್ಯಾಗರಾಜ ಭಾಗ್ಯಮಾ ॥

ಅರ್ಥ : ಸಾಕೇತನಿಲಯ–ಸಾಕೇತಪುರದಲ್ಲಿ ನೆಲಸಿದ ; ರಾಮಯ್ಯ-ಶ್ರೀರಾಮಚಂದ್ರ ; ಸಂದೇಹಮುನು–ಒಂದು ಸಂಶಯವನ್ನು ; ದೀರ್ಪವಯ್ಯ–ಪರಿಹರಿಸಯ್ಯ. ನಂದಾರ್ಚಿತ–ಮಹಾಭಕ್ತ ನಂದನು ಪೂಜಿಸಿದ ; ಪದಯುಗಮುಲು–ನಿನ್ನ ಪಾದಗಳು ; ಮೇಲೋ–ಶ್ರೇಷ್ಠವೋ ; ನಾಗರೀಕಮಗು–ಸುಂದರವಾದ ; ಪಾದುಕಾಯುಗಂಬುಲು-ನಿನ್ನ ಪಾದುಕೆಗಳು ; ಮೇಲೋ–ಶ್ರೇಷ್ಠವೋ ? ವರಮೌನುಲೆಲ್ಲ-ಶ್ರೇಷ್ಠರಾದ ಮುನಿಗಳೆಲ್ಲರೂ ; ಚರಣಂಬುಲನು ಸ್ಮರಿಯಿಂಪ–ನಿನ್ನ ಪಾದಗಳನ್ನು ಸ್ತುತಿಸಿ ಸ್ಮರಿಸಿ ; ನೀದು ಪದಮು ಒಸಂಗೆನೆ–ನಿನ್ನ ಸಾನ್ನಿಧ್ಯವನ್ನು ಪಡೆದರು ; ಭರತಾರ್ಚನಚೇ–ಭರತನ ಅರ್ಚನೆಯಿಂದಲಾದರೊ : ಪಾದುಕಲು–ನಿನ್ನ ದಿವ್ಯ ಪಾದುಕೆಗಳು ; ಧರಣಿ ನಿನ್ನೊಸಗೆ–ನಿನ್ನನ್ನೇ ಅವನಿಗೆ ಕೊಟ್ಟುಬಿಟ್ಟವು ; ತ್ಯಾಗರಾಜನ ಪಾಲಿನ ಭಾಗ್ಯವಾದರೂ ಯಾವುದು ?

ತಾತ್ಪರ್ಯ : ಶ್ರೀ ರಾಮ, ನಿನ್ನ ಪಾದಗಳು ಶ್ರೇಷ್ಠವೋ, ಪಾದುಕೆಗಳು ಶ್ರೇಷ್ಠವೋ ತಿಳಿಯಲಾರದಾಗಿದ್ದೇನೆ ; ಸಂಶಯವನ್ನು ಪರಿಹರಿಸು. ಮಹಾ ತಪಸ್ವಿಗಳು ನಿನ್ನ ಪಾದುಕೆಗಳನ್ನು ಭಜಿಸಿ ನಿನ್ನ ಸಾನ್ನಿಧ್ಯವನ್ನು ಪಡೆದರು ; ಆದರೆ ಭರತನಾದರೋ ನಿನ್ನ ಪಾದುಕೆಗಳನ್ನು ಅರ್ಚಿಸಿ ನಿನ್ನನ್ನೇ ಪಡೆದನು.

68 : ರಾಗ ರಾಮಪ್ರಿಯ    ಆದಿತಾಳ    ಪೊನ್ನಯ್ಯಪಿಳ್ಳೆ

ಪಲ್ಲವಿ : ಶ್ರೀರಾಜರಾಜೇಶ್ವರಿ ರಮಾ ಮನೋಹರಿ
ಅನುಪಲ್ಲವಿ : ವಾರಾಹಿ ವೈಷ್ಣವಿ ಮಾತಂಗಿ ವಾಮದೇವುನಿ ಮೋಹನಾಂಗಿ
ಚರಣ : ಧೀರುಡೈನ ಗುರುಗುಹ ದಾಸುಡನಿ
ಗಾರವಿಂಚಿ ಕಾಮಿತಾರ್ಥಮಿಚ್ಚಿ
ಸಾರಸಾಕ್ಷಿ ಶ್ರೀ ಬೃಹದಂಬಾ
ಸನ್ನುತಿಂಚೆವನ್ ಸಾರೆಸಾರೆಕು ॥

ಅರ್ಥ : ಶ್ರೀ ರಾಜರಾಜೇಶ್ವರಿ, ರಮಾ, ಮನೋಹರಿ, ವಾರಾಹಿ, ವೈಷ್ಣವಿ, ಮಾತಂಗಿ, ವಾಮದೇವುನಿ–ಪರಮೇಶ್ವರನ ; ಮೋಹನಾಂಗಿ–ಪತ್ನಿಯೆ ; ಧೀರುಡೈನ–ಧೀರನಾದ ; ಗುರುಗುಹದಾಸುಡು ಅನಿ–ಗುರುಗುಹನದಾಸನು ಎಂಬುದಾಗಿ [ಗುರುಗುಹದಾಸ ಎಂಬುದು ಅಂಕಿತ] ಗಾರವಿಂಚಿ–ಮನ್ನಿಸಿ ; ಕಾಮಿತಾರ್ಥ ಮಿಚ್ಚಿ–ನನ್ನ ಅಪೇಕ್ಷೆಯನ್ನು ಪೂರೈಸಿಕೊಡು ; ಸಾರಸಾಕ್ಷಿಯೆ, ಶ್ರೀ ಬೃಹದಂಬಾ, ಸನ್ನುತಿಂಚೆವನ್ ಸಾರೆಸಾರೆಕು–ಮತ್ತೆ ಮತ್ತೆ ನಿನ್ನನ್ನು ಪ್ರಾರ್ಥಿಸುತ್ತಿದ್ದೇನೆ.

69 : ರಾಮಪ್ರಿಯ    ಆದಿತಾಳ    ಮೈಸೂರು ವಾಸುದೇವಾಚಾರ್ಯರು

ಪಲ್ಲವಿ : ಪರಿಪಾಹಿರಾಮ ಪರಿಪೂರ್ಣಕಾಮ
ಸುರಸೌಖ್ಯಕಾಮ ಸುರವೈರಿ ಭೀಮ ॥

ಅನುಪಲ್ಲವಿ : ಸರಸೀರುಹಾಕ್ಷ ವರದಾನದೀಕ್ಷ
ಶರದಿಂದುವದನ ವರಸಿಂಧು ಶಯನ ||

ಚರಣ : ಕುಶಿಕಾತ್ಮಜಾಧ್ವರ ಪಾಲಕ
ದಶರಥ ತನೂಜ ರಘುನಾಯಕ
ನಿಶಿಚರ ಕುಲೇಶ ದಶವದನಹರ
ಸುಶರೀರ ವಾಸುದೇವ ಶ್ರೀಕರ ||

ಅರ್ಥ : ಪರಿಪೂರ್ಣಕಾಮ–ಕಾಮನೆಗಳು ಪೂರ್ಣನಾದವನೆ ; ಸುರಸೌಖ್ಯಕಾಮ–ದೇವತೆಗಳ ಸೌಖ್ಯವನ್ನು ಬಯಸುವವನೆ ; ಸುರವೈರಿ ಭೀಮ–ದೇವತೆಗಳ ವೈರಿಗಳಾದ ರಾಕ್ಷಸರಿಗೆ ಭಯಂಕರನಾದವನೆ ; ರಾಮಚಂದ್ರ, ಪರಿಪಾಹಿ–ಕಾಪಾಡು. ಸರಸೀರುಹಾಕ್ಷ–ತಾವರೆಯಂತೆ ಕಣ್ಣುಳ್ಳವನೆ ; ವರದಾನದೀಕ್ಷ–ವರವನ್ನು ನೀಡುವುದರಲ್ಲಿ ಕುಶಲನೆ ; ಶರದಿಂದುವದನ–ಶರತ್ಕಾಲದ ಚಂದ್ರನಂತೆ ಮುಖವುಳ್ಳವನೆ ; ವರಸಿಂಧು ಶಯನ–ಕ್ಷೀರಸಾಗರದಲ್ಲಿ ಮಲಗಿದವನೆ ; ಕುಶಿಕಾತ್ಮಜ–ಕುಶಿಕ ಪುತ್ರನಾದ ವಿಶ್ವಾಮಿತ್ರನ ; ಅಧ್ವರ–ಯಾಗವನ್ನು ; ಪಾಲಕ–ರಕ್ಷಿಸಿದವನೆ ; ದಶರಥನ ಪುತ್ರನೆ, ರಘುನಾಯಕನೆ ; ನಿಶಿಚರ ಕುಲೇಶ–ನಿಶಾಚರ ರಾಕ್ಷಸವಂಶದ ಒಡೆಯನಾದ ದಶವದನ–ರಾವಣನನ್ನು ; ಹರ–ಕೊಂದವನೆ ; ಸುಶರೀರ–ಸುಂದರವಾದ ದೇಹವುಳ್ಳವನೆ ; ವಾಸುದೇವ ಶ್ರೀಕರ–ವಾಸುದೇವನಿಗೆ ಶುಭವುಂಟುಮಾಡುವವನೆ [ವಾಸುದೇವ ಎಂಬುದು ಅಂಕಿತ], ಶ್ರೀರಾಮಚಂದ್ರ, ನನ್ನನ್ನು ಕಾಪಾಡು.

ತಾತ್ಪರ್ಯ : ಪೂರ್ಣಕಾಮನೂ, ದೇವತೆಗಳಿಗೆ ಸೌಖ್ಯವುಂಟುಮಾಡುವವನೂ, ರಾಕ್ಷಸರಿಗೆ ಭೀಕರನಾದವನೂ, ಶರತ್ಕಾಲದ ಚಂದ್ರನಂತೆ ಸುಂದರವಾದ ಮುಖವುಳ್ಳವನೂ, ವಿಶ್ವಾಮಿತ್ರನ ಯಾಗವನ್ನು ರಕ್ಷಿಸಿದವನೂ, ರಾವಣನನ್ನು ಕೊಂದವನೂ ಆದ ಶ್ರೀರಾಮಚಂದ್ರನೆ, ನನ್ನನ್ನು ರಕ್ಷಿಸು.

70 ರಾಗ : ಬೇಗಡೆ ರೂಪಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ತ್ಯಾಗರಾಜಾಯ ನಮಸ್ತೇ ನಮಸ್ತೇ
ಕಾತ್ಯಾಯಿನೀಪತೇ ಪಶುಪತೇ ಸಿಂಹಾಸನಪತೇ ||

ಅನುಪಲ್ಲವಿ : ವಾಗೀಶಾದ್ಯಖಿಲದೇವ ವಂದಿತ ಪದ ಪಂಕಜಾಯ
ಯೋಗೇಶ್ವರ ವರಾನಸ ಸಂಯುಕ್ತವದನ ವಾರಿಜಾಯ
ಭೋಗ ಮೋಕ್ಷದಾನ ವಾಮಭಾಗಸ್ಥಿತ ಶೈಲಜಾಯ
ಯೋಗ ಗುರುಗುಹಾತ್ಮಜಾಯ ತ್ಯಾಗಧ್ವಜಾಯ ಅಜಾಯ ||

ಚರಣ : ಮುಕುಂದಾದಿ ಪೂಜಿತ ಸೋಮಸ್ಕಂದ ಮೂರ್ತಯೇ
ಮುಚುಕುಂದಾದಿ ಭಕ್ತಜನ ಮನೋರಥ ಪೂರ್ತಯೇ
ಮುಕುರಬಿಂಬ ಪ್ರತಿಬಿಂಬಿತ ಮುಖ ಸ್ಫೂರ್ತಯೇ
ಮುನಿಪಕ್ಷಿ ಮೃಗಕೀಟಾದಿ ಮುಕ್ತಿಪ್ರದ ಕೀರ್ತಯೇ
ಸಕಲಾಗಮ ಮಂತ್ರ ತಂತ್ರಸಾರಜ್ಞಾನುರಸಯೇ
ಅಕತಾದಿ ತ್ರಿರೇಖಾತ್ಮಕಾಧಾರ ಪ್ರವೃತ್ತಯೇ
ಸಕಲ ನಿಷ್ಕಳ ಸ್ವರೂಪ ಸ್ವಚಿತ್ತ ಸುಖ ವ್ಯಾಪ್ತಯೇ
ವಿಕಲ್ಪ ಭೇದಯುಕ್ತಯೇ ವಿಟಂಕ ರೂಪಶಕ್ತಯೇ ||

ಅರ್ಥ : ಕಾತ್ಯಾಯಿನೀ ಪತೇ-ಕಾತ್ಯಾಯಿನಿಯ ಪತಿಯೂ ; ಪಶುಪತೇ–ಪಶುಪತಿಯೂ ; ಸಿಂಹಾಸನ ಪತೇ–ಸಿಂಹಾಸನವೇರಿದವನೂ ಆದ ತ್ಯಾಗರಾಜಾಯ–ತ್ಯಾಗರಾಜನೆ, ಪರಮೇಶ್ವರನೇ, ನಮಸ್ತೇ ನಮಸ್ತೇ–ನಿನಗೆ ನಮಸ್ಕಾರ ನಮಸ್ಕಾರ.

ವಾಗೀಶಾದ್ಯಖಿಲ ದೇವ ವಂದಿತ ಪದಪಂಕಜಾಯ–ಬ್ರಹ್ಮನೇ ಮೊದಲಾದ ಸಕಲ ದೇವತೆಗಳಿಂದಲೂ ವಂದಿಸಲ್ಪಟ್ಟ ತಾವರೆಯಂತಹ ಪಾದಗಳುಳ್ಳವನು ; ಯೋಗೀಶ್ವರ ಮಾನಸ ಸಂಯುಕ್ತ ವದನವಾರಿಜಾಯ–ಯೋಗಿಗಳ ಮನಸ್ಸಿನಲ್ಲೂ ಮಾತುಗಳಲ್ಲೂ ನೆಲಸಿದವನು ; ಭೋಗಮೋಕ್ಷಗಳನ್ನು, ದಾನ–ನೀಡುವವನು ; ವಾಮಭಾಗಸ್ಥಿತ ಶೈಲಜಾಯ–ಎಡಗಡೆ ಪಾರ್ವತಿಯನ್ನು ಇರಿಸಿಕೊಂಡಿರುವವನು ; ಯೋಗ ಗುರುಗುಹಾತ್ಮಜಾಯ–ಗುರುಗುಹನನ್ನು ಮಗನಾಗಿ ಉಳ್ಳವನು (ಗುಹ–ಷಣ್ಮುಖ) ; ತ್ಯಾಗಧ್ವಜಾಯ–ತ್ಯಾಗಕ್ಕೆ ಧ್ವಜದಂತಿರುವವನು ; ಅಜಾಯ–ಹುಟ್ಟು ಇಲ್ಲದವನು ; ಮುಕುಂದಾದಿ ಪೂಜಿತ–ಕೃಷ್ಣನೇ ಮೊದಲಾದವರಿಂದ ಪೂಜೆಗೊಂಡ ; ಸೋಮಸ್ಕಂದ ಮೂರ್ತಯೇ—ಸೋಮಸ್ಕಂದನೇ ; ಮುಚುಕುಂದನೇ ಮೊದಲಾದ ಭಕ್ತರ ಮನೋರಥಗಳನ್ನು ಪೂರೈಸಿದವನೇ ; ಮುನಿಪಕ್ಷಿ ಮೃಗ ಕೀಟಾದಿ–ಮುನಿಗಳು, ಪಕ್ಷಿಗಳು, ಮೃಗಗಳು, ಕೀಟಗಳು ಮುಂತಾದ ಸಮಸ್ತರಿಗೂ ; ಮುಕ್ತಿಪ್ರದಕೀರ್ತಯೇ–ಮೋಕ್ಷವನ್ನು ನೀಡುವ ಕೀರ್ತಿ ಪಡೆದವನೇ ; ಸಕಲಾಗಮ ಮಂತ್ರ ತಂತ್ರ ಸಾರಜ್ಞಾನುರಸಯೇ–ಸಕಲ ವೇದವೇದಾಂತ ಮಂತ್ರತಂತ್ರಾದಿಗಳ ಸಾರವನ್ನು ಬಲ್ಲವನೇ ; ಅಕತಾದಿ ತ್ರಿರೇಖಾತ್ಮಕ ಆಧಾರ ಪ್ರವೃತ್ತಯೇ–ಅ ಕ ತ ಎಂಬ ಮೂರುರೇಖೆಗಳಿಂದ ಕೂಡಿದ ಮೂಲಾಧಾರ ಸ್ವರೂಪನೇ ; ಸಕಲನೇ, ನಿಷ್ಕಳಂಕ ಸ್ವರೂಪನೇ ; ಸ್ವಚಿತ್ತಸುಖ ವ್ಯಾಪ್ತಯೇ–ಆತ್ಮಸುಖಿಯೇ ತ್ಯಾಗರಾಜನೇ ಪರಮೇಶ್ವರನೇ ನಿನಗೆ ನಮಸ್ಕಾರವು.

71 ರಾಗ : ಬೇಗಡೆ   ರೂಪಕತಾಳ   ಶ್ಯಾಮಾಶಾಸ್ತ್ರಿ

ಪಲ್ಲವಿ : ಶಂಕರಿ ನೀವನಿ ನಿನು ಸಂತತಮು ಕೋರಿವಚ್ಚಿತಿ ||

ಅನುಪಲ್ಲವಿ : ಸಂಕಟಮು ದೀರ್ಚಿ ಬ್ರೋಚುಟಕಿಂಕೆವರುನ್ನಾರಿಲಲೋ
ಪಂಕಜ ಸಂಭವ ಸನ್ನುತ ಪಾಲಿಂಚು ಕಾಮಾಕ್ಷಿ ||

ಸ್ವರಸಾಹಿತ್ಯ : ಶ್ರೀ ಕಾಂಚಿಸದನ ಸುರದನ–ರಾಕಾ ಶಶಿವದನ ರಾವೇ
ಕೋಕಿಲನಿಭ ಮೃದುಲವಚನ–ಕೋರಿನ ವರಮುಲೊಸಗಿಪುಡು ಪ
ರಾಕು ಸಲುಪರಾದು ಪರಮಾ–ಪರಮು ಕೃಪಾನಿಧಿವಿ

ಚರಣ : ಕನಕಾದ್ರಿಸದನ–ದೀನಜನ ರಕ್ಷಕಿಯನುಚು
ಸನಕಾದಿ ಮುನುಲು ನಿನ್ನು ಭಜನ ಸೇಯುಚುಂಡಗನು
ಮುನಿಮುಖ್ಯುಲ ಬ್ರೋಚಿನದೆಲ್ಲನು ಚಾಲ ವಿನಿ ವಚ್ಚಿತಿ
ವಿನುಮಾ ಘನಮಾ ನಿನು ನಮ್ಮಿನವಾಡನು ರಕ್ಷಿಂಪ ||

ಅರ್ಥ : ನೀವು–ನೀನು ; ಶಂಕರಿ–ಶುಭವನ್ನು ಉಂಟುಮಾಡುವವಳು ; ಅನಿ–ಎಂದು ; ನೀನು–ನಿನ್ನನ್ನೇ ; ಸಂತತಮು–ಸದಾ ; ಕೋರಿ–ಪ್ರಾರ್ಥಿಸುತ್ತಾ ; ವಚ್ಚಿತಿ–ಬಂದಿದ್ದೇನೆ ; ಸಂಕಟಮುದೀರ್ಚಿ–ಸಂಕಟವನ್ನು ಪರಿಹರಿಸಿ ; ಬ್ರೋಚುಟಕು– ಕಾಪಾಡಲು ; ಇಲಲೋ–ಈ ಭೂಮಿಯಲ್ಲಿ ; ಇಂಕೆವರುನ್ನಾರು–ಬೇರೆ ಯಾರಿದ್ದಾರೆ ? ಪಂಕಜ ಸಂಭವ ಸನ್ನುತ ಕಾಮಾಕ್ಷಿ–ಬ್ರಹ್ಮನಿಂದ ನುತಿಗೊಂಡ ಕಾಮಾಕ್ಷಿಯೆ ; ಪಾಲಿಂಚು–ಕಾಪಾಡು.

ಶ್ರೀ ಕಾಂಚಿಸದನ–ಕಾಂಚೀಪುರದಲ್ಲಿ ನೆಲಸಿದವಳು ; ಸುರದನ–ಸುಂದರವಾದ ಹಲ್ಲುಗಳುಳ್ಳವಳು ; ರಾಕಾ ಶಶಿವದನ–ಹುಣ್ಣಿಮೆಯ ಚಂದ್ರನಂಥ ಮುಖವುಳ್ಳವಳು; ರಾವೇ–ಬಾರಮ್ಮ ; ಕೋಕಿಲನಿಭ–ಕೋಗಿಲೆಯನ್ನು ಹೋಲುವ ; ಮೃದುಲ ವಚನ–ಮೃದುವಾದ ದನಿಯುಳ್ಳವಳು ; ಕೋರಿನ ವರಮುಲು–ಕೋರಿದ ವರಗಳನ್ನು ; ಒಸಗು–ನೀಡು ; ಇಪುಡು–ಈಗ ; ಪರಾಕು ಸಲುಪರಾದು–ತಡಮಾಡಬೇಡ ; ಪರಮ ಕೃಪಾನಿಧಿವಿ–ನೀನು ಪರಮ ಕರುಣಾನಿಧಿಯಾದವಳು. ಕನಕಾದ್ರಿಯಲ್ಲಿ ನೆಲಸಿದವಳು ; ದೀನಜನರಕ್ಷಕಿಯನುಚು–ದೀನಜನರನ್ನು ರಕ್ಷಿಸುವವಳು ಎಂದು ; ಸನಕಾದಿಮುನುಲು–ಸನಕನೇ ಮೊದಲಾದ ಮುನಿಗಳು ; ನಿನ್ನು–ನಿನ್ನನ್ನು ; ಭಜನಸೇಯು ಚುಂಡಗನು–ಭಜಿಸುತ್ತಿದ್ದಾರೆ ; ಮುನಿಮುಖ್ಯುಲ–ಆ ಮುನಿಮುಖ್ಯರನ್ನೆಲ್ಲ ; ಬ್ರೋಚಿನದೆಲ್ಲನು–ಕಾಪಾಡಿದುದೆಲ್ಲವನ್ನೂ ; ಚಾಲವಿನಿ–ತುಂಬ ಕೇಳಿ ; ವಚ್ಚಿತಿ–ಬಂದೆನು ; ವಿನುಮಾ–ಕೇಳಮ್ಮ ; ನಿನು ನಮ್ಮಿನ ವಾಡನು–ನಿನ್ನನ್ನೆ ನಂಬಿದವನನ್ನು ; ರಕ್ಷಿಂಪ–ರಕ್ಷಿಸುವುದು ; ಘನಮಾ–ನಿನಗೆ ದೊಡ್ಡದೆ ?

ತಾತ್ಪರ್ಯ : ಅಮ್ಮ, ಕಾಮಾಕ್ಷಿ, ನೀನು ಶಂಕರಿಯೆಂದು ಕೇಳಿ ನಿನ್ನನ್ನೇ ಮೊರೆಯಿಡುತ್ತಾ ಬಂದಿದ್ದೇನೆ. ನನ್ನನ್ನು ಕಾಪಾಡಲು ನೀನಲ್ಲದೆ ಈ ಭೂಮಿಯಲ್ಲಿ ಬೇರೆ ಯಾರಿದ್ದಾರಮ್ಮ ? ಕಾಂಚೀಪುರದಲ್ಲಿ ನೆಲಸಿದವಳೆ, ಹುಣ್ಣಿಮೆಯ ಚಂದ್ರನಂತೆ ಸುಂದರವಾದ ಮುಖವುಳ್ಳವಳೆ, ಕೋಗಿಲೆಯಂತಹ ಮೃದುವಾದ ದನಿಯವಳೆ, ಸನಕಸನಂದನಾದಿ ಮುನಿಗಳನ್ನು ಕಾಪಾಡಿದುದೆಲ್ಲವನ್ನು ನಾನು ಕೇಳಿ ಬಂದಿದ್ದೇನೆ, ನಿನ್ನನ್ನೇ ನಂಬಿರುವ ನನ್ನನ್ನು ರಕ್ಷಿಸುವುದೇನು ನಿನಗೆ ದೊಡ್ಡ ವಿಚಾರವೆ ? ಕಾಪಾಡು.

72. ರಾಗ : ಬೇಗಡೆ ರೂಪಕತಾಳ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಮನಸುನ ನೆರನಮ್ಮಿತಿನಿ ಮಹಿಮಲು ವಿನಿ ನೇ ಸತತಮು ||

ಅನುಪಲ್ಲವಿ : ಅನಘನನ್ನೆಟ್ಲೈನ ಆದರಿಂಚಿ ಬ್ರೋತುವನುಚು

ಚರಣ : ಕ್ರೂರುಡೈನ ಕಾಕಾಸುರುಡು ಕೋರಿ ಶರಣ
ಮನಗನ ತನಿ ಕ್ರೂರ ಕೃತ್ಯ ಮುಲಕು ನಿವೇ
ಕೋಪಿಂಪಕಕಾಚಿನಟುಲ ನೇರಮೆಂತೋ ನೇ ಜೇಸಿನನು
ನೀವೇ ಮನ್ನಿಂತುವನುಚು ವಾರಣಾರ್ತಿಹರಣ
ಶ್ರೀ ವರದ ವೆಂಕಟೇಶವಿನುತ ||

ಅರ್ಥ : ಮಹಿಮಲು ವಿನಿ–ನಿನ್ನ ಮಹಿಮೆಗಳನ್ನು ಕೇಳಿ ; ನೇ–ನಾನು ; ಸತತಮು–ಸದಾ ; ಮನಸುನ ನೆರನಮ್ಮಿತಿನಿ–ಮನಸ್ಸಿನಲ್ಲಿ ಸಂಪೂರ್ಣವಾಗಿ ನಂಬಿಕೊಂಡಿದ್ದೇನೆ ; ಅನಘ–ಪಾಪರಹಿತನೆ ; ನನ್ನು–ನನ್ನನ್ನು ; ಎಟ್ಲೈನ–ಹೇಗಾದರೂ ; ಆದರಿಂಚಿ–ಆದರಿಸಿ ; ಬ್ರೋಚುವನುಚು–ಕಾಪಾಡುವೆ ಎಂದು ನಂಬಿದ್ದೇನೆ.

ಕ್ರೂರುಡೈನ–ಕ್ರೂರನಾದ ; ಕಾಕಾಸುರನು ; ಕೋರಿ–ಪ್ರಾರ್ಥಿಸಿ ; ಶರಣ ಮನಗನ–ಶರಣಾಗಲು ; ನತನಿಕ್ರೂರ ಕೃತ್ಯಮುಲಕು–ಅವನ ಕ್ರೂರ ಕೃತ್ಯಗಳಿಗೆ ; ನಿವೇ–ನೀನು : ಕೋಪಿಂಪಕ–ಕೋಪ ಮಾಡಿಕೊಳ್ಳದೆ ; ಕಾಚಿನಟುಲ–ಕಾಪಾಡಿದ ಹಾಗೆ ; ನೇರಮೆಂತೋ–ತಪ್ಪುಗಳೆಷ್ಟೋ ನೇ ಜೇಸಿನನು–ನಾಮಾಡಿದರೂ ; ನೀವೇ ಮನ್ನಿಂತು–ನೀನೇ ಕ್ಷಮಿಸುವೆ ; ಅನುಚು–

ಎಂಬುದಾಗಿ ನಂಬಿದ್ದೇನೆ ; ವಾರಣಾರ್ತಿ ಹರಣ–ಆನೆಯ (ಗಜೇಂದ್ರನ) ಸಂಕಟವನ್ನು ಪರಿಹರಿಸಿದವನೆ ; ಶ್ರೀ ವರದ ವೆಂಕಟೇಶ [ಇದು ಅಂಕಿತ]ನಿಂದ ಸ್ತುತನಾದವನೆ ಕಾಪಾಡು.

ತಾತ್ಪರ್ಯ : ಕ್ರೂರಕೃತ್ಯ ಮಾಡಿದ ಕಾಕಾಸುರನೇ ಶರಣು ಬರಲು ಅವನ ಅಪರಾಧವನ್ನು ಕ್ಷಮಿಸಿ ಕಾಪಾಡಿದೆ. ಹಾಗಿರುವಾಗ ನನ್ನ ತಪ್ಪುಗಳನ್ನೂ ಕ್ಷಮಿಸುವೆಯೆಂದು ನಿನ್ನನ್ನೇ ನಂಬಿ ಬಂದಿದ್ದೇನೆ. ಶ್ರೀ ರಾಮಚಂದ್ರ ನನ್ನನ್ನು ಕಾಪಾಡು.

ತ್ಯಾಗರಾಜರು

73. ರಾಗ : ನೀಲಾಂಬರಿ ಆದಿತಾಳ

ಪಲ್ಲವಿ : ಮಾಟಾಡವೇಮಿ ನಾತೋ ? ಮಾಧುರ್ಯ ಪೂರ್ಣಾಧರ !

ಅನುಪಲ್ಲವಿ : ಸಾಟಿ ದೊರಕನಿ ರಾಮು–ಸ್ವಾಮಿ ಮದಿ ರಂಜಿಲ್ಲ

ಚರಣ : ಎದುರೆದುರು ಚಿ ಎಂದು ಗಾನಕ ನಾ
ಹೃದಯಮುನಕೆಂತೊ ಹಿತವುಲೇಕ
ಸದಯುಡ ನೇ ನುಂಡಗ ಸಮುಖಮುನ ದೊರಿಕಿತೆ ನೀ
ರದವರ್ಣ ! ಶ್ರೀ ತ್ಯಾಗರಾಜಾರ್ಚಿತ ! ಮುದ್ದುಗ ||

ಅರ್ಥ : ಮಾಧುರ್ಯ ಪೂರ್ಣಾಧರ–ಮಧುರವಾದ ತುಟಿಗಳುಳ್ಳ ರಾಮಚಂದ್ರ, ನಾತೋ–ನನ್ನೊಂದಿಗೆ ; ಮದಿ ರಂಜಿಲ್ಲ–ಮನಸ್ಸು ಉಲ್ಲಾಸಗೊಳ್ಳುವ ಹಾಗೆ ; ಮಾಟಾಡವೇಮಿ–ಮಾತಾಡಲೊಲ್ಲೆಯಾ ? ಸಾಟಿ ದೊರಕನಿ ರಾಮುಸ್ವಾಮಿ–ನಿನಗೆ ಸಮರು ಎಲ್ಲಿಯೂ ದೊರಕರಯ್ಯ ; ಎದುರೆದುರು ಚಿ ಎಂದು ಗಾನಕೆ–ಎದುರಾಗಿ ನಿಂತು ನೋಡಲಾರದೆ ; ನಾ ಹೃದಯಮುನಕು–ನನ್ನ ಹೃದಯಕ್ಕೆ ; ಎಂತೊ ಹಿತವು ಲೇಕ–ವಿಪರೀತ ಬೇಸರವುಂಟಾಗಿತ್ತು ; ಸದಯುಡ–ದಯಾಮಯನೆ ; ನೇನುಂಡಗ–ನಾನು ಹಾಗಿದ್ದಾಗ ; ಸಮುಖಮುನ ದೊರಿಕಿತೆ–ನಿನ್ನ ದರ್ಶನ ದೊರಕಿತು ! ನೀರದವರ್ಣ–ಮೇಘಗಳಂತೆ ಶ್ಯಾಮಲನಾದವನೆ ; ತ್ಯಾಗರಾಜನಿಂದ ಪೂಜೆಗೊಂಡವನೆ ; ಮುದ್ದುಗ–ಪ್ರೀತಿಯಿಂದ ಮಾತಾಡಲಾರೆಯಾ !

ತಾತ್ಪರ್ಯ : ದರ್ಶನವಾಗಲಿಲ್ಲವಲ್ಲ ಎಂದು ಅಪಾರವಾಗಿ ವ್ಯಥೆಪಡುತ್ತಿದ್ದಾಗ ದರ್ಶನ ಕೊಟ್ಟೆ. ಆದರೆ ಶ್ರೀ ರಾಮಚಂದ್ರ ನನ್ನೊಂದಿಗೆ ಏಕೆ ಮಾತನಾಡಲೊಲ್ಲೆ, ಮಾತಾಡಿ ಹೃದಯವನ್ನು ಹರ್ಷಗೊಳಿಸಲೊಲ್ಲೆ ?

ತ್ಯಾಗರಾಜರು

74. ರಾಗ : ನೀಲಾಂಬರಿ ಝಂಪತಾಳ

ಪಲ್ಲವಿ : ಉಯ್ಯಾಲ ಲೂಗವಯ್ಯ ಶ್ರೀರಾಮ

ಅನುಪಲ್ಲವಿ : ಸಯ್ಯಾಟ ಪಾಟಲನು ಸತ್ಸಾರ್ವಭೌಮ

ಚರಣ : ಕಮಲಜಾದ್ಯಾಖಿಲ ಸುರುಲು ನಿನುಗೊಲ್ವ
ವಿಮಲುಲೈನ ಮುನೀಂದ್ರುಲು ಧ್ಯಾನಿಂಪ
ಕಮನೀಯ ಭಾಗವತುಲು ಗುಣ ಕೀರ್ತ
ನಮುಲು ನಾಲಾಪಂಬುಲು ಸೇಯಗ

ಎಂಬುದಾಗಿ ನಂಬಿದ್ದೇನೆ ; ವಾರಣಾರ್ತಿ ಹರಣ–ಆನೆಯ (ಗಜೇಂದ್ರನ) ಸಂಕಟವನ್ನು ಪರಿಹರಿಸಿದವನೆ ; ಶ್ರೀ ವರದ ವೆಂಕಟೇಶ [ಇದು ಅಂಕಿತ]ನಿಂದ ಸ್ತುತನಾದವನೆ ಕಾಪಾಡು.

ತಾತ್ಪರ್ಯ : ಕ್ರೂರಕೃತ್ಯ ಮಾಡಿದ ಕಾಕಾಸುರನೇ ಶರಣು ಬರಲು ಅವನ ಅಪರಾಧವನ್ನು ಕ್ಷಮಿಸಿ ಕಾಪಾಡಿದೆ. ಹಾಗಿರುವಾಗ ನನ್ನ ತಪ್ಪುಗಳನ್ನೂ ಕ್ಷಮಿಸುವೆಯೆಂದು ನಿನ್ನನ್ನೇ ನಂಬಿ ಬಂದಿದ್ದೇನೆ. ಶ್ರೀ ರಾಮಚಂದ್ರ ನನ್ನನ್ನು ಕಾಪಾಡು.

73. ರಾಗ : ನೀಲಾಂಬರಿ ಆದಿತಾಳ ತ್ಯಾಗರಾಜರು

ಪಲ್ಲವಿ : ಮಾಟಾಡವೇಮಿ ನಾತೋ ? ಮಾಧುರ್ಯ ಪೂರ್ಣಾಧರ !

ಅನುಪಲ್ಲವಿ : ಸಾಟಿ ದೊರಕನಿ ರಾಮು–ಸ್ವಾಮಿ ಮದಿ ರಂಜಿಲ್ಲ

ಚರಣ : ಎದುರೆದುರು ಚಿ ಎಂದು ಗಾನಕ ನಾ
ಹೃದಯಮುನಕೆಂತೊ ಹಿತವುಲೇಕ
ಸದಯುಡ ನೇ ನುಂಡಗ ಸಮುಖಮುನ ದೊರಿಕಿತೆ ನೀ
ರದವರ್ಣ ! ಶ್ರೀ ತ್ಯಾಗರಾಜಾರ್ಚಿತ ! ಮುದ್ದುಗ ||

ಅರ್ಥ : ಮಾಧುರ್ಯ ಪೂರ್ಣಾಧರ–ಮಧುರವಾದ ತುಟಿಗಳುಳ್ಳ ರಾಮಚಂದ್ರ, ನಾತೋ–ನನ್ನೊಂದಿಗೆ ; ಮದಿ ರಂಜಿಲ್ಲ–ಮನಸ್ಸು ಉಲ್ಲಾಸಗೊಳ್ಳುವ ಹಾಗೆ ; ಮಾಟಾಡವೇಮಿ–ಮಾತಾಡಲೊಲ್ಲೆಯಾ ? ಸಾಟಿ ದೊರಕನಿ ರಾಮುಸ್ವಾಮಿ–ನಿನಗೆ ಸಮರು ಎಲ್ಲಿಯೂ ದೊರಕರಯ್ಯ ; ಎದುರೆದುರು ಚಿ ಎಂದು ಗಾನಕೆ–ಎದುರಾಗಿ ನಿಂತು ನೋಡಲಾರದೆ ; ನಾ ಹೃದಯಮುನಕು–ನನ್ನ ಹೃದಯಕ್ಕೆ ; ಎಂತೊ ಹಿತವು ಲೇಕ–ವಿಪರೀತ ಬೇಸರವುಂಟಾಗಿತ್ತು ; ಸದಯುಡ–ದಯಾಮಯನೆ ; ನೇನುಂಡಗ–ನಾನು ಹಾಗಿದ್ದಾಗ ; ಸಮುಖಮುನ ದೊರಿಕಿತೆ–ನಿನ್ನ ದರ್ಶನ ದೊರಕಿತು ! ನೀರದವರ್ಣ–ಮೇಘಗಳಂತೆ ಶ್ಯಾಮಲನಾದವನೆ ; ತ್ಯಾಗರಾಜನಿಂದ ಪೂಜೆಗೊಂಡವನೆ ; ಮುದ್ದುಗ–ಪ್ರೀತಿಯಿಂದ ಮಾತಾಡಲಾರೆಯಾ !

ತಾತ್ಪರ್ಯ : ದರ್ಶನವಾಗಲಿಲ್ಲವಲ್ಲ ಎಂದು ಅಪಾರವಾಗಿ ವ್ಯಥೆಪಡುತ್ತಿದ್ದಾಗ ದರ್ಶನ ಕೊಟ್ಟೆ. ಆದರೆ ಶ್ರೀ ರಾಮಚಂದ್ರ ನನ್ನೊಂದಿಗೆ ಏಕೆ ಮಾತನಾಡಲೊಲ್ಲೆ, ಮಾತಾಡಿ ಹೃದಯವನ್ನು ಹರ್ಷಗೊಳಿಸಲೊಲ್ಲೆ ?

74. ರಾಗ : ನೀಲಾಂಬರಿ ಝಂಪತಾಳ ತ್ಯಾಗರಾಜರು

ಪಲ್ಲವಿ : ಉಯ್ಯಾಲ ಲೂಗನಯ್ಯ ಶ್ರೀರಾಮ

ಅನುಪಲ್ಲವಿ : ಸಯ್ಯಾಟ ಪಾಟಲನು ಸತ್ಸಾರ್ವಭೌಮ

ಚರಣ : ಕಮಲಜಾದ್ಯಾಖಿಲ ಸುರುಲು ನಿನುಗೊಲ್ವ
ವಿಮಲುಲೈನ ಮುನೀಂದ್ರುಲು ಧ್ಯಾನಿಂಪ
ಕಮನೀಯ ಭಾಗವತುಲು ಗುಣ ಕೀರ್ತ
ನಮುಲು ನಾಲಾಪಂಬುಲು ಸೇಯಗ

2. ನಾರದಾದುಲು ಮೆರಯುಚು ನುತಿಯಿಂಪ
ಸಾರಮುಲು ಬಾಗವಿನುಚು ನಿನು ನಮ್ಮು
ವಾರಲ ಸದಾ ಬ್ರೋಚುಚು ವೇದ
ಸಾರ ಸಭಲನು ಜೂಚುಚು ಶ್ರೀರಾಮು ||

3. ನವಮೋಹನಾಂಗುಲೈನ ಸುರಸತುಲು
ವಿವರಮು ಬಾಡಗ ನಾ ಭಾಗ್ಯಮಾ
ನವರತ್ನ ಮಂಟಪಮುನ ತ್ಯಾಗರಾ
ಜ ವಿನುತಾಕೃತಿ ಬೂನಿನ ಶ್ರೀರಾಮು ||

ಅರ್ಥ : ಶ್ರೀರಾಮು, ಸತ್ಸಾರ್ವಭೌಮು, ಉಯ್ಯಾಲ ಲೂಗವಯ್ಯ-ಉಯ್ಯಾಲೆಯನ್ನು ಆನಂದಿಸಯ್ಯ ; ಕಮಲಜಾದ್ಯಾಖಿಲ ಸುರುಲು-ಬ್ರಹ್ಮನೇ ಮೊದಲಾದ ದೇವತೆಗಳು ; ನಿನುಗೊಲ್ವ-ನಿನ್ನನ್ನು ಹೊಗಳುತ್ತಿರಲು ; ವಿಮಲುಲೈನ-ಪರಿಶುದ್ಧರಾದ ; ಮುನೀಂದ್ರುಲು-ಮುನಿಶ್ರೇಷ್ಠರು ; ಧ್ಯಾನಿಂಪ-ಧ್ಯಾನಿಸುತ್ತಿರಲು ; ಕಮನೀಯ ಭಾಗವತುಲು-ಭಕ್ತರು ; ಗುಣ ಕೀರ್ತನಮುಲುನು-ನಿನ್ನ ಸದ್ಗುಣ ಕೀರ್ತನೆಗಳನ್ನು ; ಆಲಾಪಂಬುಲು ಸೇಯಗ-ಆಲಾಪನೆ ಮಾಡುತ್ತ ಹಾಡುತ್ತಿರಲು ಉಯ್ಯಾಲೆಯ ತೂಗಾಟವನ್ನು ಆನಂದಿಸು. ನಾರದಾದುಲು ಮೆರೆಯುಚು ನುತಿಯಿಂಪ-ನಾರದನೇ ಮೊದಲಾದವರು ಸ್ತುತಿಸುತ್ತ ಮೆರೆದಿರಲು ; ಸಾರಮುಲು-ಅವುಗಳ ಸಾರವನ್ನು ; ಬಾಗ ವಿನುಚು-ಚೆನ್ನಾಗಿ ಕೇಳಿ ; ನಿನು-ನಿನ್ನನ್ನು ; ನಮ್ಮುವಾರಲ-ನಂಬಿದವರನ್ನು ; ಸದಾ ಬ್ರೋಚುಚು-ಸದಾ ಕಾಪಾಡುತ್ತಾ ; ವೇದಸಾರ ಸಭಲನು-ವೇದ ಶಾಸ್ತ್ರಗಳನ್ನು ಅರಿತವರ ಸಮೂಹವನ್ನು ; ಜೂಚುಚು-ನೋಡುತ್ತಾ ಉಯ್ಯಾಲೆಯ ತೂಗುವಿಕೆಯನ್ನು ಆನಂದಿಸು ; ನವಮೋಹನಾಗಿಯರಾದ ಸುರಸತುಲು-ದೇವತಾ ಸ್ತ್ರೀಯರು ; ವಿವರಮು ಬಾಡಗ-ವಿವರವಾಗಿ ಹಾಡಲು ; ನಾ ಭಾಗ್ಯಮಾ-ನನ್ನ ಭಾಗ್ಯವೆ ! ನವರತ್ನಮಂಟಪದಲ್ಲಿ ತ್ಯಾಗರಾಜನಿಂದ ಸ್ತುತನಾದ ಶ್ರೀರಾಮಚಂದ್ರನೇ ಉಯ್ಯಾಲೆಯನ್ನು ಆನಂದಿಸು.

75 ರಾಗ : ನೀಲಾಂಬರಿ ಆದಿತಾಳ ತ್ಯಾಗರಾಜರು

ಪಲ್ಲವಿ : ರಾಮು ರಾಮು ರಾಮು ರಾಮು ರಾಮು ಕೋದಂಡರಾಮು
ರಾಮು ಪಟ್ಟಾಭಿರಾಮು ರಾಮು ರಾಘವ ||

1. ರಾಮು ಶ್ರೀ ಜಾನಕೀ ಭರತ ಲಕ್ಷ್ಮಣ ರಿಪುಘ್ನ
ಪವಮಾನಸುತ ಸಹಿತ ರಾಮು ರಾಘವ

2. ದಶರಥರಾಜಕುಮಾರ ದಶಮುಖಾದಿ ಸಂಹಾರ
ವಿಶದೀಕೃತ ಚರಿತ್ರ ರಾಮು ರಾಘವ

3. ಕೌಸಲ್ಯವರತನಯ ಶ್ರೀ ಕೌಶಿಕಮುನಿ ಸವಪಾಲ
ಅಚಲಗರಳ ಪೂಜ್ಯ ರಾಮು ರಾಘವ

4. ಸಾಕೇತಧಾಮ ಶ್ರೀ ಸೀತಾಮನೋಲ್ಲಾಸ
ಸಾಲಭೇದ ನಿಪುಣ ರಾಮು ರಾಘವ

5 ಗುಹ ಶಬರಿ ಆಂಜನೇಯ ಕಪಿವರ ಶ್ರೀ ಸುಗ್ರೀವ
ರಿಪು ಸೋದರಾದುಲ ಬ್ರೋಚಿನ ರಾಮು ರಾಘವ

6. ತ್ಯಾಗರಾಜಾದಿ ನಿಜದಾಸುಲು ಪೊಗಡಿನ
ನಾಗಶಯನ ಶ್ರೀ ರಾಮು ರಾಘವ ||

ಅರ್ಥ : ರಾಮು ರಾಮು ರಾಮು ರಾಮು, ರಾಮು ಕೋದಂಡರಾಮು, ರಾಮು ಪಟ್ಟಾಭಿರಾಮು, ರಾಮು ರಾಘವ ; ಶ್ರೀ ಜಾನಕಿ ಭರತ ಲಕ್ಷ್ಮಣ, ರಿಪುಘ್ನ-ಶತ್ರುಘ್ನ ; ಪವಮಾನಸುತ-ಆಂಜನೇಯ ; ಸಹಿತನಾದವನು ; ದಶರಥರಾಜಕುಮಾರ, ದಶಮುಖಾದಿಸಂಹಾರ ; ವಿಶದೀಕೃತ ಚರಿತ್ರ-ವಿಸ್ತಾರವಾದ ಚಾರಿತ್ರವುಳ್ಳವನು ; ಕೌಸಲ್ಯವರತನಯ, ಕೌಶಿಕಮುನಿಯ, ಸವ-ಯಜ್ಞವನ್ನು ; ಪಾಲ-ರಕ್ಷಿಸಿದವನು ; ಅಚಲಗರಳ-ವಿಷವನ್ನು ಚಲಿಸದಂತೆ ಮಾಡಿದ ಪರಮೇಶ್ವರನಿಗೆ, ಪೂಜ್ಯನಾದವನು ; ಸಾಕೇತದಲ್ಲಿ ನೆಲಸಿದವನು, ಸೀತೆಯ ಮನಸ್ಸಿಗೆ ಹರ್ಷವುಂಟುಮಾಡುವವನು ; ಸಾಲಭೇದನಿಪುಣ-ಋಷ್ಯಮೂಕದಲ್ಲಿ ಸಾಲವೃಕ್ಷಗಳನ್ನು ಹೊಡೆದು ಉರುಳಿಸಿದವನು ; ಗುಹಶಬರಿ ಆಂಜನೇಯ ಸುಗ್ರೀವ ಹಾಗೂ ರಿಪುಸೋದರ-ರಾವಣನ ತಮ್ಮ ವಿಭೀಷಣ ಮುಂತಾದವರನ್ನು ; ಬ್ರೋಚಿನ-ಕಾಪಾಡಿದವನು. ತ್ಯಾಗರಾಜನೇ ಮೊದಲಾದ ದಾಸರು ಹೊಗಳಿದ ನಾಗಶಯನ ಶ್ರೀ ರಾಮಚಂದ್ರ.

76 ರಾಗ : ಸೌರಾಷ್ಟ್ರ ಆದಿತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ವರಲಕ್ಷ್ಮೀಂ ಭಜರೇರೇ ಮಾನಸ | ವಾಂಛಿತಾರ್ಥ ಫಲಪ್ರದಾಂ
ವರದಾಂ ವನಜಪದಾಂ | ವರಲಕ್ಷ್ಮೀಂ ||

ಅನುಪಲ್ಲವಿ : ಚರಾಚರಾತ್ಮಕ ಪ್ರಪಂಚ ಜನನೀಂ ಸೌರಾಷ್ಟ್ರದೇಶಪತಿನುತ ಧನಿನೀಂ
ನಿರಾಮಯ ಮಹಾವಿಷ್ಣು ಮಾನಿನೀಂ | ನಿರಂಜನೀಂ |
ನಿಖಿಲಾಘ ಭಂಜನೀಂ | ಸುರಾರ್ಚಿತ ಪದಾಂಬುಜ ವಿಕಾಸಿನೀಂ |
ನಿರಾಲಂಬ ಮಾನಸೋಲ್ಲಾಸಿನೀಂ | ಮುರಾರಿ ವಕ್ಷಸ್ಥಲ ನಿವಾಸಿನೀಂ ||
ಪುರಾರಿ ಗುರುಗುಹಚಿದ್ವಿಲಾಸಿನೀಂ ||

ಅರ್ಥ : ರೇ ಮಾನಸ-ಎಲೆ ಮನಸ್ಸೆ ; ವರಲಕ್ಷ್ಮೀಂ ಭಜರೇ-ವರಲಕ್ಷ್ಮಿಯನ್ನು ಭಜಿಸು ; ವಾಂಛಿತಾರ್ಥ ಫಲಪ್ರದಾಂ-ಬಯಸಿದ ಅಪೇಕ್ಷೆಗಳನ್ನು ಪೂರೈಸಿ ಫಲನೀಡುವವಳೂ ; ವರದಾಂ-ವರವನ್ನು ಅನುಗ್ರಹಿಸುವವಳೂ ; ವನಜ ಪದಾಂ-ತಾವರೆಯಂತೆ ಪಾದಗಳುಳ್ಳವಳೂ ಆದ ವರಲಕ್ಷ್ಮಿಯನ್ನು ಸ್ತುತಿಸು.

ಚರಾಚರಾತ್ಮಕವಾದ ಈ ಪ್ರಪಂಚಕ್ಕೆ ತಾಯಿಯುಂತಿರುವವಳು, ಸೌರಾಷ್ಟ್ರ ದೇಶಪತಿ-ಸೌರಾಷ್ಟ್ರ ದೇಶದ ರಾಜನಿಂದ ; ನುತ ಧನಿನೀಂ-ಸ್ತುತಿಗೊಂಡವಳು, ಸಂಪದ್ಯುಕ್ತಳಾದವಳು ; ನಿರಾಮಯ-ಯಾವ ದೋಷಗಳೂ ಇಲ್ಲದವಳು ; ಮಹಾವಿಷ್ಣುವಿನ ಮಡದಿ, ನಿರಂಜನಿಯಾದವಳು ; ನಿಖಿಲಾಘಭಂಜನೀಂ-ಸಕಲ ಪಾಪಗಳನ್ನು ನಾಶ ಮಾಡುವವಳು ; ಸುರಾರ್ಚಿತ-ದೇವತೆಗಳಿಂದ ಪೂಜಿಸಲ್ಪಟ್ಟ ; ಪಾದಾಂಬುಜ ವಿಕಾಸಿನೀಂ-ಪಾದಕಮಲಗಳುಳ್ಳವಳು ; ನಿರಾಲಂಬ ಮಾನಸೋಲ್ಲಾಸಿನೀಂ-ಮನಸ್ಸಿನಲ್ಲಿ ನಿಷ್ಕಾಮವಾದ ಆನಂದವನ್ನು ಉಂಟುಮಾಡುವವಳು ; ಮುರಾರಿ ವಕ್ಷಸ್ಥಲ ನಿವಾಸಿನೀಂ-ವಿಷ್ಣುವಿನ ಎದೆಯಲ್ಲಿ ವಾಸಮಾಡುವವಳು ; ಪುರಗಳನ್ನು ನಾಶಮಾಡಿದ ಗುರುಗುಹನ, ಚಿದ್ವಿಲಾಸಿನೀಂ-ಚಿತ್ತದಲ್ಲಿ ವಿಹರಿಸುವವಳು.

ತಾತ್ಪರ್ಯ : ಎಲೆ ಮನಸ್ಸೇ, ಕೋರಿದ ವರವನ್ನು ನೀಡಿ ಸಲಹುವ ವರಲಕ್ಷ್ಮಿಯನ್ನು ಭಜಿಸು. ಅವಳು ಚರಾಚರಾತ್ಮಕವಾದ ಈ ಜಗತ್ತಿಗೆ ತಾಯಿ, ಮಹಾವಿಷ್ಣುವಿನ ಮಡದಿ, ಅವನ ವಕ್ಷಸ್ಥಲದಲ್ಲಿ ನೆಲಸಿದವಳು, ಸಕಲಪಾಪಗಳನ್ನು ಪರಿಹರಿಸುವವಳು, ನಿಷ್ಕಾಮವಾದ ಆನಂದವನ್ನು ನೀಡುವವಳು.

ತ್ಯಾಗರಾಜರು

77 ರಾಗ : ಸೌರಾಷ್ಟ್ರ ಆದಿತಾಳ

ಪಲ್ಲವಿ : ಶ್ರೀ ಗಣಪತಿನಿ ಸೇವಿಂಪರಾರೆ, ಶ್ರಿತಮಾನವುಲಾರಾ !

ಅನುಪಲ್ಲವಿ : ವಾಗಧಿಪತಿ ಸುಪೂಜಲ ಜೇಕೊನಿ
ಬಾಗ ನಟಿಂಪುಚು ವೆಡಲಿನ ||

ಚರಣ : ಪನಸ ನಾರಿಕೇಳಾದಿ ಜಂಬೂಫಲಮುಲಾರಗಿಂಚಿ
ಘನತರಂಬುಗನು ಮಹಿಪೈ ಪದಮುಲು
ಘಲ್ಲು ಘಲ್ಲನ ನುಂಚಿ
ಅನಯಮುಹರಿಚರಣ ಯುಗಮುಲನು ಹೃದ
ಯಾಂಬುಜಮುನ ನುಂಚಿ
ವಿನಯಮುನನು ತ್ಯಾಗರಾಜ ವಿನುತುಡು
ವಿವಿಧ ಗತುಲ ಧಲಂಗುಮನಿ ವೆಡಲಿನ ||

ಅರ್ಥ : ಶ್ರಿತಮಾನವುಲಾರಾ–ಭಕ್ತ ಜನರೇ ; ಶ್ರೀಗಣಪತಿನಿ–ಶ್ರೀಗಣಪತಿಯನ್ನು ; ಸೇವಿಂಪರಾರೇ–ಸೇವಿಸಿರಿ ; ವಾಗಧಿಪತಿ–ಬ್ರಹ್ಮನಿಂದ ; ಸುಪೂಜಲ ಜೇಕೊನಿ–ಪೂಜೆ ಕೈಕೊಂಡು ; ಬಾಗಾ–ಮನೋಹರವಾಗಿ ; ನಟಿಂಪುಚು–ನಾಟ್ಯವಾಡುತ್ತಾ ; ವೆಡಲಿನ–ಬರುತ್ತಿರುವ, ಗಣಪತಿಯನ್ನು ಸೇವಿಸಿರಿ. ಪನಸ–ಹಲಸು ; ನಾರಿಕೇಳ–ತೆಂಗು ; ಜಂಬೂಫಲಮುಲು–ನೇರಳೆ ಹಣ್ಣುಗಳನ್ನು ; ಆರಗಿಂಚಿ–ಸೇವಿಸಿ ; ಘನತರಂಬುಗನು–ಮಹಿಮಾತಿಶಯದಿಂದ ; ಮಹಿಪೈ–ಭೂಮಿಯ ಮೇಲೆ ; ಪದಮುಲು–ಹೆಜ್ಜೆಗಳನ್ನು ; ಘಲ್ಲು ಘಲ್ಲನ ನುಂಚಿ–ಘಲ್ಲು ಘಲ್ಲೆಂದು ಇರಿಸುತ್ತಾ ; ಹರಿ ಚರಣಯುಗಮುಲುನು–ಶ್ರೀಹರಿಯ ಪಾದಗಳನ್ನು ; ಹೃದಯಾಂಬುಜಮುನ–ಹೃದಯ ಕಮಲದಲ್ಲಿ ; ನುಂಚಿ– ಇರಿಸಿಕೊಂಡು ; ವಿನಯಮುನನು–ವಿನಯದಿಂದ ; ತ್ಯಾಗರಾಜ ವಿನುತುಡು–ತ್ಯಾಗರಾಜನು ಮಾಡುವ ಸ್ತುತಿಯನ್ನು ಸ್ವೀಕರಿಸಿ ; ವಿವಿಧ ಗತುಲ–ವಿವಿಧ ಗತಿಗಳಿಂದ ; ಧಲಂಗೆಂದು ; ವೆಡಲಿನ–ಹೊರಟು ಬರುತ್ತಿರುವ ಶ್ರೀ ಗಣಪತಿಯನ್ನು ಸೇವಿಸಿರಿ.

ತಾತ್ಪರ್ಯ : ಭಕ್ತಜನರೇ ಶ್ರೀಗಣಪತಿಯನ್ನು ಸೇವಿಸಿರಿ. ಬ್ರಹ್ಮನಿಂದ ಪೂಜೆಗೊಂಡು ಪನಸನಾರಿಕೇಳಾದಿ ಫಲಗಳನ್ನು ಸೇವಿಸಿ, ಸುಂದರವಾಗಿ ನಾಟ್ಯವಾಡುತ್ತಾ, ಘಲ್ಲು ಘಲ್ಲೆಂದು ಹೆಜ್ಜೆಗಳನ್ನಿರಿಸುತ್ತಾ, ಶ್ರೀ ಹರಿಯ ಪಾದಗಳನ್ನು ಹೃದಯದಲ್ಲಿರಿಸಿಕೊಂಡು ಬರುತ್ತಿರುವ ಗಣಪತಿಯನ್ನು ಅರ್ಚಿಸಿ ಸೇವಿಸಿರಿ.

ರಾಮನಾಡ್ ಶ್ರೀನಿವಾಸಯ್ಯಂಗಾರ್

78. ರಾಗ : ಸೌರಾಷ್ಟ್ರ ಆದಿತಾಳ

ಪಲ್ಲವಿ : ಚಿಂತದೀರ್ಚರಾ ಸೀತಾರಾಮಣ
ಚಿರುನಾಗಲ ಶೃಂಗಾರರಾಮ ||

ಅನುಪಲ್ಲವಿ : ಪಂತಮೇಲರಾ ನೀಕು ಪಲುಮಾರು ನಾತೋ
ಬಾಗಮೊರಲಿಡ ಪಾಪಮೆರಿಗಿ ನಾತೋ ||

ಚರಣ : ದಾರಿ ತೆಲಿಯಕ ತಪಿಂಚುಚು
ನಿನ್ನು ಕೋರಿವಚ್ಚಿತಿ ಕೋಮಲಾಂಗ ನಾತೋ
ನಾರಿನುತ ಪದ್ಮನಾಭ ನಗಧರ
ವಾರಿಜಾಕ್ಷ ಶ್ರೀನಿವಾಸ ನಾತೋ ||

ಅರ್ಥ : ಸೀತಾರಮಣ-ಶ್ರೀ ರಾಮಚಂದ್ರ ; ಚಿರುನೌಗಲ-ಮುಗುಳ್ನಗೆಯಿಂದ ಕೂಡಿದ ; ಶೃಂಗಾರರಾಮ-ಸುಂದರನಾದ ರಾಮಚಂದ್ರ ; ಚಿಂತದೀರ್ಚರಾ-ಚಿಂತೆಯನ್ನು ಪರಿಹರಿಸಯ್ಯ ಪಂತಮೇಲರಾ ನೀಕು-ಏಕೆ ನಿನಗೆ ಹಟ ? ; ಪಾಪಮೆರಿಗಿ-ಪಾಪಗಳು ಅವರಿಸಿರುವ ; ನಾತೋ-ನನ್ನ ಮೇಲೆ ; ಪಲುಮಾರು-ಅನೇಕಸಾರಿ ; ಬಾಗಮೊರಲಿಡ-ವಿಶೇಷವಾಗಿ ಮೊರೆಯಿಡುತ್ತಿದ್ದರೂ ; ಏಕೆ ಹಟ ಮಾಡುತ್ತಿರುವೆ ? ; ದಾರಿತೆಲಿಯಕ-ದಾರಿ ತಿಳಿಯದೆ ; ತಪಿಂಚುಚು-ತಪಿಸುತ್ತಿದ್ದೇನೆ ; ನಿನ್ನು ಕೋರಿವಚ್ಚಿತಿ-ನಿನ್ನನ್ನು ಪ್ರಾರ್ಥಿಸುತ್ತಾ ಬಂದಿದ್ದೇನೆ ; ಕೋಮಲಾಂಗನೆ, ನಾರಿನುತ-ದ್ರೌಪದಿಯಿಂದ ನುತಿಸಲ್ಪಟ್ಟ ಪದ್ಮನಾಭನೆ, ಗೋವರ್ಧನವನ್ನೆತ್ತಿದವನೆ, ವಾರಿಜಾಕ್ಷ-ತಾವರೆಯಂತೆ ಕಣ್ಣುಳ್ಳವನೆ ; ಶ್ರೀನಿವಾಸನೆ ; ನಾತೋ-ನನ್ನ ಮೇಲೆ ಏಕೆ ಅಸಮಾಧಾನ ? ಚಿಂತೆಯನ್ನು ಪರಿಹರಿಸಯ್ಯ.

ತಾತ್ಪರ್ಯ : ಮುಗುಳುನಗುತ್ತಿರುವ ಶ್ರೀ ರಾಮಚಂದ್ರ, ದಾರಿತಿಳಿಯದೆ ತಪಿಸುತ್ತಿದ್ದೇನೆ ; ನಿನ್ನನ್ನೇ ಕೋರುತ್ತಾ ಬಂದಿದ್ದೇನೆ ; ವಾರಿಜಾಕ್ಷ, ಶ್ರೀನಿವಾಸ, ನನ್ನ ಮೇಲೆ ಅಸಮಾಧಾನವೇಕೆ ? ನನ್ನ ಚಿಂತೆಯನ್ನು ತೀರಿಸಯ್ಯ.

79 ರಾಗ : ಶಹನ ಆದಿತಾಳ ತ್ಯಾಗರಾಜರು

ಪಲ್ಲವಿ : ಗಿರಿಪೈ ನೆಲಕೊನ್ನ ರಾಮುನಿ ಗುರಿತಪ್ಪಕ ಕಂಟಿ ||

ಅನುಪಲ್ಲವಿ : ಪರಿವಾರುಲು ವಿರಿ ಸುರಟುಲಚೇ ನಿಲ
ಬಡಿ ವೆಸರುಚು ಗೊಸರುಚು ಸೇವಿಂಪಗ ||

ಚರಣ : ಪುಲಕಾಂಗಿತುಡೈ ಆನಂದಾಶ್ರು
ಪುಲನಿಂಪುಚು ಮಾಟಲಾಡವಲೆ ನನಿ
ಕಲುವರಿಂಚಗಾನಿ ಪದಿ ಪೂಟಲಪೈ
ಗಾಚೆದ ನನು ತ್ಯಾಗರಾಜ ವಿನುತುನಿ ||

ಅರ್ಥ : ಗಿರಿಪೈ-ಪರ್ವತದ ಮೇಲೆ ; ನೆಲಕೊನ್ನ-ನೆಲಸಿದ ; ರಾಮುನಿ-ರಾಮನನ್ನು ; ಗುರಿತಪ್ಪಕ ಕಂಟಿ-ಗುರಿ ತಪ್ಪದೆ ನಿಟ್ಟಿಸಿ ನೋಡಿದೆನು ; ಪರಿವಾರುಲು-ಪರಿವಾರದವರೆಲ್ಲರೂ ; ವಿರಿಸುರಟುಲಚೇ-ಕೆದರಿದ ಚಾಮರಗಳನ್ನು ಬೀಸುತ್ತಾ ; ನಿಲಬಡಿ-ನಿಂತಿರಲು ; ವಿಸರುಚು ಗೊಸರುಚು-ನಾನು ಮುಂದು ತಾನು ಮುಂದು ಎಂದು ಕೊಸರಾಡುತ್ತ ; ಸೇವಿಂಪಗ-ಸೇವಿಸುತ್ತಿರಲು ; ಪುಲಕಾಂಗಿತುಡೈ-ಮೈಯೆಲ್ಲ ರೋಮಾಂಚಗೊಂಡು ; ಆನಂದಾಶ್ರುವುಲ ನಿಂಪುಚು-ಆನಂದದ ಕಣ್ಣೀರು ತುಂಬಿಕೊಂಡು ; ಮಾಟಲಾಡವಲೆನು ಅನಿ-ಮಾತನಾಡಬೇಕು ಎಂದು ; ಕಲುವರಿಂಚ ಗಾನಿ-ಕನವರಿಸುತ್ತಾ ; ಪದಿಪೂಟಲಪೈ-ಹಲವೊಮ್ಮೆ ; ಗಾಚೆದ-ಕಾಪಾಡುವೆ ಎಂದು ತ್ಯಾಗರಾಜ ವಿನುತುನಿ-ತ್ಯಾಗರಾಜನಿಂದ ನುತನಾದ ರಾಮನನ್ನು ಕಣ್ಣಾರೆ ನೋಡಿದೆನು.

ತಾತ್ಪರ್ಯ : ಪರ್ವತದ ಮೇಲೆ ನಿಂತ ರಾಮನನ್ನು ಕಂಡೆ ! ದೇವಾದಿದೇವತೆಗಳೆಲ್ಲರೂ ಚಾಮರಗಳನ್ನು ಹಿಡಿದು ನಾ ಮುಂದು ತಾ ಮುಂದು ಎನ್ನುತ್ತಾ ಚಾಮರಗಳನ್ನು ಬೀಸುತ್ತಿರಲು ; ಮೈ ರೋಮಾಂಚಗೊಂಡು, ಕಣ್ಣುಗಳಲ್ಲಿ ಆನಂದಾಶ್ರು ತುಂಬಿ, ಕಾಪಾಡು ಎಂದು ಕನವರಿಸುತ್ತಾ ಕಂಡೆ, ನಾನು ಶ್ರೀರಾಮನನ್ನು ಕಂಡೆ !

80 ರಾಗ : ಶಹನ ತ್ರಿಪುಟತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶ್ರೀ ಕಮಲಾಂಬಿಕಾಯಾಂ । ಭಕ್ತಿಂ ಕರೋಮಿ
ಶ್ರಿತ ಕಲ್ಪವಾಟಿಕಾಯಾಂ ಚಂಡಿಕಾಯಾಂ । ಜಗದಂಬಿಕಾಯಾಂ ॥

ಅನುಪಲ್ಲವಿ : ರಾಕಾ ಚಂದ್ರವದನಾಯಾಂ ರಾಜೀವ ನಯನಾಯಾಂ । ಪಾಕಾರಿ
ನುತ ಚರಣಾಯಾಂ । ಆಕಾಶಾದಿ ಕಿರಣಾಯಾಂ ॥
ಹ್ರೀಂಕಾರ ವಿಪಿನ ಹರಿಣ್ಯಾಂ । ಹ್ರೀಂಕಾರ ಸುಶರೀರಿಣ್ಯಾಂ
ಹ್ರೀಂಕಾರ ತರುಮಂಜರ್ಯಾಂ । ಹ್ರೀಂಕಾರೈಶ್ವರ್ಯಾಂ ಗೌರ್ಯಾಂ ॥

ಚರಣ : ಶರೀರತ್ರಯ ವಿಲಕ್ಷಣ ಸುಖತರ ಸ್ವಾತ್ಮಾನುಭೋಗಿನ್ಯಾಂ । ವಿರಿಂಚಿ
ಹರೀಶಾನ ಹರಿಹಯ ವೇದಿತ ರಹಸ್ಯ ಯೋಗಿನ್ಯಾಂ । ಪರಾದಿ ವಾಗ್ದೇವ
ತಾರೂಪವಶಿನ್ಯಾದಿ ವಿಭಾಗಿನ್ಯಾಂ । ಚರಾತ್ಮಕ ಸರ್ವರೋಗ ಹರ
ನಿರಾಮಯ ರಾಜಯೋಗಿನ್ಯಾಂ ಕರಧೃತ ವೀಣಾವಾದಿನ್ಯಾಂ
ಕಮಲಾನಗರಿ ವಿನೋದಿನ್ಯಾಂ ಸುರನರ ಮುನಿಜನ ವೇದಿನ್ಯಾಂ
ಗುರುಗುಹ ವರ ಪ್ರಸಾದಿನ್ಯಾಂ ॥

ಅರ್ಥ : ಶ್ರೀ ಕಮಲಾಂಬಿಕೆಗೆ ಭಕ್ತಿ ಸಲ್ಲಿಸುತ್ತೇನೆ ; ಶ್ರಿತ ಕಲ್ಪ ವಾಟಿಕಾಯಾಂ–ಭಕ್ತ ಜನರಿಗೆ ಕಲ್ಪ ವೃಕ್ಷದಂತಿರುವ ವಳಿಗೆ ; ಚಂಡಿಕೆಗೆ ಜಗದಂಬಿಕೆಗೆ ವಂದಿಸುತ್ತೇನೆ. ರಾಕಾಚಂದ್ರ ವದ ನಾಯಾಂ–ಹುಣ್ಣಿಮೆಯ ಚಂದ್ರನಂತಹ ಮುಖವುಳ್ಳ ; ರಾಜೀವ ನಯನಾಯಾಂ–ತಾವರೆ ಯಂತಹ ಮುಖವುಳ್ಳ ; ಪಾಕಾರಿನುತ ಚರಣಾಯಾಂ–ದೇವೇಂದ್ರನಿಂದ ನುತಿಗೊಂಡ ಪಾದ ಗಳುಳ್ಳ ; ಆಕಾಶಾದಿ ಕಿರಣಾಯಾಂ–ತನ್ನ ಪ್ರಭೆಯಿಂದ ಆಕಾಶವನ್ನೆಲ್ಲ ಮುಸುಕಿದ ; ಹ್ರೀಂಕಾರ ವಿಪಿನ ಹರಿಣ್ಯಾಂ–ಹ್ರೀಂಕಾರವೆಂಬ ಕಾಡಿನಲ್ಲಿ ಜಿಂಕೆಯಂತಿರುವ ; ಹ್ರೀಂಕಾರ ಸುಶರೀರಿಣ್ಯಾಂ–ಹ್ರೀಂಕಾರವೇ ಸುಂದರ ದೇಹವಾಗುಳ್ಳ ; ಹ್ರೀಂಕಾರ ತರುಮಂಜರ್ಯಾಂ–ಹ್ರೀಂಕಾರವೆಂಬ ಮರದ ಚಿಗುರಿನಂತಿರುವ ; ಹ್ರೀಂಕಾರೈಶ್ವರ್ಯಾಂ–ಹ್ರೀಂಕಾರವೇ ಐಶ್ವರ್ಯವಾ ಗುಳ್ಳ ; ಗೌರ್ಯಾಂ–ಗೌರಿಗೆ, ವಂದನೆ ಸಲ್ಲಿಸುತ್ತೇನೆ. ಶರೀರತ್ರಯ–ಸ್ಥೂಲ, ಲಿಂಗ, ಕಾರಣ ಶರೀರಗಳ ; ವಿಲಕ್ಷಣ ಸುಖತರ ಸ್ವಾತ್ಮಾನುಭೋಗಿನ್ಯಾಂ–ವಿಶಿಷ್ಟವಾದ ಸುಖಗಳನ್ನು ಅನು ಭವಿಸುವ ; ವಿರಿಂಚಿ–ಬ್ರಹ್ಮ ; ಹರಿ–ವಿಷ್ಣು ; ಈಶಾನ–ಮಹೇಶ್ವರ ; ಹರಿ–ಅಗ್ನಿ ; ಹಯ–ಇಂದ್ರ ಮುಂತಾದವರಿಗೆ ; ವೇದಿತ ರಹಸ್ಯ ಯೋಗಿನ್ಯಾಂ–ಯೋಗರಹಸ್ಯಗಳನ್ನು ಅರಿವು ಮಾಡಿಕೊಟ್ಟ ; ಪರಾದಿ–ಪರಾ ಪಶ್ಯಂತೀ ಮಧ್ಯಮಾ ಎಂಬ ; ವಾಗ್ದೇವತಾ ರೂಪ ವಶಿನ್ಯಾದಿ ವಿಭಾಗಿನ್ಯಾಂ–ವಾಗ್ದೇವತಾ ರೂಪದಲ್ಲಿ ಶೋಭಿಸಿ, ಅವುಗಳನ್ನು ವಿಭಾಗಿಸಿದ ; ಚರಾತ್ಮಕ–ಜಗತ್ತಿನ ಚರಜೀವಿಗಳ ; ಸರ್ವರೋಗ ಹರ–ಸಕಲ ರೋಗಗಳನ್ನು ಪರಿಹರಿಸುವ ; ನಿರಾಮಯ ರಾಜಯೋಗಿನ್ಯಾಂ–ಯಾವ ತೊಂದರೆಯೂ ಇಲ್ಲದ ರಾಜಯೋಗಿನಿಯಾದ ; ಕರಧೃತ ವೀಣಾ ವಾದಿನ್ಯಾಂ–ಕೈಯಲ್ಲಿ ವೀಣೆ ಹಿಡಿದು ವಾದನ ಮಾಡುತ್ತಿರುವ ; ಕಮಲಾನಗರಿಯಲ್ಲಿ ವಿನೋದಿ

ಸುವ ; ಸುರನರ ಮುನಿಜನ ಮೋದಿನ್ಯಾಂ-ದೇವತೆಗಳು ಮಾನವರು ಮುನಿಜನರು ಸಂತೋಷ ಪಡುವಂತೆ ಮಾಡುವ, ಗುರುಗುಹ ವರ ಪ್ರಸಾದಿನ್ಯಾಂ-ಗುರುಗುಹನಿಗೆ ವರವೀಯುವ ಶ್ರೀ ಕಮಲಾಂಬಿಕೆಗೆ ವಂದಿಸುತ್ತೇನೆ.

ತಾತ್ಪರ್ಯ : ಇದು ದೇವಿಯನ್ನು ಕುರಿತ ಸ್ತುತಿ. ಆಕೆ ಚಂಡಿಕೆ, ಜಗದಂಬಿಕೆ. ಹುಣ್ಣಿಮೆಯ ಚಂದ್ರನಂತೆ ಸುಂದರವಾದ ಮುಖ ಅವಳದು. ಗಗನವನ್ನೆಲ್ಲ ವ್ಯಾಪಿಸಿದ ಕಾಂತಿ ಅವಳದು. ದೇವೇಂದ್ರನು ಪೂಜಿಸುವ ಪಾದಗಳು ಅವಳವು. ಹ್ರೀಂಕಾರವೆಂಬ ಕಾಡಿನಲ್ಲಿ ಅವಳು ಜಿಂಕೆಯಂತೆ, ಹ್ರೀಂ ಕಾರವೆಂಬ ಮರದ ಚಿಗುರಿನಂತೆ ; ಹ್ರೀಂಕಾರವೆಂಬ ಐಶ್ವರ್ಯದಿಂದ ಕೂಡಿದ, ಹ್ರೀಂಕಾರವೇ ದೇಹವಾಗುಳ್ಳ ಗೌರಿ ಅವಳು. ಸ್ಥೂಲ, ಸೂಕ್ಷ್ಮ, ಕಾರಣ ಶರೀರ ಸುಖಗಳನ್ನು ಸ್ವಾತ್ಮದಲ್ಲೇ ಅನುಭವಿಸಿ, ಬ್ರಹ್ಮ ವಿಷ್ಣು ಈಶ್ವರ ಇಂದ್ರಾಗ್ನಿಗಳಿಗೆ ಯೋಗರಹಸ್ಯವನ್ನು ತಿಳಿಯಪಡಿಸಿದ, ಸಕಲ ದೇವಮಾನವ ಮುನಿಜನರೂ ಸಂತೋಷಪಡುವಂತೆ ಮಾಡುವ ಶ್ರೀ ಕಮಲಾಂಬಿಕೆ ಯನ್ನು ದೀಕ್ಷಿತರು ವಂದಿಸುತ್ತಾರೆ.

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

81. ರಾಗ : ಶಹನ

ಪಲ್ಲವಿ : ರಾಮ ಇಕನನ್ನು ಬ್ರೋವರಾದಾ ದಯಲೇದಾ ಶ್ರೀ ||

ಅನುಪಲ್ಲವಿ : ತಾಮಸಂಬು ಜೇಸಿತೇ ಇಕತಾಳನು ಪರುಲನುವೇಡನು ||

ಚರಣ : ಆರು ಶತ್ರುವುಲನು ಬಟ್ಟಿ ಹತಮುಚೇಸಿ ಪೂರ್ವಾರ್ಜಿತ
ಘೋರ ಪಾಪಮುಲನು ಪೋಗೊಟ್ಟನೇಜೇಸಿನಟ್ಟಿ
ನೇರಮುಲನು ಮನ್ನಿಂಚಿ ನೀವೇ ಕಾವಲೆನುಗಾನಿ
ವೇರೆವ್ವರುನ್ನಾರು ಶ್ರೀ ವೆಂಕಟೇಶ್ವರ ದಯಾಕರ ||

ಅರ್ಥ : ರಾಮ, ಇಕನನ್ನು-ಇನ್ನು ನನ್ನನ್ನು ; ಬ್ರೋವರಾದಾ-ಕಾಪಾಡಬಾರದೆ ; ದಯಲೇದಾ-ದಯೆ ಯಿಲ್ಲವೆ?; ತಾಮಸಂಬು ಜೇಸಿತೇ-ವಿಳಂಬ ಮಾಡಿದರೆ; ಇಕತಾಳನು-ಇನ್ನು ಸಹಿಸಲಾರೆನು; ಪರುಲನು ವೇಡನು-ನೀನಲ್ಲದೆ ಅನ್ಯರನ್ನು ಬೇಡುವುದಿಲ್ಲ ; ಆರುಶತ್ರುವುಲನು ಬಟ್ಟಿ-ಅರಿಷಡ್ವರ್ಗಗಳನ್ನು ಹಿಡಿದು; ಹತಮುಚೇಸಿ-ನಾಶಮಾಡಿ; ಪೂರ್ವಾರ್ಜಿತ-ಹಿಂದೆ ಸಂಪಾದಿ ಸಿದ; ಘೋರಪಾಪಮುಲನು-ಭೀಕರವಾದ ಪಾಪಗಳನ್ನು ; ಪೋಗೊಟ್ಟ-ಹೋಗಲಾಡಿಸಿ ನೇ ಜೇಸಿನಟ್ಟಿ-ನಾನು ಮಾಡಿದಂತಹ; ನೇರಮುಲನು-ತಪ್ಪುಗಳನ್ನು; ಮನ್ನಿಂಚಿ-ಕ್ಷಮಿಸಿ; ನೀವೇ ಕಾವಲೆನುಗಾನಿ-ನೀನೇ ಕಾಪಾಡಬೇಕಲ್ಲದೆ ; ವೇರೆವ್ವರುನ್ನಾರು-ಬೇರೆ ಯಾರಿದ್ದಾರೆ, ಶ್ರೀ ವೆಂಕಟೇಶ್ವರನೆ ದಯಾಕರನೆ ?

ತಾತ್ಪರ್ಯ : ಶ್ರೀ ರಾಮಚಂದ್ರ, ನನ್ನನ್ನು ಕಾಪಾಡಬಾರದೆ ? ನನ್ನ ಮೇಲೆ ದಯೆ ಬರಲಿಲ್ಲವೆ ! ನಾನಿನ್ನು ವಿಳಂಬವನ್ನು ಸಹಿಸಲಾರೆನಲ್ಲ ! ಅರಿಷಡ್ವರ್ಗಗಳನ್ನು ಹಿಡಿದು ನಾಶಮಾಡಿ, ನಾನು ಹಿಂದೆ ಗೈದ ಪಾಪಗಳನ್ನು ಹೋಗಲಾಡಿಸಿ, ನನ್ನ ತಪ್ಪುಗಳನ್ನು ಕ್ಷಮಿಸಿ ಕಾಪಾಡಲು ನೀನಲ್ಲದೆ ಬೇರೆ ಯಾರಿದ್ದಾರಯ್ಯ ವೆಂಕಟೇಶ, ಶ್ರೀನಿವಾಸ ?

82. ರಾಗ : ಷಣ್ಮುಖಪ್ರಿಯ ಆದಿತಾಳ ತ್ಯಾಗರಾಜರು

ಪಲ್ಲವಿ : ವದ್ದನೇವಾರು ಲೇರು

ಅನುಪಲ್ಲವಿ : ಅದ್ದಂಪು ಮೋಮುನು ಜೂಡನೇನನಯಮುಂಗಲಾರ್ಚಿತೇ ಜೂಚಿ ||

ಚರಣ : ಕೋರಿಕಲಿಲಲೋ ದಿವಿಲೋ ಕೊಂಚಮೈನಲೇನಿ ನಾಮನಸು
ದಾರಿ ತೆಲಿಯ ದೈವಮು ನೀವು ಸುಮೀ-ತ್ಯಾಗರಾಜ ಹೃದ್ಭೂಷಣ ನಿನ್ನುವಿನಾ ||

ಅರ್ಥ : ವದ್ದನೇವಾರು ಲೇರು–ಇಲ್ಲವೆನ್ನುವವರು ಯಾರೂ ಇಲ್ಲ; ಅದ್ದಂಪು-ಕನ್ನಡಿಯಂತೆ ಹೊಳೆಯುವ; ಮೋಮುನು–ನಿನ್ನ ಮುಖವನ್ನು; ಜೂಡ–ನೋಡಲು; ನೇನು–ನಾನು; ಅನಯಮು–ಸತತವೂ; ಅಂಗಲಾರ್ಚಿತೇ–ಬೇಡಿಕೊಳ್ಳುತ್ತಿದ್ದರೂ, ಅಂಗಲಾಚಿಕೊಳ್ಳುತ್ತಿದ್ದರೂ ; ಜೂಚಿ–ಅದನ್ನು ನೋಡಿಯೂ; ಕೋರಿಕಲು-ಪ್ರಾರ್ಥನೆಗಳು; ಇಲಲೋದಿವಿಲೋ–ಇಹಪರಗಳಲ್ಲಿ; ಕೊಂಚಮೈನ ಲೇನಿ–ಸ್ವಲ್ಪವಾದರೂ ಇಲ್ಲದೆ; ನಾ ಮನಸು–ನನ್ನ ಮನಸ್ಸು; ದಾರಿತೆಲಿಯ ದೈವಮು–ದಾರಿ ತೋರಿಸುವ ದೈವವು ನೀನೇ; ನೀವು ಸುಮೀ–ನೀನೊಬ್ಬನೇ ಅಲ್ಲವೆ ಎನ್ನುತ್ತದೆ. ತ್ಯಾಗರಾಜನ ಹೃದಯಕ್ಕೆ ಅಲಂಕಾರವಾಗಿರುವ ಶ್ರೀ ರಾಮಚಂದ್ರ ಇಲ್ಲವೆನ್ನದಿರು.

83. ರಾಗ : ಷಣ್ಮುಖಪ್ರಿಯ ಆದಿತಾಳ ರಾಮರತ್ನಂ

ಪಲ್ಲವಿ : ಷಡಾನನ ಮೊರಲಿಡಿನ ನಾಪ್ಯೈ ಕರುಣಜೂಡರಾದಾ ವಾದಾ||

ಅನುಪಲ್ಲವಿ : ಮೃಡಾಣಿಸುತ ನನ್ನು ಬ್ರೋವ ಸಮಯಮಿದಿ
ದೇವ ದೇವಸೇನಾಪ್ರಿಯ ||

ಚರಣ : ಗತಿನೀವೇಯನಿ ಕೋರಿನ ನನ್ನು ಕೃತಕೃತ್ಯುನಿ ಜೇಯ
ಪತಿತಪಾವನ ವರ ಶಿಖಿವಾಹನ ಜಾಲಮೇಲ ರಾಮಸನ್ನುತ ||

ಅರ್ಥ : ಷಡಾನನ–ಆರುಮುಖದ ಸುಬ್ರಹ್ಮಣ್ಯನೆ ; ಮೊರಲಿಡಿನ–ಮೊರೆಯಿಡುತ್ತಿರುವ ; ನಾಪ್ಯೈ-ನನ್ನ ಮೇಲೆ ; ಕರುಣ ಜೂಡರಾದಾ–ಕರುಣೆಯಿಂದ ನೋಡಬಾರದೆ ; ವಾದಾ–ಹಟ ವೇಕೆ ; ಮೃಡಾಣಿಸುತ–ಪಾರ್ವತಿಯ ಪುತ್ರನೆ ; ನನ್ನು–ನನ್ನನ್ನು ; ಬ್ರೋವ ಸಮಯಮಿದಿ–ಕಾಪಾಡುವ ಸಮಯ ಇದು ;ದೇವ, ದೇವಸೇನಾಪತಿಯೆ ; ಗತಿನೀವೇ–ನೀನೇ ಗತಿ ; ಅನಿ-ಎಂಬುದಾಗಿ ; ಕೋರಿನ–ಪ್ರಾರ್ಥಿಸಿದ ; ನನ್ನು–ನನ್ನನ್ನು ; ಕೃತಕೃತ್ಯುನಿ ಜೇಯ–ಕೃತಕೃತ್ಯನ ನ್ನಾಗಿ ಮಾಡು ; ಪತಿತರನ್ನು ಪಾವನಗೊಳಿಸುವ ; ಶ್ರೇಷ್ಠನಾದ, ಶಿಖಿವಾಹನ–ನವಿಲನ್ನು ವಾಹನವಾಗುಳ್ಳ, ರಾಮಸನ್ನುತನಾದ ಷಣ್ಮುಖನೆ ; ಜಾಲಮೇಲ-ವಿಳಂಬವೇಕೆ ?

ತಾತ್ಪರ್ಯ : ಏಕೆ ತಡಮಾಡುತ್ತಿರುವೆ ! ಷಣ್ಮುಖಸ್ವಾಮಿಯೆ, ದೇವಸೇನಾಪತಿಯೆ, ಪಾರ್ವತೀಪುತ್ರನೆ, ನನ್ನನ್ನು ಕರುಣೆಯಿಂದ ನೋಡಬಾರದೇ ? ನೀನೇ ಗತಿಯೆಂದು ನಂಬಿದ ನನ್ನನ್ನು ಕೃತಕೃತ್ಯನ ನ್ನಾಗಿ ಮಾಡು.

84 ರಾಗ : ಷಣ್ಮುಖಪ್ರಿಯ ಛಾಪುತಾಳ ಸ್ವಾತಿ ತಿರುನಾಳ್

ಪಲ್ಲವಿ : ಮಾಮವ ಕರುಣಯಾ ಮನುಕುಲ ಲಲಾಮ ||

ಅನುಪಲ್ಲವಿ : ಕಾಮಿತ ದಾನಲೋಲ ಕಮನೀಯ ಸುಶೀಲ

ಚರಣ : ಅರಿಗಣ ವಿದಳನ ಪರಮ ಪಟು ಚರಿತ
ಚಾರುಕರ ಕೃತಾವಾಸ ನಿರುಪಮ ಶರಚಾಪ ||

2. ಮುನಿಜನ ಮಾನಸ ವನಜ ಕಳಹಂಸ
ಕನಕ ವಸನಧರ ಸೂನಶರ ಸುಂದರ ||

3. ವಿಕಚ ಕಮಲಮುಖ ವಿದೇಹಸುತಾ ರಮಣ
ಪಂಕಜನಾಭ ಶೌರೇ ಕುರು ಮಮ ಕುಶಲಂ ||

ಅರ್ಥ : ಮನುಕುಲ ಲಲಾಮ–ಮನುವಂಶಕ್ಕೆ ಶ್ರೇಷ್ಠನಾದವನೇ ; ಕರುಣಯಾ–ಕರುಣೆಯಿಂದ, ಮಾಂ ಅವ–ನನ್ನನ್ನು ರಕ್ಷಿಸು ; ಕಾಮಿತ ದಾನಲೋಲ–ಬಯಸಿದುದನ್ನು ನೀಡುವ ; ಕಮನೀಯ ಸುಶೀಲ–ಮನೋಹರವಾದ, ಸಚ್ಚರಿತ್ರನಾದ ; ಅರಿಗಣ ವಿದಳನ–ಶತ್ರುಗಳನ್ನು ನಾಶಮಾಡುವುದರಲ್ಲಿ ; ಪರಮ ಪಟು ಚರಿತ–ಕುಶಲನಾದವನೆ ; ಚಾರುಕರ–ಸುಂದರವಾದ ಕೈಗಳಲ್ಲಿ ; ನಿರುಪಮ–ಎಣೆಯೇ ಇಲ್ಲದ ; ಶರಚಾಪ ಕೃತ ಆವಾಸ–ಬಿಲ್ಲು ಬಾಣಗಳನ್ನು ಹಿಡಿದವನೆ ; ಮುನಿಜನ ಮಾನಸ–ಮುನಿಗಳ ಮನಸ್ಸೆಂಬ ; ವನಜ ಕಳಹಂಸ–ತಾವರೆಗೆ ರಾಜಹಂಸದಂತಿರುವವನೆ ; ಕನಕವಸನಧರ–ಚಿನ್ನದ ವಸ್ತ್ರಗಳನ್ನು ಧರಿಸಿದವನೆ ; ಸೂನಶರ–ಪುಷ್ಪಬಾಣಗಳನ್ನು ಹಿಡಿದ ಮನ್ಮಥನಂತೆ ; ಸುಂದರ–ಸುಂದರನಾದವನೆ ; ವಿಕಚ ಕಮಲಮುಖ–ಅರಳಿದ ತಾವರೆಯಂತೆ ಮುಖವುಳ್ಳವನೆ ; ವಿದೇಹಸುತಾ ರಮಣ–ವೈದೇಹಿಯ ಪತಿಯೆ ; ಪಂಕಜನಾಭ, ಶೌರಿ, ಮಮ–ನನಗೆ ; ಕುಶಲಂ ಕುರು–ಕ್ಷೇಮವನ್ನು ಉಂಟುಮಾಡು.

ತಾತ್ಪರ್ಯ : ಮನುವಂಶಕ್ಕೆ ಶ್ರೇಷ್ಠನೂ, ಮನೋಹರನೂ, ಶರಚಾಪಗಳನ್ನು ಹಿಡಿದವನೂ, ಮುನಿಜನರ ಮನಸ್ಸೆಂಬ ತಾವರೆಗಳ ನಡುವೆ ಸಂಚರಿಸುವ ಹಂಸದಂತಹವನೂ ಆದ ಶ್ರೀ ರಾಮಚಂದ್ರನೇ, ಶೌರಿಯೇ ನನ್ನನ್ನು ರಕ್ಷಿಸು.

85. ರಾಗ : ವಸಂತ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಪರಮಪುರುಷ ಜಗದೀಶ್ವರ ಜಯಜಯ
ಪಂಕಜನಾಭ ಮುರಾರೇ ||

ಅನುಪಲ್ಲವಿ : ಸರಸೀರುಹಭವ ಶಂಕರ ವಾಸವ
ಸನ್ನುತ ಸುಚರಿತ ಶೌರೇ

ಚರಣ : ಕಲಿತ ದರಹಸಿತ ಕಮ್ರಮುಖಾಂಬುಜ
ಖಗವರವಾಹನ ದೇವ
ಖಲದನು ಜಾಂತಕ ನಿಜಪದ ಸೇವಕ
ಕಲುಷಮಯ ವನದಾವ

2. ಭುಜಗಾಧಿಪ ಶಯ ಪುಟಮಯ ವಿಮಲ
ಭೂಷಣಭೂಷಿತ ದೇಹ
ಭುಜಯುಗ ಧೃತ ಶಂಖ ರಥ ಚರಣ
ಬೋಧಾಕರ ಧುತಮೋಹ ||

3. ಚಾರು ವಿಧೃತ ವನಮಾಲಾ ಕೌಸ್ತುಭ
ಸಾತ್ವತ ಕಮಲ ದಿನೇಶ
ಸಾರಂಗಾಧಿಪ ತಾಪ ವಿಮೋಚನ
ಸ್ಯಾನಂದೂರ ಪುರೇಶ ||

ಅರ್ಥ : ಪರಮಪುರುಷ, ಜಗದೀಶ್ವರ, ಪಂಕಜನಾಭ, ಮುರಾರೇ, ಜಯಜಯ, ಸರಸೀರುಹಭವ_ಬ್ರಹ್ಮ ; ಶಂಕರ, ವಾಸವ_ಇಂದ್ರ ಮೊದಲಾದವರಿಂದ ; ಸನ್ನುತ–ನುತಿಗೊಂಡ ; ಸುಚರಿತ_ಸಚ್ಚರಿತ್ರನೆ, ಶೌರಿಯೆ ನಿನಗೆ ಜಯವಾಗಲಿ, ಕಲಿತದರಹಸಿತ–ಮಂದಹಾಸವನ್ನು ಸೂಸುವವನೆ; ಕಮ್ರಮುಖಾಂಬುಜ_ಮನೋಹರವಾದ ಮೊಗದಾವರೆಯುಳ್ಳವನೆ; ಖಗವರವಾಹನ ದೇವ–ಗರುಡವಾಹನನಾದ ದೇವನೆ; ಖಲದನುಜಾಂತಕ–ದುಷ್ಟ ರಾಕ್ಷಸರನ್ನು ನಾಶಮಾಡುವವನೆ; ನಿಜಪದ ಸೇವಕ_ನಿನ್ನ ಪಾದಕಮಲಗಳ ಸೇವಕರಾದವರ ; ಕಲುಷಮಯವನ_ಪಾಪಗಳೆಂಬ ಕಾಡಿಗೆ; ದಾವ–ಬೆಂಕಿಯಾಗಿರುವವನೆ; ಭುಜಗಾಧಿಪಶಯ–ಸರ್ಪರಾಜನ ಮೇಲೆ ಮಲಗಿದ; ಪುರಟಮಯ ವಿಮಲಭೂಷಣ–ಚಿನ್ನದ ಆಭರಣಗಳಿಂದ; ಭೂಷಿತ ದೇಹ–ಅಲಂಕೃತವಾದ ದೇಹವುಳ್ಳವನೆ ; ಭುಜಯುಗ_ಎರಡೂ ಕೈಗಳಲ್ಲಿ ; ಧೃತ–ಧರಿಸಿದ; ಶಂಖ ರಥಚರಣ–ಶಂಖ ಹಾಗೂ ಚಕ್ರಗಳುಳ್ಳವನೆ; ಬೋಧಾಕರ_ಜ್ಞಾನನಿಧಿಯೆ; ಧುತಮೋಹ–ಮೋಹವನ್ನೆಲ್ಲ ತ್ಯಜಿಸಿದನನೆ; ಚಾರುವಿಧೃತ–ಮನೋಹರವಾಗಿ ಧರಿಸಿದ; ವನಮಾಲಾ ಕೌಸ್ತುಭ–ತುಳಸಿಯ ಮಾಲೆ ಹಾಗೂ ಕೌಸ್ತುಭ ರತ್ನಗಳುಳ್ಳವನೆ; ಸಾತ್ವತ ಕಮಲದಿನೇಶ_ಸತ್ವಯುಕ್ತರೆಂಬ ತಾವರೆಗಳಿಗೆ ಸೂರ್ಯನಂತೆ ಸಂತೋಷವುಂಟುಮಾಡುವವನೆ; ಸಾರಂಗಾಧಿಪ–ಆನೆಯ; ತಾಪ ವಿಮೋಚನ_ಸಂಕಟವನ್ನು ಪರಿಹರಿಸಿದವನೆ [ಗಜೇಂದ್ರಮೋಕ್ಷ] ; ಸ್ಯಾನಂದೂರ ಪುರೇಶ–ತಿರುವನಂತಪುರದಲ್ಲಿ ನೆಲಸಿದ ಶೌರಿಯೆ, ನಿನಗೆ ಜಯವಾಗಲಿ.

86. ರಾಗ : ವಸಂತ ಆದಿತಾಳ ತ್ಯಾಗರಾಜರು

ಪಲ್ಲವಿ : ಎಟ್ಲ ದೊರಕಿತಿವೊ ರಾಮು ! ತನ

ಅನುಪಲ್ಲವಿ : ಚುಟ್ಲ ರಗಡಿಯ ದೋವಕು ನಾದು
ಪಟ್ಲಾಭಿಮಾನಮು ಲೇಕುಂಡಗ ||

ಚರಣ : ಪಾದಮಹಿಮೋ ಪೆದ್ದಲ ಆಶೀರ್ವಾದಬಲಮೊ ಸುಸ್ವರಪು
ನಾದ ಫಲಮೊ ತ್ಯಾಗರಾಜಖೇದ ಹರ ! ಶ್ರೀನಾಥ ತನ ||

ಅರ್ಥ : ಎಟ್ಲ_ಹೇಗೆ : ದೊರಕಿತಿವೊ–ದೊರಕಿದೆಯೋ ; ರಾಮು ! ತನಕು_ತನಗೆ ; ಚುಟ್ಲ ಅರಗಡಿಯ ದೋವಕು_ಸುತ್ತಲೂ ಅರೆಗಳಿಗೆಯಾದರೂ ದಾರಿ ಕಾಣದಿರುವಾಗ ; ನಾದುಪಟ್ಲ_ನನ್ನ ಮೇಲೆ; ಅಭಿಮಾನಮು ಲೇಕುಂಡಗ_ಯಾರಿಗೂ ಅಭಿಮಾನವಿಲ್ಲದಿರುವಾಗ ; ನೀನು ಹೇಗೆ ದೊರಕಿದೆಯಯ್ಯ ! ಪಾದಮಹಿಮೋ–ನಿನ್ನ ಪಾದ ಮಹಿಮೆಯೋ ; ಪೆದ್ದಲ_ಹಿರಿಯರ ; ಆಶೀರ್ವಾದ ಬಲಮೋ–ಆಶೀರ್ವಾದದ ಬಲವೋ ; ಸುಸ್ವರಪು–ಮಧುರವಾದ ; ನಾದಫಲಮೋ_ನಾದದ ಫಲವೋ ; ತ್ಯಾಗರಾಜನ ಖೇದವನ್ನು ಪರಿಹರಿಸಿದ ಶ್ರೀನಾಥನೇ, ತನ–ನನಗೆ ; ಹೇಗೆ ದೊರಕಿದೆಯಯ್ಯ !

ತಾತ್ಪರ್ಯ : ನನಗೆ ಸುತ್ತಲೂ ಎಲ್ಲೆಲ್ಲೂ ದಾರಿ ಕಾಣುತ್ತಿಲ್ಲ, ನನ್ನ ಮೇಲೆ ಯಾರಿಗೂ ಅಭಿಮಾನವಿಲ್ಲ, ಆದರೂ ನೀನು ನನಗೆ ಹೇಗೆ ದೊರಕಿದೆಯೋ ಅದೀಗ ಆಶ್ಚರ್ಯ ! ಇದು ನಿನ್ನ ಪಾದ ಮಹಿಮೆಯಿರಬೇಕು ; ಹಿರಿಯರ ಆಶೀರ್ವಾದ ಬಲವಿರಬೇಕು ; ಅಥವಾ ಮಧುರನಾದ ಗಾನದ ಬಲವಿರಬೇಕು !

**87.** ರಾಗ : ವಸಂತ ಖಂಡಜಾತಿ ಏಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಹರಿಹರಪುತ್ರಂ ಶಾಸ್ತಾರಂ–ಸದಾ ಭಜೇಹಂ ಮಾಯಾ ಕಾರ್ಯಂ ತ್ಯಜೇಹಂ ||

ಅನುಪಲ್ಲವಿ : ಮುರಹರಾದಿ ಮೋಹಿತ ಶೌರಿಗಿರಿ ವಿಹಾರಂ–ಮುರಳೀ ಭೇರಿ ವಾದ್ಯಾದಿ ಪ್ರಿಯಕರಂ ||

ಮಧ್ಯಮಕಾಲ ಸಾಹಿತ್ಯ : ಪ್ರಾರ್ಥಿತ ಪುತ್ರಪ್ರದಂ ವಸಂತನತ ಬೃಂದಂ
ದೀರ್ಘಾಯುಪ್ರದಂ ದೀನ ಜನಪ್ರದಂ ||

ಚರಣ : ಫಾಲ್ಗುನಮಾಸ ಪೌರ್ಣಿಮಾವತಾರಂ
ಪಾಂಡ್ಯ ಕೇರಳಾದಿ ದೇಶ ಪ್ರಭಾಕರಂ
ಪುಷ್ಪಶರೇಕ್ಷು ಕಾರ್ಮುಕ ಧರಂ
ಫುಲ್ಲ ಕಲ್ಹಾರ ದಂಡಧರ ಕರಂ ||

ಮಧ್ಯಮಕಾಲ ಸಾಹಿತ್ಯ : ಕಲಿಯುಗ ಪ್ರತ್ಯಕ್ಷಂ ಗರ್ವಿತ ದಕ್ಷ ಶಿಕ್ಷಂ
ವರಗುರು ಗುಹಾಂತರಂಗಂ ರಥಗಜ ತುರಂಗಂ ||

ಅರ್ಥ : ಹರಿಹರಪುತ್ರಂ–ಹರಿಹರರ ಪುತ್ರನಾದ ; ಶಾಸ್ತಾರಂ–ಶಾಸ್ತಾರನನ್ನು [ಶಾಸ್ತಾರನೆನ್ನುವುದು ಸ್ವಾಮಿ ಅಯ್ಯಪ್ಪನ ಹೆಸರು] ; ಸದಾ ಭಜೇಹಂ–ಸದಾ ಭಜಿಸುತ್ತೇನೆ ; ಮಾಯಾ ಕಾರ್ಯಂ –ಮಾಯೆಯಿಂದ ಕೂಡಿದ ಕೃತ್ಯಗಳನ್ನು ; ತ್ಯಜೇಹಂ–ಬಿಟ್ಟುಬಿಡುತ್ತೇನೆ ; ಮುರಹರಾದಿ ಮೋಹಿತ–ಮುರಹರನಾದ ವಿಷ್ಣುವೇ ಮೊದಲಾದವರು ಮೋಹಿಸಿದ ; ಶೌರಿಗಿರಿ ವಿಹಾರಂ– ಶೌರಿಗಿರಿಯಲ್ಲಿ [ಶಬರಿಮಲೆ ?] ವಿಹರಿಸುವವನೂ ; ಮುರಳೀ ಭೇರಿವಾದ್ಯಾದಿ ಪ್ರಿಯಕರಂ– ಕೊಳಲು ಭೇರಿ ಮೊದಲಾದ ವಾದ್ಯಗಳು ಪ್ರಿಯವಾಗಿರುವವನೂ ; ಪ್ರಾರ್ಥಿತ ಪುತ್ರಪ್ರದಂ– ಬೇಡಿದವರಿಗೆ ಪುತ್ರವರನನ್ನು ನೀಡುವವನೂ ; ವಸಂತನತ ಬೃಂದಂ–ವಸಂತನೇ ಮೊದಲಾದವರು ನಮಿಸಿದವನೂ ; ದೀರ್ಘಾಯುಸ್ಸನ್ನು ಕೊಡುವವನೂ ; ದೀನಜನ ಪ್ರದಂ–ದೀನರಿಗೆ ಅಪೇಕ್ಷೆಯನ್ನು ಪೂರೈಸುವವನೂ ಆದ ಶಾಸ್ತಾರನನ್ನು ಭಜಿಸುತ್ತೇನೆ ;

ಫಾಲ್ಗುನಮಾಸ ಪೌರ್ಣಿಮಾವತಾರಂ–ಫಾಲ್ಗುಣ ಪೌರ್ಣಿಮೆಯಂದು ಹುಟ್ಟಿದವನೂ ; ಪಾಂಡ್ಯ ಕೇರಳಾದಿ ದೇಶ ಪ್ರಭಾಕರಂ–ಪಾಂಡ್ಯ ಕೇರಳ ದೇಶಗಳಲ್ಲಿ ಪ್ರಕಾಶಿಸುವವನೂ; ಪುಷ್ಪಶರ ಇಕ್ಷುಕಾರ್ಮುಕ ಧರಂ–ಹೂವಿನ ಬಾಣ, ಕಬ್ಬಿನ ಬಿಲ್ಲುಗಳನ್ನು ಧರಿಸಿದವನೂ ; ಫುಲ್ಲ–ಅರಳಿದ ; ಕಲ್ಹಾರ ದಂಡಧರ ಕರಂ–ಕಲ್ಹಾರ ಪುಷ್ಪವನ್ನೂ, ದಂಡವನ್ನು ಹಿಡಿದವನೂ ಕಲಿಯುಗದಲ್ಲಿ ಪ್ರತ್ಯಕ್ಷನಾದವನೂ, ಗರ್ವಿತರಾದವರನ್ನು ಶಿಕ್ಷಿಸುವುದರಲ್ಲಿ ದಕ್ಷನೂ ; ಗುರುಗುಹನ ಅಂತರಂಗದಲ್ಲಿ ನೆಲೆಸಿದವನೂ, ರಥಗಜ ತುರಗ ಸಹಿತನೂ ಆದ ಶಾಸ್ತಾರನನ್ನು ಭಜಿಸುತ್ತೇನೆ.

88. ರಾಗ : ವಾಚಸ್ಪತಿ ಆದಿತಾಳ ಸ್ವಾತಿ ತಿರುನಾಳ್

ಪಲ್ಲವಿ : ಪಾಹಿಜಗಜ್ಜನನೀ ಸಂತತಂ ಪಂಕೇರುಹಾಸನ ಜಾಯೇ ||

ಅನುಪಲ್ಲವಿ : ಮೋಹನತರ ಗಾತ್ರಿ ಮುನಿಸಮುದಯ ಗೇಯೇ
ಮಹನೀಯ ಸುಚರಿತೇ ಮಾನಿತ ಗುಣವಾಸೇ ||

ಚರಣ ; ವೀಣಾವಾದನ ಲೋಲುಪ ವಿಲಸಿತಾಂಗುಲಿ ಜಾಲೇ
ಪಾಣಿರಾಜಿತ ಚಾರು ಪುಸ್ತಕ ಜಪವಾಟಿಕೇ
ಷಾಣೋಲ್ಲೀಢ ವಿಭೂಷಣಶಾಲಿನಿ ಮಧುರ ಪಿಕ
ವಾಣಿ ಮಮ ಕುಶಲಂ ವಿರಚಯ ನಿರಪಾಯೇ ||

2. ಚರಣವಿನತಜನ ಸಕಲವಿದ್ಯಾದಾನ
ನಿರತ ಭಾಸಮಾನ ನಿಜಾಪಾಂಗ ಲಸಿತೇ
ಕರಿಕುಂಭ ಮನೋಹರ ಕುಚ ಕುಟ್ಮಲ ರಾಜಿತೇ
ಪುರುಹೂತ ಮುಖಸುರಪೂಜಿತ ಪದಯುಗಳೇ ||

3. ಸೋಮಬಿಂಬ ಮದಾಪಹ ಸುಮುಖಿ ಪರಿಲಸ
ಮಮ ರಸನಾಗ್ರೇ ಸದಾ ಮುಕುರ ಶಕಲ ದಂತಿ
ಶಮಲಜಾತಂ ವಾರಯ ಸಾಧುಜನ ಸೇವಿತೇ
ಕಮಲನಾಭ ಸೇವಕ ಕಾಮದಾನ ನಿರತೇ ||

ಅರ್ಥ : ಪಂಕೇರುಹಾಸನ ಜಾಯೇ–ಬ್ರಹ್ಮಪತ್ನಿಯೆ ; ಜಗಜ್ಜನನಿ, ಸಂತತಂ ಪಾಹಿ–ಯಾವಾಗಲೂ ನನ್ನನ್ನು ಕಾಪಾಡು ; ಮೋಹನತರಗಾತ್ರಿ-ಮನೋಹರವಾದ ದೇಹವುಳ್ಳವಳು ; ಮುನಿಸಮುದಯಗೇಯೇ–ಮುನಿಗಳ ಸಮೂಹದಿಂದ ಹಾಡಲ್ಪಡುವವಳು ; ಮಹನೀಯ ಸುಚರಿತೆ–ಪ್ರಶಂಸಾಪಾತ್ರವಾದ ಶ್ರೇಷ್ಠ ಚಾರಿತ್ರ್ಯವುಳ್ಳವಳು ; ಮಾನಿತ ಗುಣವಾಸೇ–ಮೆಚ್ಚಿಕೆಗೆ ತಕ್ಕ ಅನೇಕ ಗುಣಗಳುಳ್ಳವಳು ; ವೀಣಾವಾದನ ಲೋಲುಪ–ವೀಣೆ ನುಡಿಸುವುದರಲ್ಲಿ ಆಸಕ್ತವಾದ; ವಿಲಸಿತಾಂಗುಲಿ ಜಾಲೇ–ಶೋಭಿಸುವ ಕೈಬೆರಳುಗಳುಳ್ಳವಳು ; ಪಾಣಿರಾಜಿತ–ಕೈಗಳಲ್ಲಿ ಶೋಭಿಸುವ ; ಚಾರುಪುಸ್ತಕ–ಮನೋಹರವಾದ ಪುಸ್ತಕ ; ಜಪವಾಟಿಕೇ–ಜಪಮಾಲೆಗಳುಳ್ಳವಳು ; ಷಾಣೋಲ್ಲೀಢ–ಸಾಣೆ ಹಿಡಿದಂತೆ ; ವಿಭೂಷಣಶಾಲಿನಿ–ಹೊಳೆಯುವ ಆಭರಣಗಳನ್ನು ಧರಿಸಿದವಳು ; ಇಂತಹ, ನಿರಪಾಯೇ–ಯಾವ ಅಪಾಯವನ್ನೂ ಮಾಡದ; ಮಧುರಪಿಕವಾಣಿ-ಮಧುರವಾದ ಕೋಗಿಲೆಯಂತೆ ಮಾತಾಡುವ, ಶಾರದೆಯೆ; ಮಮಕುಶಲಂವಿರಚಯ-ನನಗೆ ಕ್ಷೇಮವನ್ನುಂಟುಮಾಡು ; ಚರಣವಿನತಜನ–ಪಾದಗಳಿಗೆ ನಮಿಸಿದ ಜನರಿಗೆ ; ಸಕಲ ವಿದ್ಯಾದಾನ ನಿರತ–ಸಕಲ ವಿದ್ಯೆಗಳನ್ನು ದಾನಮಾಡುವುದರಲ್ಲಿ ನಿರತಳಾದವಳು ; ಭಾಸಮಾನನಿಜಾಪಾಂಗ ಲಸಿತೇ–ಹೊಳೆಹೊಳೆಯುವ ಕಡೆಗಣ್ಣಿನೋಟವುಳ್ಳವಳು ; ಕರಿಕುಂಭ ಮನೋಹರ–ಆನೆಯ ಕುಂಭಸ್ಥಲದಂತೆ ಮನೋಹರವಾದ ; ಕುಚಕುಟ್ಮಲ ರಾಜತೇ–ಮೊಗ್ಗಿನಂತಹ ಸ್ತನಗಳುಳ್ಳವಳೇ ; ಪುರುಹೂತ ಮುಖ–ಇಂದ್ರನೇ ಮೊದಲಾದ ; ಸುರಪೂಜಿತ ಪದಯುಗಳೇ–ದೇವತೆಗಳು ಪೂಜಿಸಿದ ಪಾದಗಳುಳ್ಳವಳೆ; ಸೋಮಬಿಂಬ ಮದಾಪಹ–ಚಂದ್ರಬಿಂಬದ ಗರ್ವವನ್ನು ಅಳಿಸುವ; ಸುಮುಖಿ–ಸುಂದರವಾದ ಮುಖವುಳ್ಳವಳೆ ; ಮುಕುರಶಕಲದಂತಿ–ಕನ್ನಡಿಯ ಚೂರಿನಂತೆ ಶುಭ್ರವಾದ ಹಲ್ಲುಗಳುಳ್ಳವಳೆ ; ಮಮ ರಸನಾಗ್ರೇ–ನನ್ನ ನಾಲಗೆಯ ತುದಿಯಲ್ಲಿ ; ಸದಾ ಪರಿಲಸ–

ಸದಾ ವಿಹರಿಸುತ್ತಿರು ; ಸಾಧುಜನ ಸೇವಿತೇ–ಸಜ್ಜನರಿಂದ ಸೇವಿಸಲ್ಪಡುವವಳೇ ; ಕಮಲನಾಭ ಸೇವಕ–ಕಮಲನಾಭನ ಸೇವಕರ ; ಕಾಮದಾನ ನಿರತೇ–ಅಪೇಕ್ಷೆಗಳನ್ನು ಪೂರೈಸುವುದರಲ್ಲಿ ನಿರತಳಾದವಳೇ; ಶಮಲ ಜಾತಂ–ಪಾಪ ಸಮೂಹವನ್ನು ; ವಾರಯ–ಪರಿಹರಿಸು.

89. ರಾಗ : ವಾಚಸ್ಪತಿ ಆದಿತಾಳ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ಎನ್ನಡು ನೀ ಕೃಪಗಲ್ಗುನೋ
ಇನಕುಲತಿಲಕ ನನ್ನು ರಕ್ಷಿಂಚುಟಕು ||

ಅನುಪಲ್ಲವಿ : ಪನ್ನಗ ಶಯನ ಪತಿತಪಾವನ
ಭಾನುಕುಲದೀಪ ಭವನಾಶ ಚಾಪ ||

ಚರಣ : ಕನ್ನತಂಡ್ರಿ ನಾಪೈ ಕರುಣಿಂಚುಮನಿ
ಕನ್ನವಾರಿನಿನೆ ಆಶ್ರಯಿಂಚಿತಿನ
ನಿನ್ನು ನೆರೆ ನಮ್ಮಿಯುನ್ನವಾಡ ನೀ ತೋ
ವಿನ್ನವಿಂಚುಕೊಂಟಿ ವೆಂಕಟೇಶ ನಾದು ||

ಅರ್ಥ : ಎನ್ನಡು–ಎಂದಿಗೆ; ನೀಕೃಪ-ನಿನ್ನ ಕೃಪೆಯು ; ಗಲ್ಗುನೋ–ದೊರಕುವುದೋ ; ಇನಕುಲತಿಲಕ–ಸೂರ್ಯವಂಶಕ್ಕೆ ಶ್ರೇಷ್ಠನಾಗಿರುವವನೆ; ನನ್ನು ರಕ್ಷಿಂಚುಟಕು–ನನ್ನನ್ನು ಕಾಪಾಡಲು; ಪನ್ನಗ ಶಯನ, ಪತಿತಪಾವನ, ಭಾನುಕುಲದೀಪ–ಸೂರ್ಯವಂಶದಲ್ಲಿ ದೀಪದಂತೆ ಬೆಳಗುವವನೆ; ಭವನಾಶ ಚಾಪ–ಜನ್ಮಾಂತರಗಳನ್ನು ನಾಶಮಾಡುವ ; ಬಿಲ್ಲು ಹಿಡಿದವನೆ; ಕನ್ನತಂಡ್ರಿ–ನೀನೇ ತಾಯಿತಂದೆ; ನಾಪೈ–ನನ್ನಮೇಲೆ; ಕರುಣಿಂಚುಮು ಅನಿ–ಕರುಣಿಸಿರಿ ಎಂದು ; ಕನ್ನವಾರಿನಿನೆ–ಇತರರನ್ನು ; ಆಶ್ರಯಿಂಚಿತಿನ–ಆಶ್ರಯಿಸಿದೆನೆ ; ನಿನ್ನು–ನಿನ್ನನ್ನೆ ; ನೆರೆನಮ್ಮಿಯುನ್ನವಾಡ–ದೃಢವಾಗಿ ನಂಬಿರುವವನು ; ವೆಂಕಟೇಶ, ನಾದು ವಿನ್ನವಿಂಚುಕೊಂಟಿ–ಬಿನ್ನವಿಸಿಕೊಳ್ಳುತ್ತಿದ್ದೇನೆ.

ತಾತ್ಪರ್ಯ : ನಿನ್ನ ಕೃಪೆಯು ಎಂದಿಗೆ ದೊರಕುವುದೊ ? ನೀವೇ ನನ್ನ ತಾಯಿತಂದೆ, ನನ್ನ ಮೇಲೆ ಕರುಣೆ ತೋರಿಸಿರಿ ಎಂದು ಅನ್ಯರನ್ನು ನಾನು ಬೇಡಿದ್ದೇನೆಯೆ? ಆಶ್ರಯಿಸಿದ್ದೇನೆಯೆ? ನಾನು ನಂಬಿರುವುದು ನಿನ್ನನ್ನು, ನಿನ್ನೊಬ್ಬನನ್ನೇ. ನನ್ನ ಬಿನ್ನಹವನ್ನು ಆಲಿಸು, ಕಾಪಾಡು.

90. ರಾಗ : ವಾಚಸ್ಪತಿ ಆದಿತಾಳ ರಾಮತ್ನರಂ

ಪಲ್ಲವಿ : ಪಾಮರಜನಪಾಲಿನಿ ಜನನೀ
ಶ್ರೀಮಹಾದೇವ ಮಹಿತೇ ತಾರಕ ಶುಭ ಚರಿತೇ ||

ಅನುಪಲ್ಲವಿ : ವಿಮಲಹೃದಯೆ ಧರ್ಮಸಂವರ್ಧನಿ ಧನಿನೀ
ಶ್ಯಾಮಲೆ ಗೌರಿ ಶ್ರೀಕರಿ ದುರಿತ ಭಂಜನಿ ನಿರಂಜನಿ ||

ಚರಣ : ಪದ್ಮನಾಭ ಸೋದರಿ ಪಾಲಯ ಶಂಕರಿ
ತಾಮರಸಪದಯುಗಳೆ ಜಗನ್ಮೋಹಿನಿ
ಸಾಧುಜನವಿನುತೆ ಸಂಗೀತಪ್ರಿಯೆ
ಸದಾ ಭೂಮಿಸುತಾ ರಾಮನುತೆ ||

ಅರ್ಥ : ಪಾಮರಜನ ಪಾಲಿನಿ–ಸಾಮಾನ್ಯ ಜನರನ್ನು ಪಾಲಿಸುವ ; ಜನನೀ–ತಾಯಿ ; ಶ್ರೀಮಹಾ ದೇವಮಹಿತೇ–ಪರಮೇಶ್ವರನ ಮಡದಿಯೇ ; ತಾರಕ–ಉದ್ಧಾರಕವಾದ ; ಶುಭಚರಿತೇ–ಶುಭ ಚರಿತ್ರಳೇ ; ವಿಮಲ ಹೃದಯೆ–ಪರಿಶುದ್ಧವಾದ ಹೃದಯವುಳ್ಳವಳೆ ; ಧರ್ಮಸಂವರ್ಧನಿ–ಧರ್ಮ ವನ್ನು ವರ್ಧಿಸುವವಳೆ : ಧನಿನೀ–ಸಂಪದ್ಯುಕ್ತಳಾದವಳೆ ; ಶ್ಯಾಮಲೆ, ಗೌರಿ, ಶ್ರೀಕರಿ ; ದುರಿತ ಭಂಜಿನಿ–ಪಾಪಗಳನ್ನು ನಾಶಮಾಡುವವಳೆ, ನಿರಂಜನಿ ; ಪದ್ಮನಾಭಸೋದರಿ, ಶಂಕರಿ, ಪಾಲಯ–ಕಾಪಾಡು ; ತಾಮರಸಪದಯುಗಳೆ–ತಾವರೆಯಂತಹ ಪಾದಗಳುಳ್ಳವಳೆ ; ಜಗ ನ್ಮೋಹಿನಿ ; ಸಾಧುಜನವಿನುತೆ–ಸಜ್ಜನರಿಂದ ಸ್ತೋತ್ರಗೊಂಡವಳೆ ; ಸಂಗೀತಪ್ರಿಯೆ ; ಸದಾ–ಯಾವಾಗಲೂ ಸೀತಾರಾಮನಿಂದ ನುತಳಾದವಳೆ, ನನ್ನನ್ನು ಕಾಪಾಡು.

91. ರಾಗ : ಆನಂದಭೈರವಿ ಆದಿತಾಳ ಮಾತೃಭೂತಯ್ಯ

ಪಲ್ಲವಿ : ನೀ ಮದಿಚಲ್ಲಗ ನನ್ನು ಬ್ರೋಚುಟಕೇಮಮ್ಮಾ ಶಂಕರಿ
ಅನುಪಲ್ಲವಿ : ಸೋಮಶೇಖರುನಿ ರಾಣಿವೈನ–ಸುದತಿ ಶ್ರೀ ಕುಂತಲಾಂಬ ಮಾಯಮ್ಮ ||
ಚರಣ ; ತಲ್ಲಿ ತಂಡ್ರಿ ಗುರು ದೈವಮು ನೀವನಿ – ಯೆಲ್ಲಪುಡು ನೀಪದ ಭಕ್ತಿಯು ನಾ
ಯುಲ್ಲಮುನನು ಮರವಕ ಭಜಿಂಚೆದ – ಓಂಕಾರಿ ಶ್ರೀ ತ್ರಿಪುರಸುಂದರಿ ||

ಅರ್ಥ : ಶಂಕರಿ–ಶಂಕರಿಯೆ ; ನೀಮದಿ–ನಿನ್ನ ಮನಸ್ಸಿನಲ್ಲಿ ; ಚಲ್ಲಗ–ವಿಶ್ವಾಸದಿಂದ ; ನನ್ನು–ನನ್ನನ್ನು ; ಬ್ರೋಚುಟಕು–ಕಾಪಾಡಲು ; ಏಮಮ್ಮ–ಏನಮ್ಮ ? ಸೋಮಶೇಖರುನಿ–ಸೋಮಶೇಖ ರನ ; ರಾಣಿವೈನ–ರಾಣಿಯಾದ ; ಸುದತಿ, ಶ್ರೀಕುಂತಲಾಂಬ, ಮಾಯಮ್ಮ–ನನ್ನ ತಾಯಿಯೆ ; ತಲ್ಲಿ ತಂಡ್ರಿ ಗುರು ದೈವಮು ನೀವನಿ–ನೀನೇ ತಾಯಿ ತಂದೆ ಎಂದು ; ಯೆಲ್ಲ ಪುಡು–ಯಾವಾಗಲೂ ; ನೀ ಪದ ಭಕ್ತಿಯು–ನಿನ್ನ ಪಾದಗಳಲ್ಲಿ ಭಕ್ತಿಯಿಟ್ಟು ; ನಾಯುಲ್ಲ ಮುನನು–ನನ್ನ ಮನಸ್ಸಿನಲ್ಲಿ ; ಮರವಕ–ಮರೆಯದೆ ; ಭಜಿಂಚೆದ–ಭಜಿಸುತ್ತಿದ್ದೇನೆ, ಓಂಕಾರಿಯೆ, ತ್ರಿಪುರ ಸುಂದರಿಯೆ.

ತಾತ್ಪರ್ಯ : ಮನಸ್ಸಿನಲ್ಲಿ ನೀನೇ ನನ್ನ ತಾಯಿ, ತಂದೆ, ಗುರು, ದೈವ ಎಲ್ಲವೂ ಎಂಬುದಾಗಿ ಭಾವಿಸಿ ಕೊಂಡು ಸದಾ ನಿನ್ನ ಪಾದಕಮಲಗಳಲ್ಲಿ ಭಕ್ತಿಯಿಟ್ಟುಕೊಂಡು ಭಜಿಸುತ್ತಿದ್ದೇನೆ. ಶಂಕ ರಿಯೆ, ತ್ರಿಪುರಸುಂದರಿಯೆ ನನ್ನನ್ನು ಕಾಪಾಡು ತಾಯಿ.

92. ರಾಗ : ಆನಂದಭೈರವಿ ರೂಪಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ತ್ಯಾಗರಾಜಯೋಗ ವೈಭವಂ ಸದಾಶಿವಂ–ಸದಾಶ್ರಯಾಮಿ
ಅನುಪಲ್ಲವಿ : ತ್ಯಾಗರಾಜ ಯೋಗ ವೈಭವಂ ಅಗರಾಜಯೋಗ ವೈಭವಂ–ರಾಜ
ಯೋಗ ವೈಭವಂ–ಯೋಗ ವೈಭವಂ–ವೈಭವಂ–ಭವಂ-ವಂ ||
ಚರಣ : ನಾಗರಾಜ ವಿನುತಪದಂ ನಾದಬಿಂದು ಕಳಾಸ್ಪದಂ
ಯೋಗರೂಢ ನಾಮರೂಪ ವಿಶ್ವ ಸೃಷ್ಟ್ಯಾದಿಕರಣಂ
ಯುಗ ಪರಿವೃತ್ಯಬ್ದ ಮಾಸ ದಿನ ಘಟಿಕಾದ್ಯಾವರಣಂ
ಶ್ರೀ ಗುರುಗುಹಗುರುಂ ಸಚ್ಚಿದಾನಂದ ಭೈರವೀಶಂ
ಶಿವಶಕ್ತ್ಯಾದಿ ಸಕಲ ತತ್ವ ಸ್ವರೂಪ ಪ್ರಕಾಶಂ

ಶಂ ಪ್ರಕಾಶಂ-ಸ್ವರೂಪ ಪ್ರಕಾಶಂ-ತತ್ವ ಸ್ವರೂಪ ಪ್ರಕಾಶಂ
ಸಕಲ ತತ್ವಸ್ವರೂಪ ಪ್ರಕಾಶಂ-ಶಿವಶಕ್ತ್ಯಾದಿ ಸಕಲ ತತ್ವಸ್ವರೂಪ ಪ್ರಕಾಶಂ ||

ಅರ್ಥ : ತ್ಯಾಗರಾಜಯೋಗ ವೈಭವಂ-ಅತ್ಯಂತ ಶ್ರೇಷ್ಠ ತ್ಯಾಗಿಯಾಗಿ ವೈಭವವನ್ನು ಮೆರೆಯುತ್ತಿರುವ ; ಸದಾಶಿವಂ-ಸದಾಶಿವನನ್ನು ; ಸದಾ-ಯಾವಾಗಲೂ ; ಆಶ್ರಯಾಮಿ-ಆಶ್ರಯಿಸುತ್ತೇನೆ ; ತ್ಯಾಗರಾಜಯೋಗ ವೈಭವಂ-ತ್ಯಾಗಿ ಶ್ರೇಷ್ಠನೆಂಬ ವೈಭವವುಳ್ಳವನು ; ಅಗರಾಜಯೋಗ ವೈಭವಂ-ನಾಗರಾಜನ ವೈಭವವುಳ್ಳವನು; ರಾಜಯೋಗ ವೈಭವಂ-ಸಕಲಕ್ಕೂ ಚಕ್ರವರ್ತಿಯಾದ ವೈಭವವುಳ್ಳವನು ; ಯೋಗ ವೈಭವಂ-ಯೋಗವನ್ನೇ ವೈಭವವಾಗಿ ಉಳ್ಳವನು ; ವೈಭವಂ-ವೈಭವವನ್ನುಳ್ಳವನು ; ಭವಂ-ಈಶ್ವರನನ್ನು ; ವಂ-ಸ್ಥಿರವಾಗಿರುವ ಶಿವನನ್ನು; ಸದಾ ಆಶ್ರಯಿಸುತ್ತೇನೆ.

ನಾಗರಾಜವಿನುತಪದಂ-ನಾಗರಾಜನಿಂದ ಸ್ತುತಿಸಲ್ಪಟ್ಟ ಪಾದಗಳುಳ್ಳವನು ; ನಾದ ಬಿಂದು ಕಳಾಸ್ಪದನು ; ಯೋಗಿರಾಜ-ಶ್ರೇಷ್ಠರಾದ ಯೋಗಿಗಳಿಗೆ ; ವಿದಿತಪದಂ-ಅರಿವಿಗೆ ಬಂದ ಪಾದಗಳುಳ್ಳವನು ; ಯುಗ ಸದ್ಯೋಗ ಮೋಕ್ಷಪ್ರದಂ-ಮೋಕ್ಷವನ್ನು ಈಯುವವನು ; ಯೋಗ ರೂಢ-ಯೋಗದಲ್ಲಿ ಸ್ಥಿತವಾಗಿ ; ನಾಮರೂಪ ವಿಶ್ವಸೃಷ್ಟ್ಯಾದಿಕರಣಂ-ನಾಮರೂಪಾತ್ಮಕವಾದ ವಿಶ್ವಸೃಷ್ಟಿಯಲ್ಲಿ ತೊಡಗಿರುವವನು ; ಯುಗ ಪರಿವೃತ್-ಯುಗಗಳಿಂದ ಪರಿವೃತವಾಗಿ ; ಅಬ್ದ ಮಾಸ ದಿನ ಘಟಿಕಾದ್ಯಾವರಣಂ-ವರ್ಷ ತಿಂಗಳು ದಿನ ಗಳಿಗೆಗಳ ಆವರಣವುಳ್ಳವನು ; ಶ್ರೀಗುರು ಗುಹನ ಗುರುವು ; ಸಚ್ಚಿದಾನಂದನು ; ಆನಂದ ಭೈರವಿಗೆ ಒಡೆಯನು (ರಾಗ ಮುದ್ರೆಯೂ ಇದೆ). ಶಿವಶಕ್ತ್ಯಾದಿ ಸಕಲ ತತ್ವ ಸ್ವರೂಪ ಪ್ರಕಾಶಂ-ಶಿವಶಕ್ತಿಯೇ ಮೊದಲಾದ ಸಕಲ ತತ್ವಗಳ ಸ್ವರೂಪಗಳನ್ನೂ ಪ್ರಕಾಶಗೊಳಿಸುವವನು ; ಶಂ ಪ್ರಕಾಶಂ-ಒಳಿತನ್ನು ಪ್ರಕಾಶಿಸುವವನು ; ಸ್ವರೂಪ ಪ್ರಕಾಶಂ-ಸ್ವರೂಪವನ್ನು ಪ್ರಕಟಿಸುವವನು ; ತತ್ವಸ್ವರೂಪವನ್ನು, ಸಕಲ ತತ್ವ ಸ್ವರೂಪವನ್ನು ಪ್ರಕಾಶಪಡಿಸುವವನು ಇಂತಹ ತ್ಯಾಗರಾಜನಾದ ಶಿವನನ್ನು ಆಶ್ರಯಿಸುತ್ತೇನೆ.

ಇದು ತ್ಯಾಗಿಗಳಿಗೆ ಒಡೆಯನೆನಿಸಿದ ಪರಮೇಶ್ವರನ ಸ್ತುತಿ.

ಮುದ್ದುಸ್ವಾಮಿ ದೀಕ್ಷಿತರು

93. ಆನಂದಭೈರವಿ ರೂಪಕತಾಳ

ಪಲ್ಲವಿ : ಮಾನಸಗುರುಗುಹರೂಪಂ ಭಜರೇ ಮಾಯಾಮಯ ಹೃತ್ತಾಪಂ ತ್ಯಜರೇ ||
ಅನುಪಲ್ಲವಿ : ಮಾನವ ಜನ್ಮನಿ ಸಂಪ್ರಾಪ್ತೇ ಸತಿ-ಪರಮಾತ್ಮನಿ ನಿರತಿಶಯಸುಖಂ ವ್ರಜತೀರೇ ||
ಚರಣ : ಸತ್ವಗುಣೋಪಾದಿ ಸಹಿತ ಸದಾಶಿವಂ ಸ್ವಾವಿದ್ಯಾಸಮೇತ ಜೀವೋದ್ಭವಂ
ತತ್ವಂ ತಾಮಸಯುತ ವಿಶ್ವವೈಭವಂ ತಾರಕೇಶ್ವರಮಾನಂದ ಭೈರವಂ
ಸತ್ವಾ ಶ್ರೀ ಗುರುಚರಣಂ-ಕೃತ್ವಾ ನಾಮಸ್ಮರಣಂ-ಜಿತ್ವಾ ಮೋಹಾವರಣಂ-ಮತ್ವಾಪ್ತವ್ಯದೇಕ ಶರಣಂ ||

ಅರ್ಥ : ಮಾನಸ-ಎಲೆ ಮನಸ್ಸೆ ; ಗುರುಗುಹರೂಪಂ-ಗುರುಗುಹರೂಪನನ್ನು ; ಭಜರೇ-ಭಜಿಸು ; ಮಾಯಾಮಯ-ಮಾಯೆಯಿಂದ ತುಂಬಿದ ; ಹೃತ್ತಾಪಂ-ಹೃದಯ ತಾಪವನ್ನು ; ತ್ಯಜರೇ-ಕಳೆದುಕೊ ; ಮಾನವ ಜನ್ಮನಿ ಸಂಪ್ರಾಪ್ತೇ ಸತಿ-ಮಾನವ ಜನ್ಮವು ಒದಗಿಬಂದಿರುವಾಗ ; ಪರಮಾತ್ಮನಿ-ಪರಮಾತ್ಮನ ; ನಿರಂಶಯ ಸುಖಂ-ಅತಿಶಯವಾದ ಸುಖವನ್ನು ; ವ್ರಜತೀರೇ-ಪಡೆಯುನೆ ; ಸತ್ವಗುಣೋಪಾದಿಸಹಿತ ಸದಾಶಿವಂ-ಸತ್ವ ಗುಣಗಳಿಂದ ಕೂಡಿದ ಸದಾಶಿವನನ್ನು ; ಸ್ವಾವಿದ್ಯಾಸಮೇತಜೀವೋದ್ಭವಂ-ವಿದ್ಯಾಸಹಿತವಾಗಿ ಜೀವಗಳನ್ನು ಒಡಮೂಡಿಸಿರು

ವನನನ್ನು ; ತತ್ವಂ ತಾಮಸಯುತ ವಿಶ್ವ ವೈಭವಂ–ತಾಮಸಯುಕ್ತವಾದ ಜಗತ್ತಿನಲ್ಲಿ ವೈಭವೋಪೇತವಾಗಿ ಮೆರೆಯುವ ತತ್ವವಾದವನನ್ನು ; ತಾರಕೇಶ್ವರ ಮಾನಂದ ಭೈರವಂ–ಪಾಪಗಳನ್ನು ಪರಿಹರಿಸುವವನಾದ ಆನಂದ ಭೈರವ ರೂಪನನ್ನು ; ಸತ್ವಾ ಶ್ರೀ ಗುರುಚರಣಂ–ಶ್ರೀ ಗುರುವಿನ ಪಾದಗಳಲ್ಲಿ ಮನಸ್ಸನ್ನು ನೆಲೆಗೊಳಿಸಿ ; ಕೃತ್ವಾ ನಾಮಸ್ಮರಣಂ–ಅವನ ನಾಮಸ್ಮರಣೆ ಮಾಡುತ್ತಾ ; ಜಿತ್ವಾ ಮೋಹಾವರಣಂ–ಮೋಹದ ಮುಸುಕನ್ನು ಗೆದ್ದು, ಕಿತ್ತೊಗೆದು ; ಮತಾನತ್ವದೇಕಶರಣಂ–ನಿನಗೆ ಮಾತ್ರವೇ ಶರಣಾಗಿ, ರೇ ಮಾನಸ–ಎಲೆ ಮನಸ್ಸೆ ; ಗುರುಗುಹರೂಪನನ್ನು ಭಜಿಸು.

94. ರಾಗ : ಭೌಳಿ ಆದಿತಾಳ ತಾಳ್ಲಪಾಕಂ ಅಣ್ಣಮಯ್ಯ

ಪಲ್ಲವಿ : ವಂದೇಹಂ ಜಗದ್ವಲ್ಲಭಂ ದುರ್ಲಭಂ
ಮಂದರ ಧರಂ ಗುರುಂ ಮಾಧವಂ ಬೋಧನಂ ||

ಚರಣ : ನರಹರಿ ಮುರಹರಂ ನಾರಾಯಣಂ
ಹರಿಮಚ್ಯುತಂ ಘನವಿಹಂಗವಾಹಂ
ಪುರುಷೋತ್ತಮಂ ಪರಂ ಪುಂಡರೀಕೇಕ್ಷಣಂ
ಕರುಣಾಭರಣಂ ಕಲಯಾಮಿ ಶರಣಂ ||

2. ನಂದ ನಿಜ ನಂದನಂ ನಂದಕ ಗದಾಧರಂ
ಇಂದಿರಾನಾಥಂ ಅರವಿಂದ ನಾಭಂ
ಇಂದು ರವಿಲೋಚನಂ ಹಿತ ದಾನವರದಂ ಮು
ಕುಂದಂ ಯದುಕುಲಂ ಗೋಪ ಗೋವಿಂದಂ ||

3. ರಾಮನಾಮಂ ಯಜ್ಞ ರಕ್ಷಣಂ ಲಕ್ಷಣಂ
ವಾಮನಂ ಕಾಮಿನಂ ಶ್ರೀ ವಾಸುದೇವಂ
ಶ್ರೀಮದಾವಾಸಿನಂ ಶ್ರೀ ವೆಂಕಟೇಶ್ವರಂ
ಶ್ಯಾಮಲಂ ಕೋಮಲಂ ಶಾಂತ ಮೂರ್ತಿಂ ||

ಅರ್ಥ : ದುಲರ್ಭಂ–ಸುಲಭನಲ್ಲದವನೂ ; ಜಗದ್ವಲ್ಲಭಂ–ಜಗತ್ತಿಗೆ ಒಡೆಯನಾಗಿರುವವನೂ ; ಮಂದರ ಧರಂ ಗುರುಂ–ಮಂದರವನ್ನು ಎತ್ತಿದವನೂ ಗುರುವೂ ; ಮಾಧವನೂ ; ಬೋಧನಂ–ಬೋಧಿ ಎಂದರೆ ಜ್ಞಾನವುಳ್ಳವನೂ ಆದವನನ್ನು ವಂದೇಹಂ–ನಾನು ವಂದಿಸುತ್ತೇನೆ. ನರಹರಿ, ಮುರಹರಿ, ನಾರಾಯಣ, ಹರಿ, ಅಚ್ಯುತ, ಘನವಿಹಂಗವಾಹಂ–ಶ್ರೇಷ್ಠನಾದ ಗರುಡನನ್ನು ಏರಿದವನು ; ಪುರುಷೋತ್ತಮ, ಪರ, ಪುಂಡರೀಕೇಕ್ಷಣಂ–ತಾವರೆಯಂತೆ ಸುಂದರವಾದ ಕಣ್ಣುಗಳುಳ್ಳವನು ; ಕರುಣಾಭರಣಂ–ಕರುಣೆಯ ಆಭರಣವನ್ನುಳ್ಳವನು ; ಶರಣಂ ಕಲಯಾಮಿ–ಶರಣು ಬಂದಿರುವ ನಾನು ಪ್ರಾರ್ಥಿಸುತ್ತೇನೆ. ನಂದ ನಿಜ ನಂದನಂ–ನಂದನ ಮಗನೂ ; ನಂದಕ ಗದಾಧರಂ–ನಂದಕವೆಂಬ ಹೆಸರಿನ ಗದೆಯನ್ನು ಹಿಡಿದವನೂ ; ಇಂದಿರಾನಾಥಂ–ಲಕ್ಷ್ಮಿಗೆ ಪತಿಯೂ ; ಅರವಿಂದನಾಭಂ–ತಾವರೆಯನ್ನು ಹೊಕ್ಕಳಿಂದ ಅರಳಿಸಿದವನೂ ; ಇಂದು ರವಿ ಲೋಚನಂ–ಚಂದ್ರ ಸೂರ್ಯರನ್ನೇ ಕಣ್ಣುಗಳಾಗಿ ಉಳ್ಳವನು ; ಹಿತ ದಾನ ವರದಂ–ಹಿತಕರವಾದ ವರಗಳನ್ನು ನೀಡುವವನು ; ಮುಕಂದನೂ, ಯದುಕುಲ ಗೋಪನೂ, ಗೋವಿಂದನೂ ಆದವನನ್ನು ಪ್ರಾರ್ಥಿಸುತ್ತೇನೆ. ರಾಮನೆಂಬ ಹೆಸರುದ್ಧರಿಸಿದವನು ; ಯಜ್ಞರಕ್ಷಣಂ–ವಿಶ್ವಾ

ಮಿತ್ರನ ಯಜ್ಞವನ್ನು ರಕ್ಷಿಸಿದವನು ; ಲಕ್ಷಣನಾದವನು ; ವಾಮನನು ; ಶ್ರೀ ವಾಸುದೇವನು ; ಶ್ರೀಮದಾವಾಸಿನಂ-ಲಕ್ಷ್ಮಿಗೆ ನೆಲೆಯಾದವನು ; ಶ್ರೀ ವೆಂಕಟೇಶ್ವರನು ; ಶ್ಯಾಮಲನೂ ಕೋಮಲನೂ ಶಾಂತಮೂರ್ತಿಯೂ ಆದವನನ್ನು ಪ್ರಾರ್ಥಿಸುತ್ತೇನೆ.

95. ರಾಗ : ಭೌಳಿ ರೂಪಕತಾಳ ಮುತ್ತಯ್ಯ ಭಾಗವತರು

ಪಲ್ಲವಿ : ತಪ್ಪುಲನ್ನಿಯು ತಾಳುಕೊನುಮ್ಮ ಚಾಮುಂಡೇಶ್ವರಿ ನಾದು ||

ಅನುಪಲ್ಲವಿ : ಮೆಪ್ಪುಲ ಕೈ ಮಾಟ ಪಲಿಕಿ ಮೇಲ್ಮಿಯಾ ಗೆಂಜಿನ ನಾದು ||

ಚರಣ : ಅಮ್ಮ ನಾದು ವಿನ್ನಪಮುಲನ್ನಿಯುನ್ನಾದರಿಂಚು ಮನಿ
ನಮ್ಮಿತಿ ಹರಿಕೇಶ ಜಾಯೇ ರಕ್ಷಿಂಚವಲೇನು ಮಾಯೇ ||

ಅರ್ಥ : ಚಾಮುಂಡೇಶ್ವರಿಯೇ, ನಾದು–ನನ್ನ ; ತಪ್ಪುಲನ್ನಿಯು–ಎಲ್ಲ ತಪ್ಪುಗಳನ್ನು ; ತಾಳು ಕೊಮ್ಮು–ಸಹಿಸಿಕೊ; ಮೆಪ್ಪುಲ ಕೈ–ಹೊಗಳಿಕೆಗಾಗಿ ; ಮಾಟಪಲಿಕಿ–ಮಾತಾಡಿ; ಮೇಲ್ಮಿಯಾ–ವಿಶೇಷವಾಗಿ ; ಗೆಂಚಿನ ನಾದು–ಬೇಡುತ್ತಿರುವ ನನ್ನ ತಪ್ಪುಗಳನ್ನು ಸಹಿಸಿಕೊ. ನಾದು ವಿನ್ನಪಮುಲನ್ನಿಯು–ನನ್ನ ಬಿನ್ನಹಗಳೆಲ್ಲವನ್ನೂ ; ಆದರಿಂಚುಮು–ಆಲಿಸಿ ಆದರಿಸುವೆ ; ಅನಿ–ಎಂದು ; ನಮ್ಮಿತಿ–ನಂಬಿದೆನು ; ಹರಿಕೇಶ ಜಾಯೇ–ವಿಷ್ಣು ಸಹೋದರಿಯೆ ; ರಕ್ಷಿಂಚವಲೆನು ಮಾಯೇ–ಮಾಯೆಯೆ, ರಕ್ಷಿಸಬೇಕಮ್ಮ.

96. ರಾಗ : ಭೌಳಿ ಝಂಪೆತಾಳ ತ್ಯಾಗರಾಜರು

ಪಲ್ಲವಿ : ಮೇಲುಕೋವಯ್ಯ ಮಮ್ಮೇಲುಕೋ ರಾಮು ||

ಅನುಪಲ್ಲವಿ : ಮೇಲೈನ ಸೀತಾಸಮೇತ ನಾ ಭಾಗ್ಯಮಾ ||

ಚರಣ : ನಾರದಾಮುಲು ನಿನ್ನು ಕೋರಿ ನೀ ಮಹಿಮ ಲ
ವಾರಿಗ ಬಾಡು ಚುನ್ನಾರಿಪುಡು ತೆಲ್ಲ
ವಾರ ಗಾವಚ್ಚಿನದಿ ಶ್ರೀರಾಮು ನವನೀತ
ಕ್ಷೀರಮುಲು ಬಾಗುಗ ನಾರಗಿಂಪುನು ವೇಗ ||

2. ಫಣಿಶಯನಯ ನಿಮಿಷ ರಮಣು ಲೂಡಿಗಮುಸೇಯ
ಅಣುಕುವಗ ನೀಂಡಾರು ಪ್ರಣುತಿ ಜೇಸೆದರು
ಮಣಿಮಯಾ ಭರಣಲೌಯಣಿಮಾದು ಲಿಡು
ದೀಪಮಣುಲು ತೆಲುಪಾಯನು ತರಣಿವಂಶವರ ತಿಲಕ ||

3. ರಾಜರಾಜೇಶ್ವರ ಭರಾಜಮುಖ ಸಾಕೇತ
ರಾಜ ಸದ್ಗುಣ ತ್ಯಾಗರಾಜನುತ ಚರಣ
ರಾಜನ್ಯ ವಿಬುಧಗಣ ರಾಜಾದುಲೆಲ್ಲ ನಿನು
ಪೂಜಿಂಪಗಾ ನಾರೀಜಗಮು ಪಾಲಿಂಪ ||

ಅರ್ಥ : ರಾಮು, ಮೇಲುಕೋವಯ್ಯ–ಎದ್ದೇಳಯ್ಯ ; ಮಮ್ಮ ಎಲುಕೋ–ನನ್ನನ್ನು ರಕ್ಷಿಸಯ್ಯ ; ಮೇಲೈನ–ಶ್ರೇಷ್ಠನಾದ ; ಸೀತಾಸಮೇತ ನಾಭಾಗ್ಯರೂ–ಸೀತಾ ಸಮೇತನೆ, ನನ್ನಭಾಗ್ಯವೇ ;

ನನ್ನನ್ನು ರಕ್ಷಿಸು. ನಾರದಾದುಲು–ನಾರದನೇ ಮೊದಲಾದವರು ; ನಿನ್ನುಕೋರಿ–ನಿನ್ನನ್ನು ಬೇಡುತ್ತಾ ; ನೀ ಮಹಿಮಲು–ನಿನ್ನ ಮಹಿಮೆಯನ್ನು ; ಅವ್ವಾರಿಗ–ಸತತವಾಗಿ ; ಪಾಡುಚು ನ್ನಾರು–ಹಾಡುತ್ತಿದ್ದಾರಯ್ಯ ; ಇಪುಡು–ಈಗ ; ತೆಲ್ಲವಾರಿಗಾವಚ್ಚಿನದಿ–ಬೆಳಗಾಗುತ್ತಿದೆ ; ಶ್ರೀರಾಮ ; ನವನೀತ ಕ್ಷೀರಮುಲು–ಹಾಲುಬೆಣ್ಣೆಗಳನ್ನು; ಬಾಗುಗನು–ಚೆನ್ನಾಗಿ; ಆರಗಿಂಪುನು–ಸ್ವೀಕರಿಸುವೆಯಂತೆ ; ವೇಗ–ಬೇಗನೆ, ಏಳಯ್ಯ.

ಫಣಿಶಯನ–ಸರ್ಪಶಯನನೆ; ಅನಿಮಿಷ ರಮಣುಲು-ದೇವತಾ ಸ್ತ್ರೀಯರು ; ಊಡಿಗಮು ಸೇಯ–ಸೇವೆ ಸಲ್ಲಿಸಲು; ಅಣುಕುವಗ–ವಿನಯದಿಂದ ; ನಿಂಡಾರು–ನಿಂತಿದ್ದಾರೆ; ಪ್ರಣುತಿಚೇಸೇದರು-ನಮಸ್ಕಾರ ಮಾಡುತ್ತಿದ್ದಾರೆ ; ಮಣಿಮಯಾಭರಣಲೌ–ರತ್ನಖಚಿತ ಆಭರಣಗಳು ; ಅಣಿಮಾದುಲು–ಅಣಿಮಾದಿ ಅಷ್ಟಸಿದ್ಧಿಗಳು ; ಇಡುದೀಪಮಣುಲು-ಎರಡೂ ಕಡೆಯ ದೀಪಗಳ ಕಾಂತಿಯಿಂದ, ತೆಲುಪಾಯನು–ಥಳಥಳಿಸುತ್ತಿವೆ ; ತರಣಿವಂಶ ತಿಲಕ–ಸೂರ್ಯವಂಶಕ್ಕೆ ಶ್ರೇಷ್ಠನಾದವನೆ, ಬೇಗ ಮೇಲೇಳು.

ರಾಜರಾಜೇಶ್ವರನೆ ; ಭರಾಜಮುಖ–ಚಂದ್ರನಂತೆ ಮನೋಹರವಾದ ಮುಖವುಳ್ಳವನೆ ; ಸಾಕೇತರಾಜ–ಸಾಕೇತಕ್ಕೆ ಅಧಿಪತಿಯೇ ; ಸದ್ಗುಣಶಾಲಿಯೇ ; ತ್ಯಾಗರಾಜನಿಂದ ನುತಿಗೊಂಡ ಪಾದಗಳುಳ್ಳವನೆ ; ರಾಜನ್ಯ–ರಾಜರು ; ಬುಧಗಣ–ವಿದ್ವಾಂಸರು ; ರಾಜಾದುಲೆಲ್ಲ–ಮಹಾ ರಾಜರೆಲ್ಲರೂ; ನಿನು ಪೂಜಿಂಪ–ನಿನ್ನನ್ನು ಪೂಜಿಸಲು ; ಗಾಚಿನಾರು–ಕಾದಿದ್ದಾರೆ; ಈ ಜಗಮು ಪಾಲಿಂಪ–ಈ ಪ್ರಪಂಚವನ್ನು ಪಾಲಿಸಲು, ಎದ್ದೇಳಯ್ಯ.

**97.** ಶ್ರೀ ಆದಿತಾಳ ತ್ಯಾಗರಾಜರು

ಪಲ್ಲವಿ : ನಾಮ ಕುಸುಮಮುಲಚೇ ಪೂಜಿಂಚೇ
ನರಜನ್ಮಮೇ ಜನ್ಮಮು ಮನಸಾ ||

ಅನು ಪಲ್ಲವಿ : ಶ್ರೀಮನ್ಮಾನಸ ಕನಕ ಪೀಠಮುನ
ಚೆಲಗ ಜೇಸಿಕೋನಿ ವರ ಶಿವರಾಮು ||

ಚರಣ : ನಾದ ಸ್ವರಮುನು ವರ ನವರತ್ನಪು
ವೇದಿಕಪೈ ಸಕಲಲೀಲಾ ವಿ
ನೋದುನಿ ಪರಮಾತ್ಮುನಿ ಶ್ರೀರಾಮುನಿ
ಪಾದಮುಲನು ತ್ಯಾಗರಾಜ ಹೃದ್ಭೂಷಣುನಿ ||

ಅರ್ಥ : ಮನಸಾ–ಎಲೆ ಮನಸ್ಸೆ ; ನಾಮ ಕುಸುಮ ಮುಲಚೇ ಪೂಜಿಂಚೇ–ದಿವ್ಯವಾದ ನಾಮಗಳೆಂಬ ಹೂಗಳಿಂದ ಪೂಜಿಸಿದರೆ ; ನರಜನ್ಮಮೇ ಜನ್ಮಮು–ಮಾನವ ಜನ್ಮವು ಸಾರ್ಥಕ; ಸಕಲಲೀಲಾ ವಿನೋದನನ್ನು, ಪರಮಾತ್ಮನನ್ನು, ತ್ಯಾಗರಾಜನ ಹೃದಯಕ್ಕೆ ಆಭರಣನಾಗಿರುವವನನ್ನು' ಶ್ರೀರಾಮುನಿ ಪಾದಮುಲನು–ಅಂತಹ ಶ್ರೀರಾಮನ ಪಾದಗಳನ್ನು' ನಾದ ಸ್ವರಮುನು–ನಾದಸ್ವರಗಳೆಂಬ ; ವರ ನವರತ್ನಪು–ಶ್ರೇಷ್ಠವಾದ ರತ್ನಪೀಠದ ಮೇಲೆ ; ವೇದಿಕಪೈ–ವೇದಿಕೆಯ ಮೇಲೆ ಕುಳ್ಳಿರಿಸಿ ; ವರ ಶಿವ ರಾಮು–ಶ್ರೇಷ್ಠವಾದ ಶಿವ ಹಾಗೂ ರಾಮ ಎಂಬ ದಿವ್ಯನಾಮ ಕುಸುಮಗಳಿಂದ ಪೂಜಿಸಿದರೆ ಮಾತ್ರವೇ ನರಜನ್ಮವು ಸಾರ್ಥಕ.

98\. ಶ್ರೀ ಖಂಡ ಏಕತಾಳ ಮುದ್ದುಸ್ವಾಮಿ ದೀಕ್ಷಿತರು

ಪಲ್ಲವಿ : ಶ್ರೀ ಕಮಲಾಂಬಿಕೆ ಶಿವೇ । ಪಾಹಿಮಾಂ ಲಲಿತೇ ।

ಅನುಪಲ್ಲವಿ : ಶ್ರೀಪತಿ ವಿನುತೇ ಸಿತಾಸಿತೇ ಶಿವಸಹಿತೇ ॥

ಚರಣ : ರಾಕಾ ಚಂದ್ರಮುಖೀ ರಕ್ಷಿತ ಕೋಲಮುಖಿ ರಮಾವಾಣೀ ಸಖೀ
ರಾಜಯೋಗಸುಖಿ । ಶಾಕಂಬರಿ ಶಾತೋದರಿ । ಚಂದ್ರ ಕಳಾಧರಿ
ಶಂಕರಿ ಶಂಕರ ಗುರುಗುಹ ಭಕ್ತ ವಶಂಕರಿ । ಏಕಾಕ್ಷರಿ ಭುವನೇಶ್ವರಿ
ಈಶ ಪ್ರಿಯಕರಿ ಶ್ರೀಕರಿ । ಸುಖಕರಿ । ಶ್ರೀ ಮಹಾ ತ್ರಿಪುರಸುಂದರಿ ॥

ಅರ್ಥ : ಶ್ರೀ ಕಮಲಾಂಬಿಕೆ, ಲಲಿತೆ, ಶ್ರೀಪತಿ ವಿನುತೇ–ವಿಷ್ಣುವಿನಿಂದ ಸ್ತುತಳಾದವಳೆ ; ಸಿತಾಸಿತೇ–ಶ್ಯಾಮಲವರ್ಣಳೆ ; ಶಿವಸಹಿತೆ–ಶಿವನೊಂದಿಗೆ ಇರುವವಳೆ ; ಶಿವೇ, ಪಾಹಿಮಾಂ–ನನ್ನನ್ನು ಪಾಲಿಸು. ರಾಕಾಚಂದ್ರಮುಖೀ–ಹುಣ್ಣಿಮೆಯ ಚಂದ್ರನಂತಹ ಮುಖವುಳ್ಳವಳೆ; ರಕ್ಷಿತ ಕೋಲ ಮುಖಿ, ರಮಾವಾಣೀ ಸಖೀ–ಲಕ್ಷ್ಮಿ, ಸರಸ್ವತಿ ಇವರು ಸಖಿಯರಾಗಿರುವವಳೆ; ರಾಜಯೋಗಸುಖಿ, ರಾಜಯೋಗದಲ್ಲಿ ಸುಖಿಸುವವಳೆ, ಶಾಕಂಭರಿಯೇ, ಶಾತೋದರಿ–ಕೃಶವಾದ ಉದರ ಭಾಗ ವುಳ್ಳವಳೆ ; ಚಂದ್ರಕಲಾಧರಿ–ಚಂದ್ರ ಬಿಂಬವನ್ನು ಧರಿಸಿದವಳೆ ; ಶಂಕರಿ, ಶಂಕರ ಗುರುಗುಹ ಭಕ್ತವಶಂಕರಿ, ಏಕಾಕ್ಷರಿ–ಓಂ ಎಂಬ ಒಂದು ಅಕ್ಷರದ ರೂಪವಾದವಳೆ ; ಭುವನೇಶ್ವರಿಯೆ–ಈಶನಿಗೆ ಪ್ರಿಯವುಂಟುಮಾಡುವವಳೆ, ಶ್ರೀಕರಿ, ಸುಖಕರಿ, ಶ್ರೀ ಮಹಾ ತ್ರಿಪುರಸುಂದರಿಯೆ ನನ್ನನ್ನು ಪಾಲಿಸು.

99\. ಶ್ರೀ ರೂಪಕತಾಳ ಸುಬ್ಬರಾಯ ಶಾಸ್ತ್ರಿಗಳು

ಪಲ್ಲವಿ : ವನಜಾಸನ ವಿನುತಾ ನತವರದಾಯಕಿ ಶ್ರೀ ಲಲಿತಾ ॥

ಅನುಪಲ್ಲವಿ : ಕನಕಾದ್ರಿವಾಸಿನಿ ನನು ಕಟಾಕ್ಷಿಂಚುಮು ಕಾಮಾಕ್ಷಿ
ತಾಮಸಮಿಕನು ಸಲುಪ ತಗುದು ವಿನುಮು ॥
ಕಾಮಿತ ಫಲಮು ಲೊಸಗುಟಕು ಸಮಯಮು
ಪುರಾರಿ ರಿಪುನಿಕಿ ವರಮುಲು ಬಿರಾನನೊಸಗಿತಿವಿಯನುಚು
ವಿನಿ ನೇ ನೀ ಪದಮುಲು ಗೊಲಿಚಿತಿ ॥

ಚರಣ ; ಕಳಾಭರಣ ಕಳಾಧರಿ ಸ
ಕಲಾಗಮ ಸನ್ನುತಾ
ಕಲುಷಾರ್ತಿ ಭಯ ವಿಭಂಜನಿ
ಇಲಲೋ ಫಲನೀ ವಲ ವೇ ಗಲದಾ ಶ್ರೀ ಲಲಿತಾಂಬಿಕಾ ॥

ಅರ್ಥ : ವನಜಾಸನ ವಿನುತಾ–ಬ್ರಹ್ಮನಿಂದ ಸ್ತುತಳಾದ ; ನತವರದಾಯಕಿ–ಭಕ್ತರಿಗೆ ವರಗಳನ್ನು ನೀಡುವ ; ಶ್ರೀ ಲಲಿತಾ–ಲಲಿತೆಯೆ ; ಕನಕಾದ್ರಿ ವಾಸಿನಿಯೆ ; ಕಾಮಾಕ್ಷಿಯೆ ; ನನು ಕಟಾಕ್ಷಿಂ ಚುಮು–ನನ್ನನ್ನು ಕರುಣೆಯ ಕಟಾಕ್ಷದಿಂದ ನೋಡು. ಇಕನು–ಇಲ್ಲಿ ; ತಾಮಸಮು ಸಲುಪ ತಗುದು–ತಾಮಸ ಮಾಡುವುದು ಸರಿಯಲ್ಲ ; ವಿನುಮು–ಕೇಳಮ್ಮ ; ಕಾಮಿತಫಲಮು ಲೊಸ

ಗುಟಕು–ಅಪೇಕ್ಷಿಸಿದ ಫಲಗಳನ್ನು ನೀಡುವುದಕ್ಕೆ ; ಸಮಯಮು–ತಕ್ಕ ಸಮಯವಾಗಿದೆ ; ಪುರಾರಿಪುನಿಕಿ–ಶಿವನ ಶತ್ರುವಾದ ಭಸ್ಮಾಸುರನಿಗೂ ; ವರಮುಲು–ವರಗಳನ್ನು ; ಬಿರಾನ ನೊಸಗಿತಿವಿ–ಬೇಗ ನೀಡಿದೆ ; ಅನುಚು–ಎಂದು ; ವಿನಿ–ಕೇಳಿ ; ನೇ ನೀ ಪದಮುಲು–ನಾನು ನಿನ್ನ ಪಾದಗಳನ್ನು ; ಗೊಲಿಚಿತಿ–ಬೇಡುತ್ತಿದ್ದೇನೆ. ಕಳಾಭರಣ ಕಳಾಧರಿ–ಕಲೆಗಳನ್ನು ಅಭರಣ ಗಳುಳ್ಳ ಚಂದ್ರನನ್ನು ಧರಿಸಿದವಳೆ ; ಸಕಲಾಗಮಸನ್ನುತಾ–ಸಕಲವೇದ ಶಾಸ್ತ್ರಾದಿಗಳಿಂದ ಸ್ತುತಿ ಸಲ್ಪಡುವವಳೆ; ಕಲುಷಾರ್ತಿ ಭಯವಿಭಂಜನಿ–ಪಾಪಭೀತಿಯನ್ನು ನಾಶಮಾಡುವವಳೆ ; ಇಲ ಲೋಕಫಲ ನೀವಲವೇ ಗಲದಾ–ಈ ಲೋಕದಲ್ಲಿ ನೀನೇ ಫಲಗಳನ್ನು ನೀಡುವವಳಲ್ಲವೆ, ಶ್ರೀ ಲಲಿತಾಂಬಿಕೆ ನನ್ನನ್ನು ಕರುಣೆಯಿಂದ ನೋಡು.

100. ಮಣಿರಂಗು : ಆದಿತಾಳ ತ್ಯಾಗರಾಜರು

ಪಲ್ಲವಿ : ರಾನಿದಿ ರಾದು ಸುರಾಸುರುಲ ಕೈನ

ಅನುಪಲ್ಲವಿ : ಪೋನಿದಿ ಪೋದು ಭೂಸುರುಲ ಕೈನ ||

ಚರಣ : ದೇವೇಂದ್ರುನಿಕಿ ಸುದೇಹಮು ಪೂರ್ವ
ದೇವುಲಕಮೃತಮು ಭಾವಮೇಗಾನಿ
ಆ ವನಚರ ಬಾಧಲಾಮುನುಲಕೇಗಾನಿ
ಪಾವನ ತ್ಯಾಗರಾಜ ಭಾಗ್ಯಮಾ ! ಶ್ರೀರಾಮ ||

ಅರ್ಥ : ಸುರಾಸುರಲಕೈನ–ದೇವಾದಿದೇವತೆಗಳು ರಾಕ್ಷಸರು ಬ್ರಾಹ್ಮಣರು ಯಾರಿಗೇ ಆಗಲಿ ; ರಾನಿದಿರಾದು–ಬಾರದ್ದು ಬರುವುದಿಲ್ಲ ; ಪೋನಿದಿಪೋದು–ಹೋಗದ್ದು ಹೋಗುವುದಿಲ್ಲ ; ದೇವೇಂದ್ರುನಿಕಿ–ದೇವೇಂದ್ರನಿಗೆ ; ಸುದೇಹಮು–ಶ್ರೇಷ್ಠವಾದ ದೇಹವು ಹೇಗೆ ಬರುತ್ತಿತ್ತು ; ಪೂರ್ವದೇವುಲಕು–ರಾಕ್ಷಸರಿಗೆ ; ಅಮೃತಮು ಭಾವಮು ಏಗಾನಿ–ಅಮೃತವು ಏಕೆ ವಂಚಿತ ವಾಯಿತು ಏಕೆ ? ಹಾಗೆಯೇ ಆ ಮುನುಲಕು–ದಂಡಕಾರಣ್ಯದ ಮುನಿಗಳಿಗೆ ; ವನಚರ ಬಾಧಲು ಏಗಾನಿ–ರಾಕ್ಷಸರ ಬಾಧೆಯು ಏಕೆ ಉಂಟಾಯಿತು ? ಪಾವನ ತ್ಯಾಗರಾಜನ ಭಾಗ್ಯವೇ, ಶ್ರೀ ರಾಮಚಂದ್ರ ! ಬರಬೇಕಾಗಿರುವುದು ಬರುತ್ತದೆ, ಹೋಗಬೇಕಾದ್ದು ಹೋಗುತ್ತದೆ.

101. ಮಣಿರಂಗು : ರೂಪಕತಾಳ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

ಪಲ್ಲವಿ : ನರವರ ರಘುನಂದನ ಶ್ರೀನಾಥ ಅಮರಪಾಲನ ||

ಅನುಪಲ್ಲವಿ : ಸ್ಮರಹರ ಸನ್ನುತ ನಾಮ ಸ್ಮರಜನಕ ಸಾರ್ವಭೌಮ ||

ಚರಣ : ಪುರುಷೋತ್ತಮ ಭೂಸುರಾದಿ ಸುರಗಣ ಸೇವಿತ
ಪದ ಸುಸ್ವರ ಗಾನಾನಂದ
ಶರಣಾಗತ ಜನಾರ್ತಿಹರ ಶರಧಿ ಮದ ವಿದರ ಶ್ರೀ
ವರದ ವೆಂಕಟೇಶ್ವರ ಶ್ರೀಕರ ಬಲಸಂಹಾರ ||

ಅರ್ಥ : ನರವರ–ಶ್ರೇಷ್ಠನೇ ; ರಘುನಂದನ, ಶ್ರೀನಾಥ, ಅಮರಪಾಲನ–ದೇವತೆಗಳನ್ನು ಪಾಲಿಸಿದವನೆ ; ಸ್ಮರಹರ ಸನ್ನುತ ನಾಮ–ಮನ್ಮಥನನ್ನು ಕೊಂದ ಶಿವನಿಂದ ಸ್ತುತನಾದವನೆ ; ಸ್ಮರ ಜನಕ–ಮನ್ಮಥನ ತಂದೆಯೆ ; ಸಾರ್ವಭೌಮನೆ ; ಪುರುಷೋತ್ತಮ, ಭೂ ಸುರಾದಿ ಸುರಗಣ ಸೇವಿತ–ದೇವಬ್ರಾಹ್ಮಣರೆಲ್ಲರಿಂದಲೂ ಸೇವಿಸಲ್ಪಡುವವನೆ ; ಪದಸುಸ್ವರ ಗಾನಾನಂದ–ಸುಸ್ವರಯುತವಾದ ಗಾನದಿಂದ ಆನಂದ–ಪಡುವವನೆ ; ಶರಣಾಗತ ಜನಾರ್ತಿಹರ–ಶರಣಾಗತರಾದ ಜನರ ಸಂಕಟಗಳನ್ನು ಪರಿಹರಿಸುವವನೆ ; ಶರಧಿಮದ ವಿದರ–ಸಾಗರನ ಮದವನ್ನು ಇಳಿಸಿದವನೆ ; ಶ್ರೀ ವರದ ವೆಂಕಟೇಶ್ವರನೆ ; ಶ್ರೀಕರನೆ, ಬಲಸಂಹಾರ–ಬಲನೆಂಬ ರಕ್ಕಸನನ್ನು ಕೊಂದವನೆ.

102. ಮಣಿರಂಗು : ಆದಿತಾಳ ರಾಮರತ್ನಂ

ಪಲ್ಲವಿ : ರಾಮಂ ರವಿಕುಲ ಜಲನಿಧಿ ಸೋಮಂ
ಕಾಮ ನಿರ್ಜಿತರೂಪಂ ಭಜೇಹಂ ಶ್ರೀ ||

ಅನುಪಲ್ಲವಿ : ಪರಿಪೂರ್ಣಕಾರುಣ್ಯಪಾರಾವಾರಂ ಸರಸಿಜ ನೇತ್ರಂ ಪರಮಪವಿತ್ರಂ
ಭಾರತೀರಮಾಗೌರೀರಮಣ ಸ್ವರೂಪಂ ವಾತಾತ್ಮಜಾಶ್ರಿತ ಶ್ರೀ ||

ಚರಣ : ಭಾಗವತಪ್ರಿಯ ಶ್ರೀಕರಂ ಕರಧೃತ ವೈಷ್ಣವ ಚಾಪಶರಂ
ರಾಗಯುತ ಸದ್ಭಕ್ತಿಹಿತಂ ಭಕ್ತದಾನ ನಿಪುಣಂ
ನಾಗರಾಜ ಅಜರುದ್ರಾದಿಸೇವಿತಂ ವೇದವೇದಾಂತ ದಿವ್ಯರೂಪಂ
ನಾಗವರದ ನಾನಾಲಂಕಾರಭೂಷಿತಂ ದಾಶರಥಿಸನ್ನುತ ಶ್ರೀ ||

ಅರ್ಥ : ರವಿಕುಲಜಲನಿಧಿಸೋಮಂ–ಸೂರ್ಯವಂಶವೆಂಬ ಸಾಗರಕ್ಕೆ ಚಂದ್ರನಂತಿರುವವನೂ, ಕಾಮ ನಿರ್ಜಿತರೂಪಂ–ಮನ್ಮಥನನ್ನು ಗೆದ್ದ ಸುಂದರವಾದ ರೂಪು ಉಳ್ಳವನೂ ಆದ : ರಾಮಂ–ರಾಮನನ್ನು ; ಭಜೇಹಂ–ಭಜಿಸುತ್ತೇನೆ.

ಪರಿಪೂರ್ಣವಾದ, ಕಾರುಣ್ಯಪಾರಾವಾರಂ–ಕರುಣೆಯ ಸಾಗರದಂತಿರುವವನೂ, ಸರಸಿಜ ನೇತ್ರಂ–ತಾವರೆಯಂತೆ ಕಣ್ಣುಳ್ಳವನೂ ; ಪರಮ ಪವಿತ್ರನೂ ; ಭಾರತೀ–ಸರಸ್ವತಿ, ರಮಾ–ಲಕ್ಷ್ಮಿ, ಗೌರೀ-ಪಾರ್ವತಿ ; ರಮಣಸ್ವರೂಪಂ–ಇವರ ವಲ್ಲಭರ ಅಂದರೆ ಬ್ರಹ್ಮ ವಿಷ್ಣು ಮಹೇಶ್ವರ ರೂಪನೂ ; ವಾತಾತ್ಮಜಾಶ್ರಿತ–ಆಂಜನೇಯನಿಂದ ಸ್ತುತಿಗೊಂಡವನೂ ಆದ ರಾಮನನ್ನು ಭಜಿಸುತ್ತೇನೆ. ಭಾಗವತರಿಗೆ ಪ್ರಿಯನೂ, ಶ್ರೀಕರಂ–ಸಂಪತ್ತು ನೀಡುವವನೂ, ಕರಧೃತ ವೈಷ್ಣವ ಚಾಪಶರಂ–ಕೈಯಲ್ಲಿ ವೈಷ್ಣವ ಧನುಸ್ಸನ್ನೂ ಬಾಣಗಳನ್ನೂ ಹಿಡಿದವನೂ ; ರಾಗಯುತ–ಪ್ರೇಮಪೂರ್ವಕವಾದ ; ಸದ್ಭಕ್ತಿಹಿತಂ–ಶ್ರೇಷ್ಠವಾದ ಭಕ್ತಿಯು ಹಿತವಾದವನೂ ; ಭಕ್ತರಿಗೆ ಇಷ್ಟಾರ್ಥಗಳನ್ನು ನೀಡುವುದರಲ್ಲಿ ನಿಪುಣನೂ ; ನಾಗರಾಜ, ಅಜ, ರುದ್ರ ಮುಂತಾದವರಿಂದ ಸೇವಿತನೂ ; ವೇದವೇದಾಂತಗಳ ರೂಪನೂ ; ನಾಗವರದ–ಆನೆಗೆ ವರದನಾದವನೂ [ಗಜೇಂದ್ರಮೋಕ್ಷ] ; ನಾನಾಲಂಕಾರ ಭೂಷಿತನೂ ; ದಾಶರಥಿಯಿಂದ ಸನ್ನುತನೂ ಆದ ಶ್ರೀರಾಮನನ್ನು ಭಜಿಸುತೆನೆ.

103, ದರ್ಬಾರ್ : ರೂಪಕ ತಿರುಪತಿ ನಾರಾಯಣಸ್ವಾಮಿ

ಪಲ್ಲವಿ : ಮೋಮುಜೂಪವೇಮಿ ರಾಮ ! ಮೋಹನಾಂಗ ನೀದು ಮುದ್ದು

ಅನುಪಲ್ಲವಿ : ಕೌಮಾರಿವಿನುತನಾಮು ಕಾವುಮನುಚು ವೇಡುಕೊನ್ನ ||

ಚರಣ : ಕರಿ ಮೊರಲಿಡಗಾನೇ ವಚ್ಚಿನ ಕರುಣನೇಡೆಂತುದಾಗಿತಿವೋ
ತಿರುಪತಿಪುರವಾಸ ದೇವ ವೆಂಕಟೇಶ ನೀದು ||

ಅರ್ಥ : ರಾಮ–ರಾಮಚಂದ್ರ, ಮೋಮು–ಮುಖವನ್ನು ; ಜೂಪವೇಮಿ–ಏಕೆ ತೋರಿಸೆ ? ಮೋಹ ನಾಂಗನೆ, ನೀದು–ನಿನ್ನ ; ಮುದ್ದು ಮೋಮು–ಮುದ್ದು ಮೊಗವನ್ನು ತೋರಿಸೆ?–ಕೌಮಾರಿ ವಿನುತನಾಮು–ಕುಮಾರಿಯು [ಕನ್ಯಾಕುಮಾರಿ ] ಸ್ತುತಿಸಿದ ನಾಮವುಳ್ಳವನೆ ; ಕಾವುಮು–ಕಾಪಾಡು ; ಅನುಚು–ಎಂಬುದಾಗಿ ; ವೇಡುಕೊನ್ನ–ಬೇಡಿಕೊಳ್ಳುತ್ತಿದ್ದೇನೆ.

ಕರಿಮೊರಲಿಡಗಾನೇ–ಆನೆಯು [ಗಜೇಂದ್ರನು] ಮೊರೆಯಿಟ್ಟೊಡನೆಯೆ ; ವಚ್ಚಿನ–ಬಂದ ; ಕರುಣ–ಕರುಣೆಯೇ ; ನೇಡು–ಇಂದು ; ಎಂತುದಾಗಿತಿವೊ–ಹೇಗಾದರೂ ಮರೆ ಸಿಟ್ಟುಕೊಂಡಿರುವೆಯೋ ; ತಿರುಪತಿವಾಸನೆ, ದೇವ ವೆಂಕಟೇಶನೆ, ನಿನ್ನ ಮುಖವನ್ನು ಏಕೆ ತೋರಿಸುತ್ತಿಲ್ಲ ?

104. ದರ್ಬಾರ್ : ಆದಿತಾಳ ತ್ಯಾಗರಾಜರು

ಪಲ್ಲವಿ : ಮುಂದುವೆನುಕ ಯಿರು ಪಕ್ಕಲದೋಡೈ ಮುರಖರಹರ ! ರಾ ರಾ ||

ಅನುಪಲ್ಲವಿ : ಎಂದುಗಾನ ನೀಯುಂದಮುವಲೆ ರಘುನಂದನ ವೇಗಮೆ ರಾ ರಾ ||

ಚರಣ : ಚಂಡಭಾಸ್ಕರ ಕುಲಾಬ್ಧಿ ಚಂದ್ರ ಕೋದಂಡಪಾಣಿಯೈ ರಾ ರಾ
ಅಂಡಗೊಲುಚು ಸೌಮಿತ್ರಿ ಸಹಿತುಡೌ ಅಮಿತ ಪರಾಕ್ರಮ ರಾ ರಾ ||

2. ಓ ಗಜರಕ್ಷಕ ಓ ರಾಜಕುಮಾರ ಓಂಕಾರಸದನ ರಾ ರಾ ||
ಭಾಗವತಪ್ರಿಯ ಬಾಗ ಬ್ರೋವವಯ್ಯ ತ್ಯಾಗರಾಜನುತ ರಾ ರಾ ||

ಅರ್ಥ : ಮುಂದುವೆನುಕ–ಮುಂದೆ ಹಿಂದೆ ; ಇರುಪಕ್ಕಲ–ಎರಡೂ ಪಕ್ಕಗಳಲ್ಲಿ ; ತೋಡೈ–ಜೊತೆಯಾಗಿ ; ರಾರಾ–ಬಾರಯ್ಯ, ಮುರ ಖರ ಮೊದಲಾದ ರಕ್ಕಸರನ್ನು ಕೊಂದವನೆ; ನೀಯುಂದಮುವಲೆ ಎಂದು ಗಾನ–ನಿನ್ನಂಥವನನ್ನು ಎಲ್ಲಿಯೂ ಕಾಣಲಾರೆನಯ್ಯ ; ರಘುನಂದನ, ವೇಗಮೆ–ಬೇಗನೆ ; ರಾ ರಾ–ಬಾರಯ್ಯ.

ಚಂಡಭಾಸ್ಕರ–ಪ್ರಚಂಡನಾದ ಸೂರ್ಯನ ; ಕುಲಾಬ್ಧಿ ಚಂದ್ರ–ವಂಶಕ್ಕೆ ಚಂದ್ರನಂತಿರುವ ವನನೆ ; ಕೋದಂಡಪಾಣಿಯೈ–ಕೋದಂಡವನ್ನು ಹಿಡಿದವನೆ ; ಅಂಡಗೊಲುಚು–ಬ್ರಹ್ಮಾಂಡ ವನ್ನೇ ಆಳುವವನೆ ; ಸೌಮಿತ್ರಿ ಸಹಿತುಡೌ–ಲಕ್ಷ್ಮಣನ ಜೊತೆಯಾಗಿರುವವನೆ ; ಅಮಿತ ಪರಾ ಕ್ರಮ–ಅಪಾರವಾದ ಪರಾಕ್ರಮವುಳ್ಳವನೆ ಬಾರಯ್ಯ ; ಓ ಗಜರಕ್ಷಕ [ಗಜೇಂದ್ರ ಮೋಕ್ಷ], ರಾಜಕುಮಾರ, ಓಂಕಾರಸದನ–ಓಂಕಾರದಲ್ಲಿ ನೆಲಸಿದವನೆ, ಭಾಗವತರಿಗೆ ಪ್ರಿಯನಾದವನೆ ; ಬಾಗುಗ–ಚೆನ್ನಾಗಿ ; ಬ್ರೋವವಯ್ಯ–ಕಾಪಾಡಯ್ಯ ; ತ್ಯಾಗರಾಜನಿಂದ ನುತಿಗೊಂಡ ಶ್ರೀರಾಮ ಚಂದ್ರನೆ ಬಾರಯ್ಯ.

105. ದರ್ಬಾರ್ : ಆದಿತಾಳ ತ್ಯಾಗರಾಜರು

ಪಲ್ಲವಿ : ನಾರದ ಗುರುಸಾಮಿ ಯಿಕನ್ನೈನ ನ
ನ್ನಾದರಿಂಪವೇಮಿ ಈಕರವೇಮಿ ||

ಅನುಪಲ್ಲವಿ : ಸಾರೆಕು ಸಂಗೀತ ಯೋಗ ನೈಗಮು ಪಾರಂಗತುಡೈನ ಪರಮಪಾವನ |

ಚರಣ : ಇತಿಹಾಸ ಪುರಾಣಾಗಮ ಚರಿತಮು ಲೆವಾರಿ ವಲ್ಲ ಗಲಿಗೇ
ಪತಿನಿ ದಾನಮಿವ್ವ ಬುದ್ಧಿ ಸತ್ಯಭಾಮಕೆಟುಲಗಲಿಗೇ
ದ್ಯುತಿ ಜಿತ ಶರದಭ್ರ ನಿನುವಿನಾ ಮುನಿ
ಯತುಲ ಕೆವರುಗಲಿಗೇ
ಕ್ಷಿತಿನಿ ತ್ಯಾಗರಾಜ ವಿನುತ ಸ
ನ್ಮಿತಿ ಚಿಂತ ದೀರ್ಚಿ ಪ್ರಹ್ಲಾದುನಿ ಬ್ರೋಚಿನ ||

ಅರ್ಥ : ಇಕನ್ನೈನ–ಇನ್ನಾದರೂ ; ನಾರದ ಗುರುಸ್ವಾಮಿಯೆ, ನನ್ನು–ನನ್ನನ್ನು ; ಆದರಿಂಪವೇಮಿ, ಆದರಿಸಬಾರದೆ ? ಈ ಕರವೇಮಿ–ಈ ನಿಷ್ಕರುಣೆಯೇಕೆ ? ಸಾರೆಕು–ಮತ್ತೆ ಮತ್ತೆ ; ಸಂಗೀತ, ಯೋಗ, ನಿಗಮ ಮುಂತಾದುವುಗಳಲ್ಲಿ ಪಾರಂಗತನಾದ ಪರಮ ಪಾವನ ಮೂರ್ತಿಯೆ, ನಾರದ ಗುರುವೆ ಏಕೆ ನನ್ನನ್ನು ಆದರಿಸೆ ?

ಇತಿಹಾಸ ಪುರಾಣ ಆಗಮ ಚರಿತ್ರ ಇವು, ಲೆವರಿಗಲ್ಲ ಗಲಿಗೆ–ಬೇರೆ ಯಾರಿಂದ ಉಂಟಾದುವು ನಿನ್ನಿಂದಲ್ಲದೆ ? ಸತ್ಯಭಾಮಕು–ಸತ್ಯಭಾಮೆಗೆ ; ಪತಿನಿ–ತನ್ನ ಪತಿಯನ್ನು ; ದಾನಮಿವ್ವ ಬುದ್ಧಿ–ದಾನ ಕೊಡುವ ಬುದ್ಧಿಯು ; ಎಟುಲ ಗಲಿಗೆ–ಹೇಗೆ ಉಂಟಾಯಿತು, ನಿನ್ನ ಕಾರಣದಿಂದಲ್ಲದೆ ? ದ್ಯುತಿಜಿತ ಶರದಭ್ರ–ಶರತ್ಕಾಲದ ಆಕಾಶವನ್ನು ಮೀರಿಸಿದ ನಿರ್ಮಲವಾದ ಕಾಂತಿಯುಳ್ಳವನೆ ; ನಿನುವಿನಾ–ನೀನಲ್ಲದೆ ; ಮುನಿ ಯತುಲಕು ಎವರುಗಲಿಗೆ–ಮುನಿಗಳಿಗೆ ಯತಿಗಳಿಗೆ ಬೇರೆ ಯಾರು ದಿಕ್ಕು ? ; ಕ್ಷಿತಿನಿ–ಈ ಭೂಮಿಯಲ್ಲಿ ; ತ್ಯಾಗರಾಜ ವಿನುತನೆ, ನಮ್ಮಿತಿ–ನಿನ್ನನ್ನೆ ನಂಬಿದ್ದೇನೆ. ಚಿಂತದೀರ್ಚಿ–ಚಿಂತೆಯನ್ನು ಹೋಗಲಾಡಿಸಿ ಪ್ರಹ್ಲಾದುನ ಬ್ರೋಚಿನ–ಪ್ರಹ್ಲಾದನಿಗೆ ಅನುಗ್ರಹವಿತ್ತ ನಾರದ ಗುರುವೆ ನನ್ನನ್ನು ಆದರಿಸು.